# ಶ್ರೀಮದ್ದಯಾನಂದರ್ಷಿ ಜೀವನಚರಿತಂ

ಸುಧಾಕರ

ಬೆಲೆ. ೧—೮—೦

ವೇದೋದ್ಧಾರಕ



ಮಹರ್ಷಿ ದಯಾನಂದ ಸರಸ್ವತೀ

ಓಂ

# ದಿವಂಗತ

# ಪೂಜ್ಯ ಮಾತೆ!

ನೀನು ನನ್ನನ್ನು ಹೆತ್ತು-ಹೊತ್ತು, ಸಾಕಿ-ಸಲಹಿ, ತಿರುಹಿ-ತಿದ್ದಿ, ಮಾನವನನ್ನಾಗಿ ಮಾಡಿದೆ. ಇಂದು "ನಾನೂ ಒಬ್ಬ ಕನ್ನಡಿಗ; ನಾನೂ ಒಬ್ಬ ಭಾರತೀಯ; ನಾನೂ ಒಬ್ಬ ವೇದಧರ್ಮಾನುಯಾಯಿ." ಎಂದು ಹೇಳಿಕೊಳ್ಳಬಲ್ಲೆನಾದರೆ ಅದು ನಿನ್ನ ಪ್ರಸಾದ. ಇಂದೂ ನಿನ್ನ ಆ ಪ್ರೀತಿಪೂರ್ಣವಾದ ನಗೆಮೊಗ ನನಗೆ ನೆನಪಿದೆ; ಸದಾ ನೆನಪಿಸುತ್ತದೆ. ಹೇ ಪರಮಾದರಣೀಯ ಜನನಿ! ನಾನು ನಿನ್ನ ಆ ಪವಿತ್ರ ಹಾಗೂ ಮಧುರವಾದ ಸ್ಮೃತಿಯಲ್ಲಿ, ಕೃತಾಂಜಲಿಯಾಗಿ, ನತಶಿರನಾಗಿ, ಈ ಕಾವ್ಯಕುಸುಮವನ್ನು ಸಮರ್ಪಿಸುತ್ತೇನೆ. ನಿನ್ನ ಆತ್ಮಕ್ಕೆ ಇದು ಪ್ರಿಯವಾಗಲಿ. ನೀನೆಲ್ಲಿಯಾದರೂ ಇರು; ನಿನ್ನಿಂದ ಇದು ಸ್ವೀಕೃತವಾಗಲಿ.

ನಿನ್ನ ನಚ್ಚಿನ ನಂದನ

**ಸುಧಾಕರ.**

|| ಓಂ ||

# ಒಂದು ಮಾತು

ನಾನು ಕಾವ್ಯಶಾಸ್ತ್ರ ವಿಶಾರದನಲ್ಲ: ಸಾಹಿತ್ಯರಂಗದಲ್ಲಿ ನಾನಿದುವರೆಗೂ ಕಾಲಿಟ್ಟವನಲ್ಲ. ಆದರೆ, ಒಂದುಗೂಡಿದ ಮತ್ತು ಒಡಕಿಲ್ಲದ ಕನ್ನಡನಾಡಿಗಾಗಿ, ಒಂದು ಹಾಡನ್ನು ಹಾಡಿಯೇಬಿಡಬೇಕೆಂಬ ಹುಚ್ಚು ಹತ್ತಿತು. ಹಾಡಿಬಿಟ್ಟೆ. ಕಾಲವಿಲ್ಲವೆಂದರು; ಬೇರೆಯವರಿಗೆ ತೋರಿಸಿ, ತಿದ್ದಿಸಿ, ಹಾಡೆಂದರು. ಆದರೆ, ಯಾವಾಗ ಹೊರಟಿತೋ ಆಗಲೇ ಹಾಡಬೇಕು; ಹೇಗೆ ಹೊರಟಿತೋ ಹಾಗೆಯೇ ಹಾಡಬೇಕು ಎಂಬ ಭಾವನೆ ಪ್ರಬಲಿಸಿತು, ಹಾಡಿಬಿಟ್ಟೆ. ಹಾಡಿನ ವಿಷಯವನ್ನು ನಾನು ಹುಡುಕಬೇಕಾಗಲಿಲ್ಲ. ನನ್ನ ಆಚಾರ್ಯನ ಜೀವನವೇ ಹಾಡಿನ ವಿಷಯವಾಯಿತು. ಅವನ ಸಂದೇಶ ಕನ್ನಡನಾಡಿನಲ್ಲಿ ಹರಡಬೇಕೆಂಬ ಗುರಿಯೊಂದು ನನಗಿದ್ದೇ ಇದೆ. ಇದರಿಂದ ಕನ್ನಡಿಗರಿಗೆ ಸಂತೋಷವಾದೀತೆಂಬ ನಂಬಿಕೆಯೂ ಇದೆ.

ಒಂದಿನವರಂತೆ, ನಾನೂ ಶಬ್ದ-ಪ್ರಯೋಗಕ್ರಮದಲ್ಲಿ ಕೊಂಚ ಉಚ್ಛೃಂಖಲನಾಗಿದ್ದೇನೆ. ಮೈಸೂರು-ಧಾರವಾಡ-ಮಂಗಳೂರು ಎನ್ನದೆ ಎಲ್ಲಡೆಯ ಶೈಲಿಯನ್ನೂ ತನ್ನದೆಂದೇ ತಿಳಿದು, ಬಳಸಿಕೊಂಡಿದ್ದೇನೆ. ಇದು ಅಭೀಷ್ಟವೆಂದೇ ನನ್ನ ನಂಬಿಕೆ.

ಇಷ್ಟು ದೊಡ್ಡ ಗ್ರಂಥವನ್ನು ನಾನೊಬ್ಬನೇ ಪ್ರಕಾಶಿಸಲಾಗುತ್ತಿರಲಿಲ್ಲ. ಕನ್ನಡಜನರು ನನಗೆ ಧನಸಹಾಯವನ್ನಿತ್ತಿದ್ದಾರೆ. ದೇಹಲಿಯ ಸಾರ್ವದೇಶಿಕ ಆರ್ಯಪ್ರತಿನಿಧಿ ಸಭೆಯವರ ಮತ್ತು ಮೈಸೂರು ಆರ್ಯಸಮಾಜದ ಶ್ರೀ|| ಧರ್ಮರಾಜ ಆರ್ಯರವರ ಸಹಕಾರಹಸ್ತವಿಲ್ಲದಿದ್ದರೆ – ಈ

ಕಾವ್ಯ ಒಂದು ಕನಸೇ ಆಗುತ್ತಿದ್ದಿತು. ಮೈಸೂರಿನ ಶ್ರೀ|| ಸಂಪತ್ಕುಮಾರ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ|| ನಾರಾಯಣರವರ ಉಪಕಾರವೂ ಅವ್ಯಕ್ತವಾದುದು. ಆರ್ಯಧರ್ಮೋಪದೇಶಕರಾದ ಶ್ರೀ|| ಸುಂದರ ರಾಯರೂ ನನಗೆ ನೆರವಾಗಿ ನಿಂತು ದುಡಿದಿದ್ದಾರೆ. ಇವರಿಗೆಲ್ಲಾ ನನ್ನೆದೆಯ ಸಾಲಗಾರತನವನ್ನು ಸೂಚಿಸಲು ಮಾತು ಸಾಲದು. ಸುಮ್ಮನೆ ತಲೆ ತಗ್ಗಿಸುತ್ತೇನೆ.

ಇಷ್ಟೆಲ್ಲ ಹೇಳಿದರೂ ಎಷ್ಟೋ ಎಚ್ಚರಿಕೆಯಿಂದಿದ್ದರೂ ಅಚ್ಚಿನ ತಪ್ಪುಗಳು ಅನೇಕ ಉಳಿದಿವೆ. ನನಗೆ ಗೊತ್ತಿಲ್ಲದೆ - ಇನ್ನೂ ಎಷ್ಟೋ ಬಗೆಯ ಕುಂದುಗಳಿರಬಹುದು. ಏನೇ ಆಗಲಿ; ತಪ್ಪುಗಳೆಲ್ಲಾ ನನಗೆ; ಒಪ್ಪುಗಳೆಲ್ಲಾ ಕನ್ನಡಜನರಿಗೆ. ಈ ಗ್ರಂಥವು ಕನ್ನಡಿಗ-ಕನ್ನಡಿತಿಯರ ಮೆಚ್ಚುಗೆಗೆ ಪಾತ್ರವಾದಲ್ಲಿ ನನ್ನ ಶ್ರಮಕ್ಕೆ ಫಲ ಸಿಕ್ಕಿದಂತೆಯೇ ಸರಿ. ಕನ್ನಡದವ್ವನ ಆಶೀರ್ವಾದವಿದ್ದಲ್ಲಿ ಮುಂದಕ್ಕೆ ಅವಧಿಯಲ್ಲಿ ಇನ್ನೂ ಕೆಲವು ಪುಸ್ತಕಗಳನ್ನಿಡುವ ಸೌಭಾಗ್ಯ ನನಗೆ ಸಿಕ್ಕಬಹುದು. ಪರಮಾತ್ಮನು ಆ ಸೌಭಾಗ್ಯವನ್ನು ಬೇಗ ಕಲ್ಪಿಸಲಿ

ಬೆಂಗಳೂರು.<br>೧—೧—೩೩.

ಕನ್ನಡಜನರ ಸೇವಕ<br>**ಸುಧಾಕರ.**

ಓಂ

# ಶ್ರೀಮದ್ದಯಾನಂದರ್ಷಿ ಜೀವನ ಚರಿತಂ.

—

## ಪೀಠಿಕಾ ಸಂಧಿ.

ಓಮಖಿಳ ಸುಖಧಾಮ ಕರುಣೋ
ದ್ದಾಮನಘನಿರ್ಣಾಮ ದೀನಾ
ರಾಮ ವಿಜ್ಞಲಲಾಮ ಪುಷ್ಕಳಸಾಮನುತನಾಮ |
ಸೋಮಜನಹಿತ ಕಾಮದಿಂದವಿ
ರಾಮವುಂ ತವನಾಮ ವಿಸರವ
ನಾಮನದೆ ಸಂಸ್ಮರಿಪೆ ಜಗತಿಯ ಹರಸು ಸಪ್ರೇಮ ||೧||

ಸುಗುಣಗಣಸಂಸಾರ ವಿಶ್ವದ
ಸೊಗಸಧನದಾಗಾರ ಸೌಂದರ
ಬಗೆಗೆ ಏಕಾಧಾರ ದ್ಯುವೀಜಗದ ದಾತಾರ |
ವಿಗತಬಲತ್ರಾತಾರ ಭಕುತರ
ಸೊಗವಸತ್ವದ ಸಾರ ಕವಿಜನ
ಬಗೆವ ಕೃತಿಶೃಂಗಾರ ಪಾಲಿಸು ಜಗವ ಪರಮಾತ್ಮ ||೨||

ಸಾರಿಮಣಿ ಪುಟ್ಟಾಂಬೆ ಪರಮೋ
ದಾರೆ ನನ್ನಯತಾಯಿ ಮತ್ತೀ
ಧಾರುಣೀ ತಳದೊಳಗೆ ನನಗೀ ಜನ್ಮವಿತ್ತವನು ।
ಕಾರುಣಿಕನಾ ಕೃಷ್ಣಶರ್ಮನು
ಧೀರಮತಿಯೀ ದೇವದೇವಿಯ
ದೋರಗೆಯರಂ ಕಾಣೆನಾಂ ಸೌಹಾರ್ದಧರ್ಮದಲಿ ॥೩॥

ಗೌತಮರ್ಷಿಯಗೋತ್ರ ಮಧ್ವ
ದ್ವೈತಮತ ಸಂಜಾತರಿವದಿರು
ಸಾತರಳನಹ ದಿನಗಳಲಿ ಮಜ್ಜನಕನೀಜಗವ ।
ತಾತೊರೆದು ನಿಜ ಜಾತಕೃವರ
ಮಾತೆಗೊಪ್ಪಿಸಿ ಪೋದನಾಪರ
ಮಾತುಮನನೇ ನಂಬಿ ನಮ್ಮನು ಪೊರೆದಳಾತಾಯಿ ॥೪॥

ಐದುಜನರಲಿ ಮೊದಲಿನಿರ್ವರಿ
ಗಾದುದಾಗಾರ್ಹಸ್ಥ್ಯ ಮೂರನೆ
ಸೋದರಂ ಯತಿದೀಕ್ಷೆತಳೆದನು ನಾಲ್ಕನೆಯನೆನಿಸಿ ।
ಸಾದಯಾನಂದಂಗೆ ಸೇವಕ
ನಾದೆ ತಮ್ಮನು ರಾಷ್ಟ್ರಪೂಜಕ
ನಾದ ತಾಯ್ಮರನೊಡೆದ ಕೊಂಬೆಗಳೆಂಬ ಬೆಡಗಿಂದ ॥೫॥

ತಾಂ ಸುಶಿಕ್ಷಿತನೆಂಬ ಪರವಿ
ದ್ವಾಂಸ ತಾನೆಂದೆಂಬ ಹೆಮ್ಮೆಯ
ನಾಂ ಸುಜನರಲಿ ತೋಡಿಕೊಳ್ಳೆನು ನೋಡೆ ವಾಸ್ತವದಿ |
ನಾಂ ಸುವಿದ್ವಜ್ಜನರಪದರಜ
ವೇಂಸಲುಗೆ ಶುಷ್ಕಾಭಿಮಾನದಿ
ತಾಂಸವಿತನೊಳತಿರುಳನರಿಯನೆ ಜಡರೆಪಾಠಕರು ||೬||

ಮತ್ತೆ ಕಾವ್ಯವರಚಿಪ ಹಂಬಲಿ
ದೆತ್ತಣದು ನನಗೆನಲು ಋಷಿವರ
ಹೊತ್ತಿಸಿದ ನನ್ನೆದೆಯ ದೀಪವನೊಳಗೆ ನಂದಿಸದೆ |
ಕತ್ತಲಲಿ ತಡವುತ್ತ ನಡೆಯುವ
ಹತ್ತುಮಂದಿಗೆ ಬೆಳಕತೋರಿಸ
ಲೆತ್ತಿಹಿಡಿಯುವ ಸಾಹಸವಿದೆಂದರಿವುದೋದುಗರು ||೭||

ಆ ದಯಾಕರನಾದ ಸನ್ನುತ
ಪಾದ ಸತ್ಯವಿನೋದ ಧರ್ಮನಿ
ನಾದ ಸಂಶೃತವೇದ ದೀನಾಮೋದನವಿವಾದ |
ವಾದಿಭೀಕರವಾದ ಖಂಡಪ್ರ
ಮಾದ ಶುಭಸಂವಾದ ವಿಭುಸಂ
ಪಾದಕ ದಯಾನಂದನೊಬ್ಬನೆ ನನಗೆ ಗುರುವಾದ ||೮||

ಆಗುರುವು ನನಗಾತ್ಮದಾನಪ
ಬೇಗ ಕರುಣಿಸಿ ಕೃತಕಥಷ್ಮವ
ಸೋಗ ಸಡಲಿಸಿ ಮನುಜನೆನಿಸುಪಕಾರಭಾರವನು |
ಬಾಗುಪಂತಿರಿಸಿದನು ತಲೆಯೊಳ
ಗೀಗಲಿಳಿಸುವ ಬಗೆಯನೀಕೃತಿ
ಕೈಗೆ ಕೊಂಡೆನು ಹತ್ತುಮುಂದಿಗ ಹಂಚೆ ಬುತ್ತಿಯನು ||೯||

ದೇವಿ ಕನ್ನಡ ತಾಯಿಮಕ್ಕಳು
ಭಾವುಕರು ಪರರುಡಿಗೆ ತೊಡಿಗೆಯ
ನಾವುದಾವುದನಾರಿಸೇರಿಸಿ ನಿನ್ನಸಿಂಗರಿಸಿ |
ತಾವು ನಲಿದಪರೀದಿನಂಗಳ
ಲಾವುದನು ಮಾನೆಸಗೆ ನಿನ್ನಯ
ಸೇವೆಯೊಂದನೆ ಬಯಪೆಹೊಮ್ಮಾತ್ರೊವಳುಮಾತಿನಲಿ ||೧೦||

ತಾಯಿ ಕನ್ನಡದೇವಿ ಕಂದನ
ಕಾಯಿ ಭೂಷಣವಸ್ತ್ರವೆಲ್ಲವ
ನೀಯವನಿಯಲಿ ಹಿಂದಣರು ನಿನಗಿತ್ತುದನೆ ಮರಳಿ |
ನಾಯತುನದಿಂ ತೊಡಿಪೆ ಭಾವ
ಧ್ಯೇಯವೆಲ್ಲವು ನೀನೆ ನಾಲ್ಗೆಯಿ
ದಾಯಸಂಬಡದಂತೆ ನರ್ತಿಸು ನೀನೆನೀನಾಗಿ ||೧೧||

ಬೆಂಗಳೂರಿನಲುದಿಸಿ ವಿದ್ಯಾ
ಮಂಗಳವ ಲವಪುರದಿ ಸಂಗ್ರಹಿ
ಸಂಗವಡೆಯಲು ಭಕ್ತಿಯಿಪ್ಪತ್ತೈದು ವರ್ಷಗಳ |
ಸಂಗಮಿತವಯದಲ್ಲಿ ವಿಕ್ರಮ
ಹಿಂಗೆ ಹತ್ತೊಂಬತ್ತುನೂರರ
ಸಂಗ ತೊಂಬತ್ತಾರುವರ್ಷವನೋದಿದೆ ಕಾವ್ಯವನು ||೧೨||

ನವಸುಧಾರಸ ರಸಿಕರಪ್ಪಜ
ನವಸುಧಾರಕವೆನಿಸೆ ಮಾನಧ
ನವಸುಧಾತಳಮೆನಿಸೆ ಸತ್ಯೋಪಾಸಕಾಂಬುಧಿಗೆ |
ನವಸುಧಾಕರನೆನಿಸೆ ಜಗತಿಯ
ನವಸುಧಾರಕ ಚರಿತಮೊರೆದವ
ನವ ಸುಧಾಕರನೆಂದು ವಿದ್ವಜ್ಜನರು ಭಾವಿಪುದು ||೧೩||

ಪಂಡಿತನು ನಾನಲ್ಲ ಪರಮತ
ಖಂಡನಂ ಮತಮಲ್ಲ ಸತ್ಯದ
ಮಂಡನಕೆ ವಿರಚಿಸಿದ ಕಾವ್ಯವಿದೆಂದು ಸಜ್ಜನರು |
ತಂಡದಲಿ ನೆರೆದೋದೆಕಾಂಬರ
ಖಂಡತೇಜವ ತಾವರೆಗಮುಳಿ
ದಿಂಡು ಮುತ್ತದೆ ಬಗೆವುದೇ ಕೆಸರದಕೆ ಮನೆಯೆಂದು ||೧೪||

ಮುರುಕದಲಿ ನಲಿವಾತ ಜಲನಿಧಿ
ನಿರುಕಿಸಲು ಕಾವ್ಯಾಂಬುವೆರ್ಚಿಸಿ
ಹರಿಯಿಪನು ಹಿಮಕಿರಣ ಹೊಮ್ಮಿದ ಸತ್ಯಲಹರಿಯಲಿ |
ಮೆರೆದು ಬಾಳ್ಕೆಯನಾಳ್ದವರುವರ
ಗುರುಕುಲೀಯರು ಬಿಂಬಿಸುವ ಮಿರು
ಮಿರುಪಕನ್ನಡಿ ಲಲಿತ ಕನ್ನಡವೆನಲು ಮರುನುಡಿಯೆ ||೧೫||

ಪರಸು ಹರಸೋಂಕಾರ ಚಿತ್ತ್ರದ
ಕಿರಮೆ ಪರಮೋದಾರಯಿಳಿಸೆ
ಸ್ವರದ ಶಾಂತಿಯಭಾರ ತುಂಬೀ ಕಾವ್ಯದಲಿಸಾರ |
ಗಿರಿಸವನೆ ದಯೆದೋರು ನನ್ನೆದೆ
ತೊರೆಗೆ ನವರಸನೀರ ವಿದ್ವ
ದ್ವರ ಸುರಕೃತಿಗಾರ ತುಂಬಿಸು ಭಾವಪರಿವಾರ ||೧೬||

— **ಇಂತು ಪೀಠಿಕಾಸಂಧಿ** —

ॐ

# ಒಂದನೆಯ ಸಂಧಿ

ಸೂಚನೆ:—ಶಂಕರನ ದಯದಿಂದ ವಿಪ್ರಗೆ
ಶಂಕರಂ ಜನಿಸುತ್ತ ಶಂಕರ
ಕಿಂಕರರು ಕಾಣದುದ ಕಂಡನು ಶಂಕರಾಲಯದ ||

ಕೇಳಿ ಗುರುಕುಲವಾಸಿಗಳೆ ನೀ
ವ್ಹಾಳಿಗೊದಗುವ ನವ್ಯಚರಿತವ
ಬಾಳನೀ ಎರಕವಲೆಹೊಯ್ಯುತ ಧರ್ಮದಚ್ಚಿನಲಿ |
ಬಾಳಿ ದೇವರದೇವ ಜೀವದಿ
ರೇಳಿಗೆಯಸಲುವಾಗಿ ಕಡುತಿಮಿ
ರಾಳಿಯಲಿ ನವದ್ಯುತಿಯಹೊಳೆಪನು ತಂದೆಯಳ್ತಿಯಲಿ ||೧||

ಜ್ಞಾನದೀಪಿಗೆಯಾರಿ ನರರ
ಜ್ಞಾನತಿಮಿರದಿ ಮುಗ್ಗರಿಸುತಿರೆ
ದೀನರೆದೆಗಳಲಾಶೆ ತುಂಬುತ ನಮ್ಮಭಾರತವ |
ಬಾನಿನಲಿತಾಂ ನವದಶಮ ಶತ
ಮಾನದೊಳ್ಕ್ರಿಸ್ತಾಬ್ಧ ಗಣನಾ
ಮಾನದಿಂದಿಪ್ಪತ್ತುಸಾಲ್ಕರೊಳಾಯ್ತು ಬೆಳಕೊಂದು || ||೨||

ಭಾರತಿಯ ಕೈನೆಳಲನಾಂತಿಹ
ವೀರಗುರ್ಜರನಾಡ ಮಧ್ಯದಿ
ಮೋರವೀನಾಮಕದ ರಾಜ್ಯಂ ಕಂಗೊಳಿಸುತಿಹುದು।
ತೋರತುತ್ಸವ ರಾಜಿಯಂ ಟಂ
ಕಾರಪುರಮಲ್ಲಿಹುದು ವಿಪ್ರನು
ಪಾರಹಸ್ತಂ ಕೃಷ್ಣನೆಂಬವನಿರ್ದನಾಪುರದಿ॥ ॥೩॥

ಹಿಂದೆಮಾಡಿದ ಕರ್ಮಗಳ ಫಲ
ಮಿಂದು ಲಬ್ಧಿಸಿತೆನಲವನ ಸತಿ
ಯಂದಮಿಗೆ ಧರಿಸಿದಳು ಗರ್ಭವ ಕಳೆಯೆ ನವಮಾಸ।
ಒಂದು ಶುಭದಿನ ಕಳಕಳಿಸುವೆಳೆ
ಚಂದಿರಗೆ ಸವನಪ್ಪ ಸುಂದರ
ಕಂದನಂ ಪ್ರಸವಿಸಿದಳದ್ಭುತವೆನಲು ವೈಭವದಿ॥ ॥೪॥

ಪ್ರೀತಿಯಿಂದಾ ತಂದೆತಾಯ್ಗಳು
ಜಾತಕರ್ಮಾದಿಗಳ ನಿಜಕುಲ
ನೀತಿಗನುಮತವೆನಲು ವಿರಚಿಸಿ ಭೂಸುರವ್ರಜಕೆ।
ರೀತಿಯಿಂದಕ್ಷಿಣೆಯ ಸಲ್ಲಿಸಿ
ಜಾತನಂಕೂಗಿದರು ಭಾಗ್ಯವಿ
ಧಾತನಂ ಶ್ರೀ ಮೂಲಶಂಕರನೆಂದುಚಿತದಿನದಿ॥ ॥೫॥

ಅಚ್ಚುಮೆಚ್ಚಿನ ಮೂಲಶಂಕರ
ಸಚ್ಚರಿತ್ರತೆಯಿಂದಲೆಲ್ಲರ
ಮೆಚ್ಚಿಸುತ ಬೆಳೆದಿರಲು ಕತಿಪಯವರ್ಷವನುವಿಂದ |
ನಚ್ಚುಮಗನಾಟಕ್ಕೆ ನಲಿವೊರೆ
ವಿಚ್ಚಿ ಬೊಂಬೆಯನಾಲ್ಕ ಮಮತೆಯ
ಹುಚ್ಚಿತಾಯ್ಕೊಟ್ಟಳೆನೆ ಪಡೆದಳು ಪುತ್ರಪುತ್ರಿಯರ || ||೬||

ಇರ್ವರಿರ್ದರು ತಮ್ಮದಿರು ಮೇ
ಣಿರ್ವರಾದರು ತಂಗಿಯರುತಾವ್
ಸರ್ವಜನರಂ ಮೋಹಗೊಳಿಸುತ ಶಂಕರಾದಿಗಳು |
ಕೊರ್ವಿಬೆಳೆದಿರೆ ಪ್ರೇಮಸುಧೆಯನೊ
ಸರ್ವ ದರ್ಪಣ ಪಂಚಬಿಂಬಿತ
ಶರ್ವರೀಕಾಂತನೆನಲ್ಕೈವರು ರಂಜಿಸುತ್ತಿಹರು || ||೭

ವತ್ಸರಾಷ್ಟಕ ಕಳೆಯೆ ಜನಕನು
ವತ್ಸನಿಂಗುಪವೀತ ವರಮಹ
ದುತ್ಸವವ ರಚಿಸಿದನು ವೈಭವದಿಂದ ನಲಿವಿಂದ |
ಕುತ್ಸಿತದ ಭವರೋಗಕೇಕಚಿ
ಕಿತ್ಸೆ ಶಿವಪೂಜೆಯದ ಸಂತತ
ಸತ್ಸಮಾಗಮದೊಳಗೆ ಮಾಡೆಂದೊರೆವನಡಿಗಡಿಗೆ || ||೮||

ತಂದೆ ಹಿರಿಯರು ಗೈದರೀತಿಯ
ಲಿಂದು ಶಿವಪೂಜಾವ್ರತಂಗಳ
ನಿಂದ ಮನದಿಂದಾಚರಿಸುವುದೆ ಮೋಕ್ಷಸಾಧನೆಗೆ ।
ಕಂಡ ನಿಶ್ಚಿತಮಾರ್ಗಮುಹುದದ
ರಿಂದ ಮಣ್ಣಿನಲಿಂಗ ರಚಿಸಾ
ನಂದದಿಂ ಪೂಜಿಸುವುದೆಂದು ಸುತಂಗೆಬೋಧಿಸುವ ॥ ॥೯॥

ಮೂಲಶಂಕರ ಪಿತನನುಡಿಗಳ
ನಾಲಿಸುತ ಮನವಿತ್ತು ನಿಯಮದ
ಪಾಲನದಿ ಸಂಧ್ಯಾದಿಪೂಜಾವಿಧಿಗಳಲಿ ತೊಡಗಿ ।
ಕಾಲಕಾಲಕೆ ಮಣ್ಣಲಿಂಗವ
ನೋಲಯಿಸಿ ಪೂಜಿಸುತ ಬೆಳೆದನು
ಕೂಲವಾತಾವರಣದಲಿ ದಶವರ್ಷದವನಾದ ॥ ॥೧೦॥

ನಂದ ಶೈವೋಪಾಸನಾಕ್ರಮ
ದಿಂದ ಶಂಕರ ವರ್ಧಿಸುತ್ತಿರೆ
ತಂದೆ ತನ್ನಂದದೊಳೆ ಮಗನುಂ ಸಂಪ್ರದಾಯದಲಿ ।
ಮುಂದಕುಪವಾಸಾದಿಗಳನನು
ವಿಂದ ಪಾಲಿಪುದೆಂದು ಮೂಲನ
ಚೆಂದದಿಂ ಪ್ರೇರಿಸುತಲಿರ್ದನು ಕಾಲಕಾಲದಲಿ ॥ ॥೧೧॥

ಮಗನು ಬಾಲ್ಯದಲಾಟಪಾಠದ
ಸೊಗದಲಿರುವುದನುಳಿದು ಕಾಯುವ
ಬಗೆಬಗೆಯೊಳಂದಂಡಿಪವ್ರತ ಪೂಜೆನಿಯಮಗಳ ।
ಬಿಗುವಿನಿಂದಾಚರಿಪುದಂ ಕಂ
ಡೊಗೆದ ಮಮತಾಮೂರ್ತಿಮಾತೆಯು
ಮಿಗೆನಯದಿ ಬೇಡೆಂದು ನುಡಿವಳು ಭರ್ತೃದೇವನಲಿ ॥ ॥೧೨॥

ಆದೊಡಂ ಶಿವಪೂಜನೋತ್ಸುಕ
ನಾದ ವಿಪ್ರನು ತನ್ನಸತಿಯಳ
ಕಾದು ಪೇಳಿದನುಡಿಗೆ ನಿಜನಿಶ್ಚಯವ ಹರಿವಿಡದೆ ।
ಪೋದಪಂ ಸುತನೊಡನೆ ಶಿವಕಥ
ನಾದಿಕೂಟಂಗಳಲಿ ಮನದೊಳೆ
ಮೋದಿಮಗನಲಿ ಕರ್ಮಕಾಂಡಪ್ರೇಮವಂ ಬೆಳೆಸೆ ॥ ॥೧೩॥

ಮೆರೆದ ಶಾಸ್ತ್ರಾಧ್ಯಯನದಲಿ ಪಿತ
ನೊರೆದ ಪೂಜಾವ್ರತದ ನೇಮದಿ
ನೆರೆಬೆಳೆದು ಹದಿನಾಲ್ಕುವರ್ಷದನಾಗೆ ಶಂಕರನು ।
ಬರಿಸಬರಿಸಕೆ ಬರ್ಪಬಗೆಯಲಿ
ಪರಿಸವೆರ್ಚಿಸಿ ಶುಭದಿ ಬಂದುದು
ಪರಮಪಾವನಮೆನಿಪ ಶಿವರಾತ್ರಿ ಸುಖದಾತ್ರಿಯದು ॥ ॥೧೪॥

ಪುತ್ರಶಿವರಾತ್ರಿಯಿದು ಪರಮಪ
ವಿತ್ರ ದಿವದೊಳುವರ್ಜಿಸನ್ನವ
ನುತ್ರಿನೇತ್ರನ ರಾತ್ರಿಜಾಗರಣದಲಿ ಪೂಜಿಸಲು ।
ಪತ್ರಪುಷ್ಪಗಳಿಂದ ಶಿವಸ
ರ್ವತ್ರವಭಯವನೀವನೆಂದು ಧ
ರಿತ್ರಿಸುರ ಬಣ್ಣಿಸಲು ಶಂಕರನೊಲ್ಲೆನಾನೆಂದ ॥ ॥೧೫॥

ಮಗನೆ ನೀನೀರಾತ್ರಿ ಶಿವನಂ
ಬಿಗಿದ ಮನದಿಂದರ್ಚಿಸಲು ಸಲೆ
ಸೊಗದಿ ಬಾಳುವೆನಾಕದಲಿ ಭವರೋಗಭಯವಿಲ್ಲ ।
ನಗಸುತಾಧವ ನಲಿದು ನಿನ್ನಲಿ
ಬಗೆವನಾತ್ಮೀಯತೆಯನದರಿಂ
ವಿಗತಸಂಶಯನಾಗಿ ಪೂಜಿಪುದೆಂದನಾತಂದೆ ॥ ॥೧೬॥

ಪಾರ್ವನೀತೆರದಿಂದ ಬಣ್ಣಿಸೆ
ಪಾರ್ವತೀಶನ ವಿದಿತಮಹಿಮೆಯ
ಸಾರ್ವಸೊಗಸಿನ ಸೊಲ್ಲು ಸೋಲಿಸೆ ಸರಸಚಿತ್ತವನು ।
ಪಾರ್ವನಾತ್ಮಜನೊಪ್ಪಿಕೊಂಡನು
ಪಾರ್ವನೇ ಸ್ಥಿರಸುಖವ ದ್ವಿಜಸತಿ
ಯೋರ್ವಳುಸುರಿದಳೀವ್ರತಂ ಪುತ್ರಂಗೆ ಬೇಡೆನುತ ॥ ॥೧೭॥

ಎಂದ ಸತಿಯುಳಿವಚನ ಗಣಿಸದೆ
ತಂದೆ ಪೂಜಾವಿಧಿಗಳೆಲ್ಲವ
ನಂದು ವಿವರಿಸಿ ದೂಡವೇಳ್ಪುದು ನಿದ್ದೆಯನುದೂರ |
ಕಂದ ಚಣಮೊಂದಾದೊಡಂ ನೀ
ನಿಂದು ರಾತ್ರಿಯಲೊರಗೆ ಫಾಲಾ
ಕ್ಷಂ ದಯೆಯತೋರಿಸನು ವ್ರತನಿಷ್ಫಲಮೆನಿಪುದೆಂದ ||೧೮||

ಊರಹೊರಗಣ ಶಿವನಗುಡಿಯಲಿ
ಸೇರಿ ನಗರದ ಭಕ್ತರೆಲ್ಲರು
ಮೀರುವಾನಂದದಲಿ ರಾತ್ರಿಯ ಪೂಜೆಗಳಸಲಿಸಿ |
ಮೂರುಕಂಗಳ ದೇವ ದಯೆಯಿಂ
ಧಾರುಣಿಯ ಪರಿಪಾಲಿಸೆನ್ನುತ
ಕೋರುವರ್ ಪ್ರತಿವರ್ಷತಪ್ಪದೆ ಭಕ್ತಿಭಾವದಲಿ || ||೧೯||

ಅಂದು ನೆಲವಂತೊಳೆದು ಸರ್ವಸು
ಗಂಧ ಜಳದಿಂ ತಳಿರುತೋರಣ
ಮಂದ ಮಿಗೆವಿರಚಿಸುತ ನಾನಾವರ್ಣದಲರಿಂದ |
ಹೊಂದಿಸುತ ತವೆ ರಂಗವಲ್ಲಿಯ
ಮಂದಿರವ ಸಿಂಗರಿಸಿದರು ಹೃ
ತ್ಸುಂದರತೆಯೇ ಹೊರಗೆಸೂಸಿದುದೆಂಬ ಬೆಡಗಿಂದ|| ||೨೦||

ನಾಗರಿಕರಾನಂದದಿಂ ಬೆರ
ಗಾಗಿ ದಿನಕರದೇವಮುನದಲಿ
ಪೋಗಿನಾಂ ಪಶ್ಚಿಮುವಜಲಧಿಗೆ ಜಗದಿಸಿಗದಿರ್ಪ |
ಜಾಗರಣಕಾರನಿಗೆ ಮಾತ್ರವೆ
ದೇಗುಲದಿ ಲಬ್ಧಿಸುವ ರತ್ನವ
ಜೇಗತಂದಪೆನೆಂದು ಪೋಪಂತಸ್ತಗತನಾದ || ||೨೧||

ಪೊಂದು ನಿರ್ಮಳಜಳದಿ ಹೃದಯಾ
ನಂದ ಹೊರಸೂಸುತಿರೆ ವದನದಿ
ಬಂದುನೆರೆದುದು ಶುಭ್ರವಸ್ತ್ರದ ಶುಭವಿಭೂತಿಗಳ |
ಪೊಂದಳೆದ ಕೈನೀರಕಲಶದ
ತಂದ ಫಲಪುಷ್ಪಗಳ ತಟ್ಟೆಯ
ಸಂದಣಿಸಿ ಬಹ ಭಕ್ತಮಂಡಲಿ ಶಿವನಮಂದಿರದಿ || ||೨೨||

ಮುಂದೆ ನಡೆದಿರೆ ತಂದೆ ಬಾಲಕ
ನೊಂದು ಕರದಲಿ ನೀರಕಲಶವ
ನೊಂದರೊಳಗರ್ಚನೆಯ ಸಾಮುಗ್ರಿಗಳ ತಟ್ಟೆಯನು |
ಅಂದ ಮಿಗೆಧರಿಸುತ್ತ ಮುಗುಟದ
ಸಂದ ವಿಮಲವಿಭೂತಿ ಫಾಲದ
ಕುಂದುಗಾಣದ ಸುಂದರಾಂಗನು ಮೆಲ್ಲನೈತಂದ || ||೨೩||

ವಿವರಿಸಲು ಶಿವರಾತ್ರಿಯರ್ಥವ
ಶಿವನು ಸುಂದರಬಾಲರೂಪದಿ
ನವತರಿಸಿತೆಂಬೊಂದು ಬೆಡಗಿಂದಂದು ರಾತ್ರಿಯಲಿ ।
ಜವದಿನಾಹದಿನಾಲ್ಕು ವರ್ಷದ
ಭುವನವಂದಿತ ಮೂಲಶಂಕರ
ಶಿವನದೇಗುಲಕಿಂತು ಬಂದನು ಪಿತನಸಂಗಾತ ||೨೫||

ಮೊದಲಜಾವದ ಪೂಜೆವೈಭವ
ಮೊದವೆ ವಿಧಿಪೂರ್ವಕದಲೇ ನಡೆ
ದುದು ಮುದಂ ಮಿಗಿಲಾದರೆರಡನೆಜಾವಸನಿಯುವರೆ ।
ಒದರಿ ತನ್ನಯ ಬಲೆಯ ನಿದ್ರಾ
ಸುದತಿ ಹಾಸಲು ಭಕ್ತಮಂಡಲ
ಮುದುರಿತೊಂದೆಡೆ ಕೆಲರುಮಾತ್ರವೆ ಪೂಜೆಸಲಿಸಿದರು ||೨೬||

ಕದ್ದುಪೋಗಲು ತಮ್ಮ ತಿಳಿವನು
ನಿದ್ದೆವೆಣ್ ಮೈಮರೆದು ಭಕ್ತರು
ಬಿದ್ದರೊಮ್ಮೆಯೆ ನೆಲದಿ ಮೂರನೆಜಾವ ಮೊದಲಾಗೆ ।
ಇದ್ದಬಯಕೆಗಳೆಲ್ಲ ಮಣ್ಣನ
ಮುದ್ದೆಯಾದುವು ತೆಗೆವಗೊರಕೆಯ
ಸದ್ದೆ ಶಂಕರಸವನಮಾದುದು ಶಿವನಮುಂದಿರದಿ ||೨೭||

ಭಕ್ತರೆಲ್ಲರು ಮಲಗಿ ನಿದ್ರಾ
ಸಕ್ತರಾದುದ ಕಂಡು ಪೂಜೋ
ನ್ಮುಕ್ತರಾಗುತಲರ್ಚಕರು ಕ್ತೈಕಾಲಚಾಚುತಲಿ |
ನಕ್ತವಲಿ ಮೈಮರೆಯೆ ಭಾವೋ
ಪ್ರಕ್ತಚಿತ್ತನು ಬಾಲಕಂ ಸುವಿ
ುಕ್ತಸತ್ವನು ಕುಳಿತು ಜಾಗ್ರತನೊರ್ವನೇಮರೆದ ||೨೭||

ಅಂದು ನಿದ್ರಾಸಕ್ತರಹ ಕೆಲ
ಸಂಪ ಭಕ್ತರಿಗೆಲ್ಲ ತಾನೇ
ಮುಂದೆನಿಸಿ ನಿಜಜನಕಮಲಗಿರೆ ಶಿವನದೇಗುಲದಿ |
ಬಂಮುದೇಕೆಂಬುದನು ತಿಳಿಯದೆ
ಸಂದಶಿವಲಿಂಗದೆಡೆ ಕಾಲ್ಗಳ
ತಂಮುಬಿಳ್ದರಕಂಡು ಬಾಲಕಸೋಜಿಗಂಬಡೆದ ||೨೮||

ನೀಳಚಾಚಿದ ಕೈಯಕಾಲ್ಗಳ
ನೇಳುಗೊಂಡಿದಮುಂಡದೇಶದ
ಬೀಳುವಲೆಗಳ ಬಿಗಿದಕಂಗಳ ಬಿಚ್ಚುಬಾಯಿಗಳ |
ಕೀಳು ಜೊಲ್ಗೆರೆದಳೆದ ಕೆನ್ನೆಯ
ಕಾಳನಾಗನತೆರದ ಸುಯ್ಲಿನ
ಫಾಳನೇತ್ರಾರ್ಚಕರ ಕಂಡಾತರಳ ಬೆರಗಾದ ||೨೯||

ಬಣ್ಣಿಸುತ ಪಿತನೊರೆದುದಂ ಕಡೆ
ಗಣ್ಣನಿಂ ನಿಟ್ಟಿಸದೆ ನೆನೆಯುತ
ಕಣ್ಣನೆವೆಗಳು ಸೇರಿಕೆಡುವುದು ತನ್ನವ್ರತವೆಂದು ।
ತಣ್ಣನೆಯ ಜಲಬಿಂದು ಚಿಮುಕಿಸಿ
ಕಣ್ಣ ನಾಲಸ್ಯವನು ಕಳೆಯುತ
ಸಣ್ಣಬಾಲಕನಂದು ಕುಳಿತನು ಶಿವನಮುಂದಿರವಿ ||೩೦||

ನೆರೆದ ನೆರೆಗೂದಲಿನ ಮುದುಕರು
ತರುಣವಯರಪ ಭಕ್ತರುಂ ಕೂ
ಡೊರಗಿರಲು ವೃಷುರಿಮ ನಿವಾ್ರಸುದತಿಯಂಕದ ।
ನೆರೆದ ಭಕ್ತಿಯ ಸುರಿವ ಪ್ರೇಮದ
ತೆರೆದ ಕಂಗಳ ಬಿರಿದಹೃದಯದ
ತರಳನೊರ್ವನೆ ಕುಳಿತನಿಶೆಯುಂ ಶಿವನ ಮುಂದಿರದಿ ||೩೧||

ಕೆಲದವರು ವೃಮರೆಯಲಿಲಿಗಳು
ಹಲವುಚಂಚಲ ನೇತ್ರವರಳಿಸಿ
ಬಿಲವನಗಲ್ವಿತಂದು ಶಿವಪಿಂಡಿಕೆಯಮೇಲಡರಿ ।
ನೆಲಕೆ ಧುಮುಕುತೆ ಮುಂದೆಪೇರಿಸಿ
ದೊಲವನ್ನೈವೇದ್ಯಗಳ ಭುಂಜಿಸಿ
ಹೊಲಸ ಹರಡುತ ಕುಣಿಯುತಿರ್ಪುದತರಳನಿಟ್ಟಿಸಿದ ||೩೨||

ಬೂದಿಯಿಂ ಮೂಸಿರ್ಪಕೆಂಡವ
ಸೂದಿ ಸಮಿಧಾಘೃತವನೀಯಲು
ಕೋಡು ಭುಗ್ಗೆನುವಂತೆ ಬಾಲಕನುತ್ತಮಾಂಗದಲಿ |
ಆವಿಯಲಿ ಹುದುಗಿರ್ದ ಬುದ್ಧಿವಿ
ಸೋವವೆನುವಂತಿಲಿಗಳಳುಕದೆ
ಹಾಮು ಶಿವಲಿಂಗವನು ತುಳಿವುದ ಕಂಡುದಳ್ಳಿಸಿತು ||೩೩||

ಅರರೆ ಕತೆಯಲಿ ಬಣ್ಣಿಸಿಹ ಶಿವ
ನಿರುವ ಕೈಲಾಸದಲಿ ಪಿಡಿವನು
ಕರದಿ ನಾನಾಶಸ್ತ್ರಗಳ ಡಮರುಗವ ಬಾರಿಪನು |
ಪೆರ್ದು ಗೂಳಿಯಮೇಲೆ ಕೊಲುವನ
ಸುರರ ಕರುಣಿಪ ವರವ ಶಾಪವ
ಕರೆದುಕೊಡುವವನಿವನೆ ಸೋಜಿಗವೆಂದನಾತರಳ ||೩೪||

ಪರಮಭಕ್ತರಸಲಹಿ ಹಿಂಸಾ
ಪರರ ಸದೆಯುವ ಪರಮಬಲನೀ
ತೆರದಿ ಹೊಲಸನು ಪಸರಿಸುವ ಮೂಷಿಕಸಮೂಹವನು ||
ಸಿರದಮೇಲಿಂದೂಡದಿರ್ಪನೆ
ಧರೆಯಲೆಳ್ಳಿನಿತಲುಗಲಮ್ಮದ
ಕರಿಯಕಲ್ಲೇ ಶಿವನೆ ಸೋಜಿಗವೆಂದು ಯೋಚಿಸಿದ ||೩೫||

ಈತನೇ ಶಿವನಾದೊಡಿಂತು
ತ್ಪಾತಗೈಯುವ ಮೂಷಿಕಂಗಳ
ನೇತಕೋಡಿಸನಕಟ ತನ್ನಯ ತಲೆಯಮೇಲಿಂದ |
ಘಾತಿಸಿದೊಡಂ ಕ್ಷುದ್ರಜಂತುಗ
ಳೀತನಲುಗನೆ ಜಡನಿವಂ ಜಗ
ತೀತಳೇಶ್ವರನೆಂತೊಸೋಜಿಗವೆಂದು ಯೋಚಿಸಿದ ||೩೬||

ಒಳಗುದಿತ ಸಂಶಯವನದುಮುತ
ಕಳೆದು ಹಲಚಣಗಳನು ತನ್ನೆದೆ
ಬೆಳಕಮುಚ್ಚಿಡಲಮ್ಮದಿರೆ ನಿದ್ರಿಸಿದ ಜನಕನನು |
ತಳಿರಕರದಿಂ ಸ್ಪರ್ಶಿಸೆಬ್ಬಿಸಿ
ಮೊಳೆತ ಶಂಕೆಯ ನಮ್ರವಚನಾ
ವಳಿಯಲುಸಿರಿದನಾ ತರಳ ಜಿಜ್ಞಾಸುಭಾವದಲಿ ||೩೭||

ಆವನನು ಕತೆಗಳಲಿ ಬಣ್ಣಿಸಿ
ಕಾವನಂದುಸಿರಿದಿರೊತನ್ಮಹ
ದೇವನಿವನೋ ಮೂಷಿಕವ್ರಜದಿಂದ ಕೊಳೆಯಾದ |
ಈವಿಗತಬಲ ಮೂರ್ತಿ ಬೇರೆಯೊ
ತಾವಿದಂ ತಿಳುಹಿಸಿರೆನುತವಿನ
ಯಾವನತನಾಬಾಲ ನಿರ್ಭಯನಾಗಿ ಬೆಸಗೊಂಡ ||೩೮||

ಕಂಗಳಿಂದುದುರುತಿರೆ ಕೋಪದ
ಕೆಂಗಿಡಿಗಳಾತಂದೆ ತನ್ನಸು
ತಂಗೆ ಪಾತಕಿಧೂರ್ತನೀನೀತೆರದ ಬಿರುನುಡಿಯ |
ನುಂಗದಿಂತುಸಿರುವರೆ ನಾಲಿಗೆ
ಹಿಂಗಿಹೋಗದೆ ಶಿವನಪೂಜಾ
ಭಂಗಗೈವರೆ ಸುಮ್ಮನಿರೆನುತನುಡಿದ ಗರ್ಜಿಸುತ ||೩೯||

ಅಂತರಂಗದ ದಿವ್ಯಬೆಳಕನ
ದೆಂತೊಕೊಂಡಿಹ ವರಮುಹಾತ್ಮನ
ದೆಂತು ಬೆದರಿಕೆಗಳಿಗೆ ಮಣಿದಪನಾತರಳ ಮುಂಳಿ |
ಪಿಂತೆವರ್ಣಿತ ಗುಣವನೀಕ್ಷಿಸೆ
ಕಂತುಹರ ಚೈತನ್ಯನೆನ್ನಿಪ
ನೆಂತು ಮೂಷಿಕಗಳಿಗೆ ಸೋಲ್ದಪನೆಂದು ಬೆಸಗೊಂಡ ||೪೦||

ತಂದೆ ಮನ್ನಿಸಿ ನಾನೆ ಬಹುತೆರ
ದಿಂದ ಚಿಂತಿಸಿ ಪಾರಗಾಣದೆ
ಬಂದು ತಮ್ಮಡಿಗಳಿಗೆ ತೊಂದರೆಯಿತ್ತುಬೆಸಗೊಂಡೆ |
ಇಂದು ಜಡದಲಿ ಚೇತನಂಕೈ
ಗಂದನೆನ್ನಿಪುದೆನಗೆ ನನ್ನೀ
ಸಂದೆಗವ ಪರಿಹರಿಸಿರೆಂದಾ ಬಾಲ ಮರುನುಡಿದ ||೪೧||

ಮಗನ ನುಡಿಗಳ ಕೇಳ್ದು ಜನಕಂ
ಮೊಗದಿ ಗಂಭೀರತೆಯ ತಳೆದೆಲೆ
ಮಗನೆ ಶಿವನೀ ಕಲಿಯುಗದಿ ಕುಡಲೊಲ್ಲ ದರ್ಶನವ |
ಬಗೆದು ಶಿವಭಾವನೆಯಮೂರ್ತಿಯ
ಬಿಗಿದ ಮನದಿಂದರ್ಚಿಸಲು ಹರ
ದುಗುಡ ಹರಿಸುವನೆಂದು ಪೇಳ್ದನು ತನ್ನತನಯಂಗೆ ||೪೨||

ಕಂದ ನಿನ್ನಯಮಾತುದಿಟ ಕ
ಣ್ಮುಂದೆ ಮೆರೆವುದು ಮೂರ್ತಿಮಾತ್ರವೆ
ಬಂಧ ಹರ ಶಿವನಲ್ಲ ನಿನ್ನಯತರ್ಕಬುದ್ಧಿಯಿದು |
ಕುಂದುಗಾಣದಗಾಧವೆಂದಾ
ತಂದೆ ತನ್ನಯಕಂದಗುಸಿರಿದ
ನಂದು ಬಾಲನ ಧಾರಣಾವತಿ ಮತಿಗೆ ಬೆರಗಾಗಿ ||೪೩||

ಇನಿತರಿಂ ಸಂತೃಪ್ತನಾಗದೆ
ಮನವ ಮೋಹಂಗೊಳಿಪ ಲೌಕಿಕ
ಜನರ ನುಡಿಗಳಿವೆಂದರಿದು ನಾನೆಂದುಮಾಜಡವ |
ಮನದಿ ಸಹ ಮಾನಿಸೆನು ಸತ್ಯವಿ
ದೆನಗೆ ಚೇತನರೂಪ ಕಾಣುವ
ದಿನವೆ ಪೂಜಿಪೆನೆಂದು ಬಾಲಕನಂದೆ ತರಿಸಂದ ||೪೪||

ಹೃದಯದೊಳ್ಮನೆಗೈದನಂಬಿಕೆ
ಯದುರೆ ತರಳನ ತನುವೊಳಾಯಸ
ಮುದಿಸಿದುದು ಮನಚಂಚಲಿಸೆ ತತ್ಕ್ಷಣವೆ ನಂದನನು |
ಮೃದುವಚನದಿಂ ಚಿತ್ತಬೇಸರಿ
ಸಿದುದು ದೇವರೆ ಪೋಪೆ ಬೀಳ್ಕುಡಿ
ಸದನಕೆನ್ನುತ ಬೇಡಿಕೊಂಡನು ಪಿತನಪಾದದಲಿ ||೪೫||

ಸುತನ ಚತುರತೆಯರಿದು ಪಿತನನು
ಮತಿಸಿ ಸದನಕೆ ಪೋಪೆಯಾದರೆ
ಜೊತೆಗೆ ಕೊಳ್ಸೈನಿಕರನೊರ್ವನೆ ಪೋಗದಿರು ತಮದಿ |
ವ್ರತಮುಗಿವವರಮಾದೊಡನ್ನವ
ಮಿತವೆನಿಸಿ ಸಹಕೊಳ್ಳದಿಹುದೆ
ನ್ನುತಲಿ ಪುತ್ರನ ಕಳುಹಿಸಿಕೊಟ್ಟನು ಸೈನಿಕರಕೂಡೆ ||೪೬||

ಬಳಲಿಬಂದಾಬಾಲನಾಲಯ
ದೊಳಗೆ ಕಾಲಿಟ್ಟೊಡನೆ ಜನನಿಯ
ಬಳಿಗೆ ನಡೆದಾಂ ಬಹಳಹಸಿದಿಹೆನಮ್ಮಕೇಳೆನಲು |
ಎಳೆನಗೆಯಿನಾ ಮಾತೆ ಕಂದನೆ
ಕೊಳದಿರೀ ವ್ರತವೆಂದೊಡಂ ಹಿಂ
ಗಳೆದೆ ನನ್ನಯ ಮಾತನೆನ್ನುತಲಪ್ಪಿದಳು ಮಗನ ||೪೭||

ಕಂದ ಭೋಜನ ಬಿಡುವುದಳವ
ಲ್ಲೆಂದು ನಾಂಮೊದಲಾಡಿದೊಡೆಹಠ
ದಿಂದ ಬಳಲಿದೆ ಮನೆಗವರು ಬಂದೊಡನೆ ಭೋಜ್ಯಗಳ |
ತಿಂದಕತೆಯಂ ತಿಳುಹದಿರು ಮುನಿ
ಸಿಂದ ದಂಡಿಪರರಿತೊಡೆನ್ನುತ
ಲಂದು ಮಮತೆಯಮಾತೆ ಮಗನಿಗೆ ತಿನ್ನಿಸಿದಳೊಲಿದು ||೪೮||

ಮಾರನೆಯ ಬೆಳಗಿನಲಿ ಸದನವ
ಸೇರಿದೊಡನೆಯೆ ತಿಳಿಯೆ ತನ್ನಕು
ಮಾರ ಭೋಜನಗೈದ ಸಂಗತಿ ವಿಪ್ರವರ್ಯನಿಗೆ |
ತೋರಿಕೋಪವ ಕಟುತೆಯಿಂಭುವಿ
ಭಾರ ಛೀ ವ್ರತಭಂಗದಿಂದತಿ
ಘೋರಪಾತಕ ಗೈದೆಯೆನ್ನುತ ಮಗನ ನಿಂದಿಸಿದ ||೪೯||

ಬಾಗಿ ವಿನಯದ ಭಾವದಿಂ ಸುತ
ನಾಗಲಿಳಿದನಿಯಿಂದ ನಡೆದೆನೊ
ದೇಗುಲಕೆ ನಾನಾವನರ್ಚನೆಗಾತನಿಲ್ಲದಿರೆ |
ಸೋಗಿನಿಂ ಕಲ್ಪಿಸಿದ ಶಿವಗನು
ರಾಗಮೆನಗಿಲ್ಲದಿರೆ ಜನಕರೆ
ರೋಗಜನಕವ್ರತವ ಪಾಲಿಸಲೇಕೆ ನಾನೆಂದ ||೫೦||

ತಂದೆ ತಾವುಗಳೆಲ್ಲ ಮಲಗಿದೊ
ಡಂ ದಣಿದುಮಾನೊರ್ವನೇಮುದ
ದಿಂದ ರಾತ್ರಿಯುಪೂಜೆಸಲಿಸಿದೆ ಮೂರ್ತಿಯನೆ ನಂಬಿ |
ಅಂದಗಿಡೆ ವಿಶ್ವಾಸ ನಾನೈ
ತಂದೆ ಸದನಕೆ ಶಿವನ ತೋರದ
ಬಂಧನಗಳಿಂದೇನು ನಾನದಕೊಳ್ಳಲೇಕೆಂದ ||೫೧||

ಇಂತುಸುರಿ ಜನಕಂಗೆ ಬಾಲನ
ನಂತರ ಪ್ರೇಮದಲಿ ತನ್ನನು
ಸಂತತಂ ನಿಟ್ಟಿಸುವ ಜನಕಾನುಜನ ಬಳಿಗೈದಿ |
ಎಂತೊ ನಿಮ್ಮಗ್ರಜರನೊಪ್ಪಿಸಿ
ನಿಂತು ಪಠನದೆ ದಿನಗಳಂಕಳೆ
ವಂತೆ ಪೂಜೆಯ ಬಲೆಯಿನೆನ್ನನು ಬಿಡಿಸಿ ನೀವೆಂದ ||೫೨||

ತಮ್ಮನುಂ ನಿಜ ಸತಿಯುಳುಂ ಕೂ
ಡೊಮ್ಮೆ ಶಂಕರ ಪಠಿಸೆ ಬಯಪನು
ಸುಮ್ಮನೀ ವ್ರತಪೂಜೆಗಳಲೇ ಕಾಲಕಳೆಯುತಿರೆ |
ನಿಮ್ಮಮಗನೆಂತೋದುಪಂ ತನು
ವುಮ್ಮಸೆಯುತಿಹುದೋದೆ ಬಿಡಿರೆನೆ
ಸಮ್ಮತಿಸುತಾ ವಿಪ್ರನಾಗಲಿ ಸಂತಸದಿನೆಂದ ||೫೩||

ಬಳಿಕ ಶಾಸ್ತ್ರಾಧ್ಯಯನದಲಿ ತಾಂ
ತ್ರಿಳಿವ ಗಳಿಸಿ ದಯಾಳನೆನ್ನಿಸಿ
ತಳೆಯುತ ದಯಾರಾಮನೆಂಬುಪನಾಮವನು ಕೂಡ |
ಇಳೆಗೆ ಪೊಸತಕ್ಕರೆಯ ಬೆಳದಿಂ
ಗಳನು ಸುರಿಸುತಲಿಂತು ಬಾಲಕ
ಜಳನಿಧಿ ಸುಧಾಕರನು ಹೊಳೆದನು ಹರಸೆ ಪರಮಾತ್ಮ ||೫೪||

|| ಇಂತು ಒಂದನೆಯ ಸಂಧಿ ||



# ಎರಡನೆಯ ಸಂಧಿ

**ಸೂಚನೆ—ಸೋದರೀ ಜನಕಾನುಜರು ರುಜೆ**
**ಬಾಧೆಯಿಂ ಮೃತರಾಗೆ ವೈರಾ**
**ಗ್ಯಾಧಿಕಂ ಮರಣವನು ಜಯಿಸಲು ತಳೆದ ನಿಶ್ಚಯವ ॥**

ತರಳರೇನೆಂದೊರೆವೆ ಮುಂದಕೆ
ಪರಮ ನಿರ್ಮಳ ಮೂರ್ತಿಯೆನಿಸಿದ
ಸರಳಜೀವನದೊಡೆಯ ಬಾಲಕ ಮೂಲಶಂಕರನು ।
ನಿರತನಾಗುತೆ ಶಾಸ್ತ್ರಪಠನದಿ
ಬರಿಸ ಹದಿನಾಲ್ಕಳೆದು ಧರ್ಮಾ
ಚರಣದಲಿ ರಂಜಿಸಿದ ಸರ್ವರವತ್ಸನೆನುವಂತೆ ॥೧॥

ಒಂದು ನಿಶೆಯಿಂತಿರಲು ಮೂಲನ
ತಂದೆ ವಾದನ ನರ್ತನೋತ್ಸವ
ವೊಂದ ನೋಡುವೊಡೊರ್ವಮಿತ್ರನ ಮನೆಗೆ ಕರೆದುಯ್ದು ।
ಒಂದೆರಡು ಗಂಟೆಗಳು ಕಳೆದಿರೆ
ತಂದುಕೊಟ್ಟನು ವಾರ್ತೆಯೊಂದನು
ಬಂದು ಮೇಲುಸಿರಿಂದಲೋಡುತಲೊರ್ವ ಸೇವಕನು ॥೨॥

ಜೀಯ ತಮ್ಮಯ ಮಗಳ ಕೋಮಳ
ಕಾಯಕಾಯ್ತು ವಿಷೂಚಿಕಾ ಭಯ
ದಾಯಕಾಮಯ ಮೂರ್ಛೆಗೊಳಗಾದಪಳು ಚಣಚಣಕೆ |
ಆಯಿತತಿಶಯ ಶೋಕ ತಮ್ಮ
ಸ್ತ್ರೀಯರಟ್ಟಲು ಬಂದೆನೀಗಳೆ
ರಾಯರಾಕಡೆ ಬಿಜಯಗೈದಪುದೆಂದನಾ ಮನುಜ ||೩||

ಪರಮಹರ್ಷದಲಿರುಳ ಕಳೆಯಲು
ತರಳವೆರಸೈತಂದ ತಂದೆಗೆ
ತರಳೆಗಾದುದು ಜಾಡ್ಯಮೆಂಬೀ ಮಾತುಗಳಕೇಳಿ |
ಬರಸಿಡಿಲಿನಪಘಾತವೊಮ್ಮೆಗೆ
ಸಿರದ ಮೇಲಾದಂದಮಾಗಲು
ತೆರಳಿದನು ನಿಜಸದನಕಾಕ್ಷಣ ಬಹಳ ಭಯದಿಂದ ||೪||

ಬರಲು ತನ್ನಯ ಮುದ್ದಿನರಗಿಣಿ
ತರಳೆ ಬಿಸಿಲಲಿ ಬಿಸುಟಹೂವಿನ
ತೆರದಿ ಬಾಡಿದ ಮೊಗದಿ ಹಾಸಿನಲೊರಗಿ ಚೀತ್ಕರಿಸಿ |
ಸೊರಗಿದಕ್ಷಗಳಿಂದ ತನ್ನನೆ
ಕುರಿತು ನಿಟ್ಟಿಸಿ ಕರವ ಚಾಚುತ
ಕರಳು ಹರಿವಂದದಲಿ ರೋದನಗೈವುದನು ಕಂಡ ||೫||

ಶೋಕಮಿಗೆ ಪರಿವಾರ ಜನ ನೆರೆ
ದಾಕೆಯಳಲಂ ತೀರ್ಚೆ ಹವಣಿಸಿ
ಜೋಕೆಯಿಂದುಪಚಾರವೆಸಗಿತು ಕೂಡಿ ಚರ್ಚಿಸುತ |
ಭೀಕರಾಮಯ ಕಳೆಯೆವೈದ್ಯರ
ಲೋಕ ವಿದ್ಯಾಪ್ರೌಢಿಮೆಯನೇ
ಕೀಕರಿಸಿ ತಾನೆಸಗುತಿರ್ದುದು ಯತ್ನಸಾಸಿರವ ||೬||

ವರ ವಸಂತದ ತಳಿರಿನಂದದ
ಪರಮಸುಂದರಿ ಕೋಮಲಾಂಗಿನಿ
ತರಳೆ ಹೇಮಂತಾವನೀಜದ ರೂಪವಾಂತಿರಲು |
ನೆರೆದ ಪರಿವಾರ ಜನ ಕಂಗಳೊ
ಳಿರದೆ ನೀರ್ಗರೆಯುತ್ತ ಗದ್ಗದ
ಕೊರಳನಾವರಿಸುತಿರಲುಪಚರಿಸಿದರು ಬಾಲಿಕೆಯ ||೭||

ಕರೆವ ಜನನೀ ಬಾಷ್ಪನದಿಯಲಿ
ತರಳೆಯಳಲಿದ ಜೀವಹರಿದುದೊ
ಮರುಗುತಿಹ ನಿಜಪಿತನ ನಿಡುಸುಯ್ಲೊಡನೆ ಹಾರಿದುದೊ |
ಪರಿಯಿದೇನೆನೆ ಕುಳಿತವೈದ್ಯರ
ನೆರವಿಯಲಿ ಸುಕುಮಾರಿ ನರಳುತ
ತೊರೆದಳಸುವಂ ತನುವಿಗಂಟಿದ ನೋವಹೊರೆಯೊಡನೆ ||೮||

ಶಿರವ ಮಾತೆಯ ತೊಡೆಯಲಿರಿಸುತ
ಕರದಿ ತಂದೆಯ ಕೈಯ ಹಿಡಿದಾ
ತರಳೆ ಜನಕಾನುಜನ ಸೋದರಿಸೋದರಾದಿಯರ |
ತೆರೆದ ಕಂಗಳಿನೊಮ್ಮೆ ನಿಟ್ಟಿಸಿ
ಕರುಣದಾಕ್ರಂದನವಗೈಯುತ
ಸೊರಗಿಕಂದಿದ ತನುವನೊಗೆದಳು ನಿಟ್ಟುಸಿರಿನೊಡನೆ ||೯||

ಕೊರಗಿ ರೋದಿಪ ಜನನಿ ತನ್ನಯ
ಮುರುಕಗೂಡಿರ್ದೆದೆಯ ಮೇಗಡೆ
ಧರಿಸಿದಳು ಹೂವೊಂದನಾದರದೊಣಗಿಪೋಗಿಹುದು |
ಮುರಿದರೇಕಿನ ಕಳೆದ ಬಣ್ಣದ
ತೊರೆದ ಗಂಧದ ಪುಷ್ಪತಾಯಿಯ
ಬಿರಿದ ಹೃದಯವನಪ್ಪಿಕೊಂಡಿತು ಕೊನೆಯಬಾರಿಯಲಿ ||೧೦||

ತಂದೆ ತನ್ನಯ ಕರದಿ ಪಿಡಿದನು
ನಂದಿಹೋಗಿಹ ಕುಲದದೀಪವ
ನಂದಕಾಲದಿ ಕಾಲಸೊಡ್ಡಿದ ವಾತಹತಿಯಿಂದ |
ನಂದುದಂ ಬೆಳಗಿಸಲು ಬರಿದೇ
ನೊಂದೆದೆಯ ದೀಪಕದ ಮುಟ್ಟಿಸಿ
ನಿಂದುಯತ್ನಿಸುತಿರ್ದನಾದಿನ ಮರುಗಿ ಮಮ್ಮಲನೆ ||೧೧||

ತರಳೆ ನಡೆಯಲು ಬಾರದಿರೆ ನೆಲ
ಕುರುಳಿ ನೀ ಬೋದಿಸಲು ನಿನ್ನಯ
ಕುರುಳ ನೇವರಿಸಂಗಕಡರಿದ ಧೂಳಕೊಡಹುತಲಿ |
ಮರೆಸಿ ನೋವನು ನಿನ್ನನಪ್ಪಿದ
ಕರವೆ ನಿನ್ನಯ ಕೋಮಳಾಂಗವ
ನುರಿಗಿಡಲು ತಪ್ಪಿಸದೆ ಹಾ! ಎಂದಳಲಿದಳು ತಾಯಿ ||೧೨||

ಕಂದ ಸೋದರರೊಡನೆ ನೀಮುಳಿ
ದಂದು ತಿನದಿರಲೊಲವ ಬೀರುತ
ಬಂದು ನಿನ್ನನು ತೊಡೆಯಲಿರಿಸುತಲಿಳುಹಿ ಕೋಪವನು |
ಅಂದದಿಂದುಣಿಸಿರ್ದ ಹಸ್ತಗ
ಳಿಂದು ಕಿಚ್ಚಿಗೆ ಬೀಳ್ವ ನಿನ್ನನು
ತಂದು ರಕ್ಷಿಸದಾಯ್ತೆ ಹಾ! ಎಂದಳಲಿದಳು ಜನನಿ ||೧೩||

ಹಾ ಯುವತಿ ನಾಂ ಸದನಕ್ಕೈತರೆ
ತಾಯ ಮುನ್ನಮೆ ಮೊಗದಲೆಳನಗೆ
ಹಾಯಿಸುತ ತಣ್ಣೀರಿನಿಂ ಕೈಕಾಲ್ಗಳನು ತೊಳೆದು |
ಆಯಸವ ಹರಿಸುವಳಿಗಿಂದೇ
ನಾಯಿತೌ ಕರಪದಗಳಂ ಮರೆ
ದೀಯೆ ನನ್ನಕ್ಷದಲೆ ಜಲವೆಂದೊರಲಿದನು ತಂದೆ ||೧೪||

ಇಂದು ಮೂಲನು ಹಳಿಪನೀಪರಿ
ಯಿಂದ ಸೋದರರನುಕರಿಸಿ ಮೊಗ
ದಂದಗಿಡಿಸಿದರಿಂದು ಮುಳಿದೆನ್ನಕ್ಕ ಹೊಡೆದಿಹಳು ।
ಎಂದುಗಂಟಿಕ್ಕುತಲಿ ಹುಬ್ಬನು
ಬಂದೊಡನೆ ದೂರುಗಳ ತಾರದೆ
ಕಂದಮೌನಪಿದೇತಕೆಂದಾ ತಂದೆ ಪಲುಬಿದನು ॥೧೫॥

ಕ್ರೀಡೆಗೋಸುಗ ತಟನಿಯೊಳಗೋ
ಲಾಡಿ ನಾವೀಸುವಲಿ ಹುಸಿನಗೆ
ಗೂಡಿ ತಣ್ಣೀರುಗಳನೆರಚಿಸಿಕೊಂಡು ತೀರದಲಿ ।
ಆಡುವವಳಿಂದೇಕೆ ನೀ ಮೊಗ
ಬಾಡಿ ಕಣ್ಣೀರುಗಳನೆರಚಿಸೆ
ಲೋಡಿದೌ ಹಾ ಎನುತಗೋಳಾಡಿದರು ಸೋದರರು ॥೧೬॥

ಮೊದಲು ಮಾತೆಯ ಗರ್ಭದಿಂದಾ
ನುದಿಸಿದೆನ ನಂತರದಿ ನೀನಾಂ
ಮೊದಲು ಭೋಜ್ಯವನುಂಡನಂತರನೀನುಮೊದಲಾನು ।
ಹೊದೆದೆ ವಸ್ತ್ರವನಂತರದಿ ನೀ
ನಿದುವರೆಗೆ ಸರಿ ಮರಣಮಾತ್ರಕೆ
ಮೊದಲು ನೀನೆಂತಾದೆಯೆಂದಗ್ರಜೆಯು ಮರುಗಿದಳು ॥೧೭॥

ವಿಗಡ ನೈರಾಶ್ಯಾಂಬುದಾವಳಿ
ತೆಗೆದು ಚಿದ್ಗಗನವನು ಕವಿದಿರೆ
ನೆಗೆದ ಹಾಹಾಕಾರ ದನಿಗಳ ಸಿಡಿಲುಬಡಿಯುತಿರೆ ।
ಒಗೆವ ಕಂಬನಿಮಳೆಸುರಿಯುತಿರೆ
ಮಗುಡ ಜಳನಿಧಿ ತೆರೆಯಬಂಬಲ
ನೊಗೆಯುತಿರ್ದುದು ವಿಪ್ರನಾಹತಭಾಗ್ಯಸದನದಲಿ ॥೧೮॥

ಕಂಬನಿಯ ಸುಳಿವಿಲ್ಲ ನುಡಿಗಳ
ನುಂಬ ಗದ್ಗದವಿಲ್ಲ ದುಗುಡದ
ಬಿಂಬ ವದನದಲಿಲ್ಲ ರೋದನದನಿಯ ಪೆಸರಿಲ್ಲ
ಕಂಬದಂದದಿ ನಿಂದು ಭಿತ್ಯವ
ಲಂಬನದಿ ಕಣ್ಣೆಮೆಯಹಾಕದೆ
ದಿಂಬೊಳೊರಗಿದ ತಂಗಿಯೊಡಲನೆ ನಿಟ್ಟಿಸಿದಮೂಲ ॥೧೯॥

ಮಾತೆ ಪಿತಜನಕಾನುಜಾದಿಗ
ಳಾತಳೆಯಳಿವಿನಲಿ ನಿಜಮತಿ
ಸೋತು ಶೋಕದಿ ಶವದಮೇಗಡೆ ಬೀಳುತೇಳುತಿರೆ ।
ಆ ತರಳ ಕರವಿತ್ತು ಕದಪಿನೊ
ಳಾತು ಗೋಡೆಯನಾಗ ತನ್ನನು
ಜಾತೆಯೊಡಲನೆ ನೋಡುತಿರ್ದಪನೆಡಕೆ ಸಿರಬಾಗಿ ॥೨೦॥

ಹೆತ್ತು ಸಲಹುವ ಭಾಗ್ಯವಂನನ
ಗಿತ್ತೆ ನಿನ್ನನು ಹೊತ್ತು ತಿನ್ನಿಸಿ
ಮುತ್ತಿಡುವ ಸುಖವಿತ್ತೆ ಚಿನ್ನಾಟಗಳನೀಕ್ಷಿಸುವ |
ಮತ್ತ ತಾಯ್ತನವಿತ್ತೆ ಕೊನೆಗೀ
ಸತ್ತಪರಿನೋಳ್ಪುದನು ಕೊಡಬೇ
ಕಿತ್ತೆ ಹಾ ಎಂದಮ್ಮನಳುತಿರೆ ಬಾಲ ನೋಡುತಿಹ ||೨೧||

ಒತ್ತಿಡಿಪ ಮುಳ್ಕಿತ್ತು ಕರದಿಂ
ದೆತ್ತಿ ನಿನ್ನನು ಮುದ್ದಿಸುತ್ತೆದೆ
ಗೊತ್ತಿ ಮೈಧೂಳ್ಕೊಡಹಿ ಮುಂಗುರುಳುಗಳನೇವರಿಸಿ |
ಹತ್ತಿದಳಲಂ ಶೀರ್ಷಭಾಗ್ಯವ
ನಿತ್ತ ನೀಂ ಪೆಣವೊರುವಕಾರ್ಯವ
ನಿತ್ತುದೇಕೆಂದಳುತಿರಲ್ಪಿತ ಬಾಲ ನೋಡುತಿಹ ||೨೨||

ಮುತ್ತಿಡುತಲಾಪೆಣನ ಮೋಹದಿ
ಮುತ್ತೆ ಮುತ್ತೆದೆವಡೆದು ದಂದುಗ
ವೊತ್ತ ಜನನೀಜನಕ ಜನಕಾನುಜರು ಸೋದರರು |
ಮತ್ತಕಾಶಿನಿ ತಂಗಿ ಬಾಂಧವ
ರತ್ತು ಮೂರ್ಛಿತರಾಗೆ ಚಿಂತೋ
ನ್ಮತ್ತ ಬಾಲಕ ಬಾಳಿದೇತರದೆಂದು ನೋಡುತಿಹ ||೨೩||

ಬೆರೆದಿರಲು ಗಾಂಭೀರ್ಯವದನದ
ಲಿರದೆ ಚಿಂತಾರೇಖೆ ಮೂಡಿರೆ
ಕರವ ಕದಪಿನಲಿಟ್ಟುವಾಮಕೆ ಶಿರವ ನಸುಬಾಗಿ |
ತೆರೆವ ಕಂಗಳು ತಂಗಿಯೊಡಲಲಿ
ಕೊರೆದ ಚಿತ್ರದ ತೆರದಿ ನಿಂದಿರೆ
ತರಳಗೋಡೆಯನೊರಗಿಸಾವನೆ ಕುರಿತು ಯೋಚಿಸಿದ ||೨೪||

ಸೀಳಿದೆಯನೊಳವೊಕ್ಕ ಯೋಚನೆ
ಯಾಳವರಿಯದೆ ನಂಟರೆಲ್ಲ ದ
ಯಾಳಹೆಸರಿಗೆ ಪಾತ್ರನಹನು ದಯಾಳನಿವನಲ್ಲ |
ಹಾಳು ಮೊಗದಲಿ ದುಗುಡಕಾಣದು
ಬೀಳದಶ್ರುವಿನೊಂದು ಬಿಂದು ಕ
ರಾಳನೇ ಸರಿಯೆಂದು ಹಳಿದರು ಮೂಲಶಂಕರನ ||೨೫||

ತೂರೆಯ ತಿಳಿನೀರ್ಕುಡಿವ ಚಲ್ವಿನ
ಹರಿಣಿಯೊಮ್ಮೆಯೆ ಸನಿಯ ಮೊರೆಯುವ
ಹರಿಯುಗರ್ಜನದಿಂದ ಬೆಚ್ಚುವದೊಂದುಬೆಡಗಿಂದ |
ಅರಿಯದೆರಗಲು ಸಿಡಿಲು ಬೆದರುವ
ನರನವೊಲು ತಾ ಮುನ್ನಕಾಣದ
ಮರಣಘಟನೆಯಲಂದು ನಡುಗಿದ ಭಯದಿ ಸುಕುಮಾರ ||೨೬||

ಧರಣಿ ತಳದೊಳಗೆಲ್ಲ ನಮ್ಮೀ
ತರಳೆಯಂದದಲೊಂದುದಿನ ಬಲು
ಕೊರಗಿ ಸಾವಿನ ಬಾಯ್ಗೆತುತ್ತಾಗುವುದು ತಪ್ಪದಲೆ ।
ಅರರೆ ನಿಶ್ಚಯಮೊಂದು ದುರ್ದಿನ
ಮರಣವೊಂದವೆನಲ್ತೆ ನಾನುಂ
ಬರಿಯ ಕನಸೇ ಬದುಕಿದೆಂದಾ ಬಾಲಯೋಚಿಸಿದ ॥೨೭॥

ಬಳೆದ ಜಲದದ ಸಾಲೊಳೊಮ್ಮೆಲೆ
ಸುಳಿದು ಮರೆಯಹ ಮಿಂಚಲತೆಯೊಲ್
ಬುಳುಬುಳನೆ ಮೇಲೆದ್ದು ಚಣದಲೆ ಮರಳಿ ಲೀನಮಹ ।
ಜಳದ ಗುಳ್ಳೆಗಳಂತೆ ಜಗ ಕಂ
ಗೊಳಿಸಿ ಕಣ್ಮರೆಯಹುದು ಚಿಂತಿಸ
ಲೊಳಗೆ ನಶ್ವರ ಸಕಳವೆಂದಾಬಾಲಯೋಚಿಸಿದ ॥೨೮॥

ಜಗದ ಭೋಗವಿದೇಕೆ ದೇಹವ
ನೊಗೆಯವೇಳ್ಪುದು ಕೊನೆಗೆ ಹೊರಗಣ
ಸೊಗಕೆ ಮನಸೋಲದಲೆ ಸರ್ವರನುಂಬಮರಣವನು ।
ಬಿಗಿದು ಬಂಧಿಪ ಮಾರ್ಗವನು ನಾಂ
ಬಗೆದು ಹುಡುಕಲೆ ಬೇಹುದೆನ್ನುತ
ವಿಗತಜೀವಳ ದರ್ಶನದಲಾ ಬಾಲ ಯೋಚಿಸಿದ ॥೨೯॥

ಹಳಿದ ಮಾತ್ರಕೆ ಬಹುದೆ ಕಂಬನಿ
ಬೆಳೆದ ವೈರಾಗ್ಯಾಗ್ನಿ ಹೃದಯದ
ಜಳದ ಕೊಳನನೆ ವಾಷ್ಪಗೈದಿರೆ ಭುಗ್ಗನುಜ್ವಳಿಸಿ |
ಇಳೆಯನುದರದಿ ನಿಷ್ಕರುಣೆಯಿಂ
ತಳೆವ ಸಾವಿನ ಸಿಕ್ಕಬಿಡಿಸಲು
ಬಳಲುತಿರ್ದನು ಬಾಲ ಹಗಲಿರುಳೆನದೆ ಚಿಂತಿಸುತ ||೩೦||

ದಿನಪಲವು ಕಳೆಯಲ್ಕೆ ಬಾಲೆಯ
ತನುವಿಸರ್ಜನ ಜನಕತೀತದ
ನೆನಹು ಮಾತ್ರವದಾಯ್ತು ಜನನೀಜನಕಸೋದರರು |
ಅನುಜೆ ಜನಕಾನುಜರು ಮತ್ತಂ
ದಿನೊಲೆ ಸೊಗಮಿರೆ ಬಾಲಸಾವನೆ
ನೆನೆದು ತಾನದ ಗೆಲುವ ಮಾರ್ಗವ ಸತತ ಚಿಂತಿಸಿದ ||೩೧||

ಖೂಳನಿವ ಕಲ್ಲೆದೆಯ ಕಡಿಗವ
ಯಾಳನೆಂಬೀನಾಮ ಬರಿದು ಕ
ರಾಳನೇ ಸರಿಯೆಂದು ಜರೆದ ದಯಾಳುಬಾಂಧವರು |
ಕಾಳ ಮರಣವ ವಿಸ್ಮರಿಸಿ ಸುಖ
ಮೇಳದಲಿ ಮೈಮರೆಯೆ ಬಾಲಕ
ಬಾಳ ಕೆಡಿಸುವಸಾವ ಸೋಲಿಪ ಪರಿಯಚಿಂತಿಸಿದ ||೩೨||

ತಳೆದ ಚಿಂತೆಯ ಬಾಲಸಂತತ
ತಿಳಿವಿನಂತಃಕರಣದೀಪವ
ಬೆಳಗುತ್ತೈಹಿಕ ಕಾಮತಮವಂ ದೂರಚೆದುರಿಸುತ |
ಕಳೆದೊಡಂ ನಡುರಾತ್ರಿ ನಿದ್ದೆಯ
ಸುಳಿಯಗುಡದಕ್ಷದಲಿ ಹಾಸೊಳು
ಕುಳಿತಿರಲ್ತಾಯ್ತಂದೆಗಳು ನಿದ್ರಿಸಲು ಪೇಳ್ದಪರು ||೩೩||

ತನಗೆ ಜನನೀಜನಕರೀಪರಿ
ಯೆನಲುಹಾಸಿಗೆಯೊಳಗೆ ಮಲಗುತ
ಮನಮುದೆಲ್ಲಿಯೊ ಬೇರೆಲೋಕದಿ ಸಂಚರಿಸುತಿರಲು |
ಜನರು ಮೈಮರೆದಿರಲು ನಿದ್ರಾಂ
ಗನೆಯ ತೊಡೆಯಲಿ ಮಧ್ಯನಿಶೆಯಲಿ
ಕನವರಿಸಿದೊಲ್ ಹಾಯೆನುತ ಚೀತ್ಕರಿಸಿ ಕುಳಿತಪನು ||೩೪||

ಆರು ತಂಗಿಯ ಕೋಮಲಾಂಗವ
ಕ್ರೂರ ತನದಿಂ ಸುಲಿದವಳೆ ಹೆ
ಮ್ಮಾರಿ ನನ್ನನು ಹರಿದು ತಿನ್ನಲು ನೋಡುವೆಯದಾರಿ |
ಧಾರುಣಿಯ ಜೀವರನದೆನಿಬರ
ಘೋರೆ ನೀನಿದುವರೆಗೆ ಭುಂಜಿಸಿ
ಕಾರಿದೆಯೊ ಸಂತೃಪ್ತಿದೋರೆಯ ಎನುತ ಚೀತ್ಕರಿಪ ||೩೫||

ಮುತ್ತಿ ಮರಣಾಂಬುದದ ಸಂಕುಲ
ಚಿತ್ತಜಲದವ ಘರ್ಷಿಸಲು ವಿ
ದ್ಯುತ್ತು ವೈರಾಗ್ಯಾಖ್ಯಮಾವಿರ್ಭವಿಸಿ ಮುಗ್ಧತೆಯ |
ಹೃತ್ತಮುವ ತೀಡಲ್ಕೆ ಶ್ರೇಯಂ
ಬೊತ್ತಮರಜೀವನದ ಮಾರ್ಗವ
ಹತ್ತಿನಡೆಯಲು ಬಾಲಸಾಗಳಿಮನದಿ ತರಿಸಂದ ||೩೬||

ಮೂಲನನುಪಂ ಶಾಸ್ತ್ರಪಠನದಿ
ಕಾಲನೂಂಕುತ ಬೆಳೆದ ಚಿಂತಾ
ಜಾಲದೊಡನೆಯೆ ದಶದಮೇಲ್ನವವರ್ಷದವನಾಗೆ |
ಕಾಲವಶದಿಂದಲಿ ವಿಷೂಚಿಕೆ
ಯಾಲಯದಿ ಮತ್ತೊಮ್ಮೆಪಸರಿಸೆ
ಜಾಲವಂ ಜನಕಾನುಜನು ಹತ್ತಿದನು ಹಾಸಿಗೆಯ ||೩೭||

ಮರಳಿ ಪರಿಜನ ಬಾಲಿಕೆಯನುಪ
ಚರಿಸಿದಂದಮೆ ವಿಪ್ರನನುಜನ
ನೆರೆದು ಬಗೆಬಗೆಯಿಂದಲುಪಚರಿಸುತ್ತಿರಲು ಕೊನೆಗೆ |
ಮರೆದ ಮರಣದ ಘೋರಚಿತ್ರವ
ತೆರೆದು ತೋರಿಪನೆಂಬವೊಲ್ಯಮ
ನಿರದೆ ಜಿಹ್ವೆಯ ಚಪ್ಪರಿಸಿದನು ನುಂಗಿದೋಗಿಯನು ||೩೮||

ಹಿಂದಿನಂದವು ಮುಂದಿಪುರಣಕೆ
ನೊಂದು ವಿಪ್ರಾನುಜನ ನೆನೆನೆನೆ
ದೊಂದೆಸಮ ರೋದಿಸಲು ಹಾಹಾಕಾರವಾಗಸವ |
ಛಿಂದಿಸಲು ಶೋಕಾಂಬುನಿಧಿತಟಿ
ಬಂಧನವಕೀಳುತ್ತ ಘೋರ್ಗರೆ
ದಂದವಾದುದು ಮತ್ತಮಾ ಹತಭಾಗ್ಯಸಪನಗಳ ||೩೯||

ನಾವೆ ಮುಳುಗುತ್ತಿರಲು ಕಡಲಲಿ
ನಾವಿಕಂ ಧೃತಿಗುಂದಿ ಕರೆಯಲು
ಕಾವರಂ ನಿಜಕರವ ಚಾಚುವ ತೆರದಲಾರೋಗಿ |
ಸಾವು ನಿಂದಿರೆ ಬಾಯ್ದೆರೆದು ನೆರೆ
ನೋವುನುಡಿಗಳ ನುಂಗುತಿರೆ ನಿಜ
ಜೀವಪೋಪಲಿ ಮೂಲನೆಡೆ ಕೈಸನ್ನೆಮಾಡಿದನು ||೪೦||

ಕರೆದೊಡನೆ ಬಳಿವಂದಬಾಲನ
ಕರವ ನಿಜಕರತಳದಿ ಪಿಡಿದುರೆ
ಮರುಕಬೀರುವ ದಿಟ್ಟಿಯಿಂವದನಾರವಿಂದವನು |
ನಿರುಕಿಸುತೆಜಲಧಾರೆ ಕಣ್ಣಿಂ
ಹರಿದಿರಲು ತಲೆದಿಂಬ ಬಳಿ ಕು
ಳ್ಳಿರಿಸಿ ಬರಿದೇ ಪೇಳಲೇನನೊ ಯತ್ನವೆಸಗಿದನು ||೪೧||

ಮೆರೆದ ಶೈಶವದಿಂಪ ತಾನಿದು
ವರೆಗಮುಕ್ಕರೆಯಿಂಪ ಮುದ್ದಿಸಿ
ಪೊರೆದ ಸೋದರನಂಪನನ ಜನಕಾನುಜಂ ನೋಡಿ |
ಧರೆಯನಗಲುವ ಮುನ್ನ ಕೊನೆಸಲ
ಬರದೆ ನುಡಿಸಲು ಗೃಪಯತ್ನಂ
ಬರಿದೆನಿಸಿ ಗತಜೀವನಾದನು ಬುಗುವಶೋಕದಲಿ ||೪೨||

ಕೃಯ ಕೈಯೊಳಗಿಡಿದು ಬರಿದೇ
ಬಾಯನಗಲಿಸಿ ಮಾತುಹೊರಡದೆ
ನೋಯುತಲಿ ಕಂಬನಿಯಧಾರೆಯ ನಿಲ್ಲದೊಲುಕರೆದು |
ಕಾಯನೀಗುವಮುನ್ನ ಪಗ್ಣನ
ಪಾಯದಲ್ಲಿರೆ ಮೂಲಶಂಕರ
ಹಾ ಯೆನುತ ರೋದಿಸಿದ ನೆಲದಲಿ ಕೆಡೆದು ಚೀತ್ಕರಿಸಿ ||೪೩||

ಉಕ್ಕಿಹರಿದಿರೆ ಶೋಕ ಕರದಿಂ
ದಿಕ್ಕಿನೊಸಲನು ಮುಷ್ಟಿಯಿಂದೆಡೆ
ಕುಕ್ಕಿಕೊಳ್ಳುತ ಸುರಿವ ಕಂಬನಿಯಿಂದಲಸುದೊರೆದ |
ಚಿಕ್ಕತಂದೆಯ ಪಾದತೊಳೆಯುತ
ಬಿಕ್ಕುತಾಕ್ರಂದಿಸುತ ನೆಲದಲಿ
ಸಿಕ್ಕಪರಿ ಕೆಡೆದುರುಳಿ ಗೋಳಾಡಿದನು ಶಂಕರನು ||೪೪||

ಸತ್ತಿರೇ ಕಿರಿತಂಡೆ ನನ್ನಲಿ
ಬಿತ್ತಿದಿರೆ ಭವಭಯುವ ನನ್ನಿಂ
ಕಿತ್ತಿದಿರೆ ನೀವಿತ್ತ ಪ್ರೀತಿಯ ಪುಷ್ಪಮಾಲೆಯನು ।
ಸುತ್ತಿದಿರೆ ತಿಳಿವೊರೆಯ ಧೈರ್ಯವ
ಕುತ್ತಿದಿರೆ ಬೇರುಳಿದ ಸಂಟಿಪು
ಮುತ್ತಿದಿರೆ ನಿಮುಗಕಟ ಸತ್ತೆನು ಸತ್ತೆನಾನೆಂದ ||೪೫||

ಹಾತೊರೆಯುತಿಹ ನನ್ನನೊರ್ವನ
ಹಾ! ತೊರೆಯುತಿಹದಲ್ಲಿ ಪಿತ್ರಸು
ಜಾತ! ಮುಡಿದಿರೆ ಕರಮುರಿದಿರೇ ಮೂಢಬಾಲಕನ ।
ತಾತ ನಿಮ್ಮೊಡ ನಾನುಮುಳಿದಿರ
ಲೀತೆರದಿ ನಸುನಸುವೆಸಾಯುವ
ಭೀತಿಯಿರುತಿರಲಿಲ್ಲವಜ್ಞಾನದಲಿ ಹಾಯೆಂದ ||೪೬||

ಅನುಜೆಗಳದವನಿಂತು ಗುರುವುಂ
ಘನದ ಬುಧನಂ ಪ್ರೇಮುವನಧಿಯು
ಮೆನಿಸಿ ತನ್ನನು ಪೊರೆದ ಜನಕಾನುಜನ ಸಾವಿನಲಿ ।
ಮನಮುಳಲಿನಿಂದುನ್ಮದಿಸಿತೆಂ
ಬನಕ ಕೊರಳಿನ ದನಿಯೆತಾಕುಸಿ
ವನಕ ತನ್ನಯ ಕಂಗಳೂದುವತನಕ ರೋದಿಸಿದ ||೪೭||

ಪೊದಲಿ ಭೃಂಗ್ಗನುತಿರ್ಪ ಬೆಂಕಿಗೆ
ಪಪದ ಮಾಪುತ ಸೇರಿದಂದದಿ
ಪೊದಲಿ ರಭಸದಿ ಘೋರ್ಗರೆದು ಹರಿದಿಪ ಮಹಾನದಿಗೆ |
ಪದುಳದಿಂ ಪಾಳಿಯೊದಗಿದಂಪದಿ
ಪ್ಪೃದಯುದಲಿ ಪ್ವೈರಾಗ್ಯಹುದುಗಿಂ
ಪೊದಲಿ ಪೆರ್ಚಸಿತದನು ಜವದಿಂದೆಪಡಸೆಯಸಾವು ||೪೮||

ಭಾಪಭಾವಿತ ಮೂಲಶಂಕರ
ನೀವಸುಂಧರೆಯೊಳಗೆ ಶಾಶ್ವತ
ಮಾವುದುಂ ಗೋಚರಿಸದಿಪ್ಪುದು ಜನಿತಭೂತಗಳು |
ಸಾವುದೇ ದಿಟಮುಕಟಕಟನ
ಸ್ನೀ ವಿನುತತನುಕೂಡ ನಶ್ವರ
ಕಾವರಿಲ್ಲವು ಸಾವವೇಳೆಯುಲೆಂಮು ಮನಗಂಡ ||೪೯||

ಸಂತತಂ ಚಿದ್ವೇದಿಯಲಿ ಸ
ಚ್ಚಿಂತನಾಗ್ನಿಯ ಹೊತ್ತಿಸಿದೆ ತಾ
ನಿಂತು ಸಾಂಸಾರಿಕ ಮನೋಭೀಷ್ಟಾಂಕ ಕಾಷ್ಠಗಳ |
ಬೊಂತೆಯಂ ದಹಿಸುತ್ತಲಷ್ಟ ದಿ
ಗಂತವರಮಾ ಜ್ವಾಲೆ ಯೇಳಲ
ನಂತಮಾರ್ಗದ ಪಥಿಕನಡೆದನು ಭರದಿ ಗುರಿಯೆಡೆಗೆ ||೫೦||

ಮುಂದರಿದು ವೈರಾಗ್ಯ ನಾಮಕ
ಸುಂದರ ಜ್ಯೋತ್ಸ್ನೆಯನು ವಿಜ್ಞಾನ
ಸುಂಧರೆಯಮೇಲಿರಚಿ ಮೋಹದ ತಿಮಿರವಂ ತೊಡೆಯೆ |
ಅಂದದಿಂ ಚಿನ್ನಭದಿ ತೊಳಗಿದ
ನಂದು ಸಕಳಾಧ್ಯಾತ್ಮ ಜಗದಾ
ನಂದ ತರುಣಸುಧಾಕರಂ ಮಿಗೆಪರಸೆ ಪರಮಾತ್ಮ ||೫೧||

|| ಇಂತು ಎರಡನೆಯ ಸಂಧಿ ||



# ಮೂರನೆಯ ಸಂಧಿ

ಸೂಚನೆ :–ಮದುವೆಗೈದಪೆವೆಂಬ ಸಂತಸ
ದುದಧಿಯಲಿ ತೇಲುತಿರೆ ಪರಿಜನ
ಮದುವಣಿಗನೇ ಕಾಣದಾದನು ವಿಪ್ರಸದನದಲಿ ॥

ತರಳರೇ ಕತೆಕೇಳಿ ನೀವ್ ಶಂ
ಕರನು ಬೆಳೆದಿರೆ ನೈಜಮಾರ್ಗದಿ
ಬರೆ ವಸಂತನು ಶಿಶಿರ ತಾಣವನವಗೆ ಕುಡುವಂತೆ ।
ತರಳತನ ತನುವಗಲಿ ಯೌವನ
ಬರಲು ತಾನೆಡೆಯಿತ್ತುದಕೆ ಕ
ಣ್ಮರೆಗೆ ಸಂದುದು ತರಳ ಶಂಕರ ಯುವಕನೆನಿಸಿದನು ॥೧॥

ಆತು ಮಥಿಸಲು ಮೊಸರನಾನವ
ನೀತಮುದ್ಭವಿಪಂತೆಯಾವಿ
ರ್ಭೂತಕೆನೆಯಪ್ಪಂತೆ ಹದದಿಂ ಕಾಯಿಸಲು ಹಾಲ ।
ಆ ತರುಣ ಚಿತ್ತವನನುಜೆ ಕಿರಿ
ತಾತದಿರ ಸಾನ್ಕಡೆಯೆ ಮೂಡಿದ
ಶೀತಮಮತಾಭಾವ ಬೆಳೆದುದು ಬಿಡದೆ ದಿನದಿನಕೆ ॥೨॥

ಶಂಕರಂ ವಿದ್ವಜ್ಜನರ ಬಳಿ
ಶಂಕೆಗಳ ಬಿನ್ನವಿಸಿ ಭುವನದ
ಪಂಕದಿಂದುದ್ಧರಿಪ ಸಾಪನು ಜಯಿಪ ಸಾಧನವ |
ಮುಂಕುಪಿಡಿದೆನಗರುಹಿರೆನೆ ಮನ
ಪಂಕೆಯೊಳಗಿರಿಸುತ್ತ ಸಂತತ
ಕೊಂಕವರ್ಜಿಸಿ ಯೋಗಗೈದಪುದೆಂದುದಾಮುಂದಿ ||೩||

ಯೋಗವಿದ್ಯಾಪ್ರಾಪ್ತಿಯೇ ಭವ
ರೋಗಕೌಷಧವೆಂದು ಘೋಷಿಸ
ಲಾಗರಿಷ್ಟಾಭಿಜ್ಞಮಂಡಲಿ ಮೂಲಶಂಕರನು |
ಭೋಗದಲಿ ಪರಿವಾರ ಜನರನು
ರಾಗದಲಿ ನಾನಿರಲು ಶುಭಸಂ
ಯೋಗಯೋಗದಲಾಗದೆನ್ನುತ ಮನದಿ ಚಿಂತಿಸಿದ ||೪||

ಜೊತೆಗೆ ನೆರೆದಾಡುತಿಹ ಮಿತ್ರರ
ಮತಿಬೆರಗುವಡೆವಂತೆ ವಿಪ್ರನ
ಸುತ ಸತತ ಮುಮುಸಖರೆ ಸಾರವಿಹೀನವೀಲೋಕ |
ಹಿತವ ಬಯಸೆವೆ ನಾಸ್ಗಳೀವಸು
ಮತಿಯ ಮೋಹವನುಳಿವುದೊಂದೇ
ಚತುರಯುಕ್ತಿಯದೆನುತ ಚಿತ್ತದ ಭಾವಬಿತ್ತರಿಪ ||೫||

ಹಾರಯಿಸಲೇನುಂಟು ಜಗವಿದು
ಭಾರಮಾತ್ರವೆಬರಿದೆ ಮೋಹದ
ಕಾರುಗತ್ತಲಿನೊಳಗೆ ತಡವುತ ನಡೆವ ಮಾನವರು ।
ಧಾರುಣಿಯಲರಸುವರು ಸೌಖ್ಯವ
ತೋರದುದನೀ ಲೋಕದುಗುಡಾ
ಗಾರವಲ್ಲದೆ ಬೇರೆಯಿಲ್ಲೆಂದಾತ ಬಣ್ಣಿಸುವ ॥೬॥

ಆಟದಲಿ ಮೈಮರೆದು ಹರಟೆಯ
ಕೂಟದಲಿ ನಲಿಯುತ್ತ ರುಚಿಕರ
ಪೂಟದಲಿ ಜೀವನದ ಸವಿಯಂಕಾಂಬ ಬಾಲಕರು ।
ನೋಟದಲಿ ಸೊಗಸುವ ವಸುಂಧರೆ
ಮಾಟಗಾರುತಿಯೆಂಬ ಹೊಸಪರಿ
ಪಾಟಿಯಂ ತಿಳಿದವರೆ ಮೂಲನ ನೋವಭಾವಿಪರೇ ॥೭॥

ಪೇಳಿದೀ ವಚನಾರ್ಥವರಿಯದೆ
ಕೇಳುತಿಹ ಸಖರೆಲವೊ ಜೋಗಿವ
ಯಾಳ ನಿನ್ನ ಪುರಾಣನಿಲ್ಲಿಸು ಸಾರಹೀನವದು ।
ಹಾಳುಬಾಯಿನ ನುಡಿಯೊ ಧರಣಿಯೊ
ತಾಳಿ ಬದುಕುತ ಯೌವ್ವನದಿ ನೀಂ
ಬಾಳರುಚಿಯನು ಸವಿಯದಿರ್ಪರೆ ಸಾಕಿದೆಂದವರು ॥೮॥

ಅರರೆ ಬಾಡಿದ ಮೊಗದ ಶೂನ್ಯವ
ಬರಿದೆ ನಿಟ್ಟಿಪ ಕಣ್ಣ ಕದಪಿನ
ಕೆರದ ನೆಲವನೆ ಕೆರೆಯುವಂಗುಟಮೊಂದ ಪಾದಗಳ |
ಇರದೆ ನೈರಾಶ್ಯವನೆ ಕಾರುವ
ಮರಳುಜೋಗಿಯೆ ಲೌಕಿಕದಿ ಪ್ಯೆ
ಮರೆತ ನಮ್ಮನು ರಕ್ಷಿಸೆಂದೇಡಿಪವು ಹಲವುಂದಿ ||೯||

ಹುಟ್ಟಿದಂದಿನ ದಿನದಿನೆಮ್ಮೊಳ
ಗಿಟ್ಟ ಮಮತೆಯ ಭೇದಭಾವವ
ಬಿಟ್ಟುಮರೆಯುತಲಿರ್ದ ನಿನಗೇನಾದುದೋ ಸಖನೇ |
ಸುಟ್ಟಸಂತಸವಳ್ಳಿಯೆನೆ ಮೊಗ
ಗೆಟ್ಟು ಸಂತತಮೇಕೆ ಶೂನ್ಯವ
ನಿಟ್ಟಿಸುವೆಯೆಂದೆವನು ಹಲವರು ಕತೆಯ ಕೇಳುವರು ||೧೦||

ಅಂದಕಿದೆ ಬೇಡೆನಲು ದರ್ಶಕ
ವೃಂದದಕ್ಷವನೆಳೆದು ತನ್ನೊಳೆ
ಬಂಧಿಸುವ ಸುರದೇಹವಿರೆ ತಾರುಣ್ಯದಲಿ ನೀನು |
ಸುಂದರಿಯ ಕೈವಿಡಿದು ದಿವ್ಯಾ
ನಂದವಾರ್ಜಿಸದಿಂತು ಹೃದಯದಿ
ತಂದಪರೆ ನೈರಾಶ್ಯವೆಂಬರು ಮತ್ತೆ ಹಲವುಂದಿ ||೧೧||

ಸಂಪದಕೆ ಮಿತಿಯಿಲ್ಲ ಚೆಲ್ವಿನ
ಪೆಂಪಿಗುಂಸವನಿಲ್ಲ ಯೌವನ
ಗೆಂಪುಮಾಸಿದುದಲ್ಲ ಜನನೀ ಜನಕರಾಪ್ರೇಮ |
ಕಂಪಮೊಂದಿದುದಲ್ಲ ಸಾಜದ
ಲಂಪಿಗುಂ ಕುಂದಿಲ್ಲವಾಗಿರೆ
ತಂಪುಗೊಳದಿಂತಳುವುದೇಕೆಂದವರು ಕೇಳ್ದಪರು ||೧೨||

ಸೊಲ್ಲ ಚೆಲುವಿಗೆ ಮಾರುಹೋಗುವ
ನಲ್ಲ ಕಾಮದ ಭೋಗದಲಿ ಮನ
ವಿಲ್ಲ ಜಗತಿಯ ಸುಂದರತೆಯನು ನೆಚ್ಚುವವನಲ್ಲ |
ಬಲ್ಲಿಮಿತ್ರರಿ ಸಂಜೆಗೆಂಪಿನೊ
ಲೆಲ್ಲವಸ್ಥಿರ ತಗುಳಿ ತಮದಲಿ
ಕೊಲ್ಲಬೇಡಿರೆನುತ್ತ ನುಡಿದನು ಕೊನೆಗೆಶಂಕರನು ||೧೩||

ಬಂದ ಭಾವಾವೇಶದಲಿ ತಾ
.ನೊಂದುದಿನ ಶಂಕರನು ಮಿತ್ರರಿ
ಗೆಂದೊ ನಾಂ ಸದನವನು ಬಿಡುವುದೆ ಸತ್ಯವೆಂದೆನಲು |
ನೊಂದ ಕೆಳೆಯರು ಹೆತ್ತವರಬಳಿ
ವಂದು ಪೇಳ್ದರು ಬಹಳ ನಮ್ರತೆ
ಯಿಂದ ಪುತ್ರನ ಬೆಳೆದ ಯೋಗೋನ್ಮಾದವಾರ್ತೆಯನು ||೧೪||

ಸಾದರದ ಬಿನ್ನಪವ ಸುತನು
ನ್ಮಾದಕತೆಯನು ದೇವರಾಲಿಸಿ
ಪೋದಪೆನು ಮನೆಯಗಲಿ ಶಾಶ್ವತ ಪದವನಾಕ್ರಮಿಸೆ |
ಸಾಧಿಪೆನು ಯೋಗವನು ಚಿತ್ತವ
ನೀಧರೆಗೆ ಕುಡೆನೆಂಬ ತನ್ಮಯ
ಗಾಢಬುದ್ಧಿಯ ಪುತ್ರನೆಂದರು ತಂದೆಯನು ಹಲರು ||೧೫||

ರಾಯರನುಜರು ಸತ್ತ್ರದಿನದಿಂ
ದೀಯೆ ಯೋಗಾಭ್ಯಾಸದಲಿ ನಿಜ
ಕಾಯವಂ ತೋರ್ದಪನು ಬಯಕೆಯ ಮಾತುಮಾತಿನಲಿ |
ಕಾಯುತಿಹ ಸಮಯವನು ಜೀಯರು
ಪಾಯವೀಗಳಿಗೈಯದಿರೆ ಬಲು
ನೋಯುವಂತಾದಪುದನಂತರಮೆಂದರಾತುರದಿ ||೧೬||

ಅಮ್ಮಶಂಕರ ಮೊದಲಿನಂದದಿ
ನಮ್ಮ ಕೂಟದಿ ಬೆರೆಯನೇನನೊ
ಸುಮ್ಮನೆಯೆ ಚಿಂತಿಸುತ ಶೂನ್ಯದಕಡೆಗೆ ಮೊಗಮಾಡಿ |
ಮಮ್ಮಲನೆ ಮರುಗುವನು ಸಂತತ
ಚಿಮ್ಮುವನು ನೈರಾಶ್ಯವೀತನ
ನೆಮ್ಮಿ ಸೊಗಮಿರೆ ಸಲ್ಲದೆಂದರು ಹಲರು ಮಾತೆಯನು ||೧೭||

ಬಿಡದೆ ಸಂತತ ಮೂಲಶಂಕರ
ನೊಡನೆ ಬಾಳನೆ ಬೆರೆಯಿಸಿಪ ಸಂ
ಗಡಿಗರಿಂತೆನೆ ಜನನಿಜನಕರ ಚಿತ್ತದಾಶೆಗಳು ।
ಕಡಲ ತಟದಲಿ ಮಳಲಮನೆಗಳ
ನಿಡಲುಬಾಲರು ತೆರೆಯಬಂಬಲು
ಬಡಿಯೆ ಕೆಡುವಂತಂದು ಕೂಡಿತು ಘನನಿರಾಶೆಯಲಿ ।೧೮॥

ಎಲ್ಲರುಂ ಬಗೆವಂದದಲೆ ಸುತ
ನಲ್ಲುರಿವ ವೈರಾಗ್ಯದಗ್ನಿಯ
ಸೊಲ್ಲಡಗಲನುರಾಗ ತೋಯದ ಧಾರೆಯನೆ ಕರೆವ ।
ನಲ್ಲೆಯೊಬ್ಬಳ ಕೂಡಿಸಲು ಬಳಿ
ಕೆಲ್ಲ ಸರಿಯಹುದೆಂದು ಭಾವಿಸಿ
ಮೆಲ್ಲನರಸಿದರೊರ್ವ ಕನ್ನೆಯ ತಂದೆತಾಯಿಗಳು ॥೧೯॥

ಪತ್ತುಗೆಯಿನನುರಾಗ ರಜ್ಜುವ
ಸುತ್ತಿಸಂಸಾರದಲೆ ಬಂಧಿಸೆ
ಹೆತ್ತವರು ಯತ್ನಿಪುದ ಕಂಡಾ ಮೂಲಶಂಕರನು ।
ಹತ್ತುಬಗೆಯಿಂದರುಹಿ ಮಿತ್ರರ
ನೊತ್ತಿ ಮಾತಾಪಿತರ ಪದದಲಿ
ಬಿತ್ತರಿಸಿ ಪಾಣಿಗ್ರಹಣ ಬೇಡೆಂದು ಪೇಳಿಸಿದ ॥೨೦॥

ಹೆತ್ತವರು ಪುತ್ರನನು ನೋಯಿಸ
ದೊತ್ತದಾತನ ಮದುವೆಮಾಡುವ
ಚಿತ್ತಬಿಟ್ಟೊಡಮದಕೆ ಸಂತಸಪಡದೆ ಶಂಕರನು ।
ಮತ್ತೆಮುಂದಿನವರ್ಷ ತಪ್ಪದೆ
ಸುತ್ತ ಚಿಂತಿಸಿ ಯುಕ್ತಿಯೊಂದನು
ಬಿತ್ತರಿಸಿ ಪಿತನೆಡೆಗೆ ಪೋದನು ನಯದಿನೊಂದುದಿನ ॥೨೧॥

ತಂದೆಯಡಿದಾವರೆಗೆರಗಿ ನಯ
ದಿಂದ ಶಂಕರ ವರಮನನ್ಮತಿ
ಯಿಂದ ಜನಕರೆ ವೈದ್ಯಕವನುಂ ವ್ಯಾಕರಣವೆರಸು ।
ಅಂದದಿಂ ಜ್ಯೋತಿಷವನಧ್ಯಯಿ
ಪಂದಮಾದುದು ಚಿತ್ತವದರಿಂ
ದಿಂದು ಕಾಶಿಗೆ ನಡೆಯಲಪ್ಪಣೆ ಕುಡಿರಿ ತಾವೆಂದ ॥೨೨॥

ಗೈದ ವಿನಯಕೆ ಮುಳಿದು ಗದರಿಸು
ತೋದಿ ಹೆಚ್ಚಿಗೆ ರಾಜ್ಯವಾವುದ
ಸಾಧಿಸುವೆ ಕಲಿತಿಹುದೆ ಸಾಕೈ ನಿನ್ನಯಾತ್ರೆಗಳ ।
ಭೇದಬಲ್ಲೆನು ಬೇಗ ಮದುವೆಯ
ಗೈದಪೆನು ಮನೆಗೆಲಸಗೈವುದ
ಕಾದು ಕಲಿಯೆಂದರುಹಿದಂ ನಂದನನನಾತಂದೆ ॥೨೩॥

ವತ್ಸನಿನ್ನಹೃದಯದೊಳಭೀ
ಭತ್ಸದೋಗವಬಲ್ಲೆನದಕೆ ಚಿ
ಕಿತ್ಸೆ ಮದುವೆಯ ಬೇಗರಚಿಸೆವು ಮರೆಯೊಕಾಶಿಯನು |
ಸತ್ಸುತನವೊಲ್ವಾಳು ಸದನದ
ಲುತ್ಸವಿಸು ತವಬಾಲ ಬುದ್ಧಿಯ
ಕುತ್ಸಿತದೃಷ್ಟಿಯನು ನೀತ್ಯಜಿಸೆಂದಳಾ ತಾಯಿ ||೨೪||

ಒತ್ತಡದ ಕೆಡುಕರಿತ ಶಂಕರ
ಮತ್ತೆಹಲದಿನ ಚಿಂತೆಯಲಿ ಕಳೆ
ಯುತ್ತ ತದನಂತರದಿ ಪಿತನೆಡೆಗೈದಿ ಪದಗಳಲಿ |
ಉತ್ತಮಾಂಗವನಿರಿಸಿ ಕಾಶಿಗೆ
ಚಿತ್ತವೊಪ್ಪದೊಡದನು ಬಿಡಿ ಕೆಲ
ದತ್ತ ವಿಪ್ರನನೊರ್ವನಂ ಬೆಸಕೈವೆನಾನೆಂದ ||೨೫||

ಮಗನ ಬಯಕೆಯನೆಲ್ಲ ಭಂಗಿಸಿ
ದುಗುಡದೊಳಗಾತನನು ಮುಳುಗಿಸೆ
ಬಗೆಯದಾದ್ವಿಜ ತನ್ನಸುತನಿಗೆ ಪೋಗಲಾಜ್ಞೆಯನು |
ಹೆಗಲಿನೊಳು ಕರವಿತ್ತು ಕರುಣಿಸಿ
ಸೊಗದಿ ಪೋಗಾ ಗ್ರಾಮಕಾದೊಡ
ಮಗಲೆ ಮನೆಯನುಮಾತ್ರ ಯೋಚಿಸಬೇಡ ನಡೆಯೆಂದ ||೨೬||

ಈ ತೆರದಿ ಪಿತನುಡಿಯ ನಲಿವಿಂ
ದಾತರುಣ ಕೈಗೊಂಡು ಹರಕೆಯ
ಪಾತೆಯಾಶೀರ್ವದಿಸೆ ತದ್ಗ್ರಾಮದಲಿ ನೆಲೆಗೊಂಡು |
ಪ್ರೀತಿಯಿಂ ಸೇವೆಗಳ ಸಲ್ಲಿಸ
ಧೀತವಿದ್ಯಗೆ ಪ್ರಶ್ನಮೇಣ್ಪ್ರಣಿ
ಪಾತದಿಂದಧ್ಯಯನಗೈಯುತ ಕಳೆದ ಹಲದಿನವ ||೨೭||

ಒಂದುದಿನವಾಗುರುವು ಶಂಕರ
ನೊಂದಿಗಾಡುವ ನುಡಿಯಮಧ್ಯದಿ
ಬಂದುದಾಗೆ ವಿವಾಹವಿಷಯಂ ತರುಣ ಮದುವೆಯನು |
ಎಂದುವೊಪ್ಪೆನು ಪೈಪಮೆನಗದ
ಕೆಂದು ಮೈಮರೆದೊರೆಯೆ ಸೇರಿದು
ದಂದೆ ಸಂಗತಿ ಮೂಲಶಂಕರ ಪಿತನ ಕಿವಿದೆರೆಯ ||೨೮||

ಇಡಲು ಪುತ್ರನನಿನ್ನು ದೂರದಿ
ಕೆಡದಿರದು ಕಾರ್ಯವಿದು ದಿಟವೆಂ
ದೊಡನೆ ತನ್ನೊಳೆ ಬಗೆದು ವಿದ್ವದ್ವರನ ಚಿತ್ತವನು |
ಒಡಬಡಿಸಿ ಶಂಕರನ ಶಾಲೆಯ
ಬಿಡಿಸಿ ಜನಕಂ ವಂಶವಳ್ಳಿಯ
ಬುಡವನನುರಾಗಾಂಬುವಿಂ ನೆನೆಯಿಸಲು ಕರೆತಂದ ||೨೯||

ತರುಣನಡಿಯಿಟ್ಟೊಡನೆಯೇ ಹ
ತ್ತಿರದ ನಂಟರು ಜನನಿಜನಕರು
ನೆರೆದು ಸಿಂಗರಿಸುತ್ತ ಸದನವ ವಸ್ತ್ರಭೂಷಣವ ।
ತರಿಸಿ ಮದುವೆಯ ರಚಿಪ ವಿಭವದ
ಲಿರುವುದಂ ನೆರೆಕಂಡು ಸಂಗತಿ
ಯರಿದು ಚಿಂತಾವನಧಿತೆರೆಿಮುಸಗುತಿರೆ ಬೆರಗಾದ ॥೩೦॥

ಅರರೆ ಬಾಂಧವರಿನಿಬರುಂ ತವೆ
ನೆರೆದು ನಸ್ಸೊರ್ವನನು ಬಂಧಿಸೆ
ಕರುಣೆ ತೋರದೆ ಸಜ್ಜುಗೈದಪರೆನ್ನ ರಕ್ಷಿಸಲು ।
ಬರುವನೊಬ್ಬನುಮಿಲ್ಲ ಮೈಮರೆ
ದಿರಲು ನಾನುಂ ಕೊನೆಗೆ ಕಂಠದ
ಲುರಲು ಬೀಳ್ದಪುದೇನಗೈದಪೆನೆಂದು ಚಿಂತಿಸಿದ ॥೩೧॥

ತನ್ನ ತಾ ಪಾಲಿಸುವುದಂ ಬಿ
ಟ್ಟೆನ್ನು ಬೇರರು ಬಂದು ಪೊರೆದಪ
ರೆನ್ನಲಪ್ಪುದೆ ಕಾಡುವರು ಕಾಪಾಡುವವರಾರು ।
ತನ್ನ ತಾನೇ ಸಲಹಿಕೊಳ್ಳುವೆ
ನೆನ್ನುತಾ ಶಂಕರನು ನೆಚ್ಚುತ
ತನ್ನನೇ ತಾ ಮನದಿ ತಾಳಿದಕೊನೆಗೆ ಧೈರ್ಯವನು ॥೩೨॥

ತಿಂಗಳುರುಳಿತು ಮೂಲಶಂಕರ
ನಂಗನೆಯ ಕೈವಿಡಿವುದೀಕ್ಷಿಸೆ
ಕಂಗಳಿಂ ಹಾರ್ದಿಹರು ಪರಿಜನ ಮೂಲ ಮಂದಿಗಳ |
ಸಂಗ ಬೆರೆಯದೆ ವಾದಿಸದೆ ಜನ
ಕಂಗೆ ಬೇಡಿಕೆ ಸಲಿಸದಿರ್ದಪ
ನಂಗಳದಿ ಧೂಳಿಡಿದ ಮುಕ್ತಾಫಳದ ಬೆಡಗಿನಲಿ ||೩೩||

ದ್ವಾರ ಹೂ ಚಿಗುರುಗಳ ಬಣ್ಣದ
ತೋರಣದಿ ರಾಜಿಸಿತು ಮಂಟಪ
ಬೀರಿದುದು ಹೊಸಬೆಡಗ ಕಂಪೊಗೆದಿರ್ಪ ಶುಭಜಳದಿ |
ಸಾರಿಸಿತು ನೆಲ ರಂಗವಲ್ಲಿಗ
ಳೋರಗೆಯಲೋಡಿದುದು ವಿಪ್ರಾ
ಗಾರ ಸಂತಸ ಜಳಧಿಯೆನಿಸಿತು ನಾಳೆ ಮದುವೆಯೆನೆ ||೩೪||

ಅಂದು ವಿಪ್ರನ ಮನೆಯ ಜನಗಳು
ಮಿಂದು ಚೆಲ್ವಿನ ವಸ್ತ್ರಭೂಷಣ
ವಂದಮಿಗೆ ಧರಿಸುತ್ತ ನರನಾರಿಯರ ರೂಪದಲಿ |
ಸುಂದರತೆಯೇ ಸುಳಿದುದೆಂಬುವ
ದೊಂದುಬೆಡಗಿಂದೇಳುತಿರ್ಪಾ
ನಂದ ಜಲಧಿಯ ತೆರೆಗಳೆನುವೊಲು ಕಂಗೆನಂದಿಹರು ||೩೫||

ಮನೆಯೊಳೆಲ್ಲೆಡೆಯುತ್ಸವಂಗಳ
ಹೊನಲ ಕಲಕಲರವಮೆ ಕಿವಿದೆರೆ
ಯೆಸುಗೆ ಮೂಲನ ಹೃದಯರಂಗದಿ ಸಮರಭೇರಿಗಳ |
ನಿನವಮೊಳಗಿತು ಜನದ ಮೊಗದಲಿ
ಮಿನುಗೆ ನಗೆಮಿಂಚಲತೆ ತರುಣನ
ಮನವಲನಲಜ್ವಾಲೆ ಭುಗ್ಗೆನುತೆದ್ದು ದಳ್ಳಿಸಿತು ||೩೬||

ಸದನದೊಳಗಂ ಹೊರಗಮೆಲ್ಲೆಡೆ
ಮುದವ ಬೀರುವಲಂಕೃತಿಗಳಿರೆ
ಸುದತಿಯರ ಸಂಗೀತ ಮಂಗಳವಾದ್ಯಗೀತಗಳ |
ಮದುವೆಗೊಪ್ಪುವ ವೈಭವಂಗಳು
ಹೃದಯವುಬ್ಬಿಸುತಿರಲು ಶಂಕರ
ನೆದೆಯಲಾದಿನ ಮೊಳಗಿದುದು ವೈರಾಗ್ಯಜಯಘೋಷ ||೩೭||

ಅಕಟ ನನ್ನಯ ಭಾವವರಿಯದೆ
ಸಕಳರುಲಿವರೆ ಚಣದ ದಾರದ
ವಿಕಟ ದುಗುಡದ ಖಡ್ಗ ಸಿರದಲೆ ಬಳಕುತಿರ್ಪುದನು |
ವಿಕಳಮತಿಗಳು ಬಲ್ಲರೇ ಸುಖ
ಮುಕುಳ ಹೂವಹ ಮೊದಲೆ ನಿಜದಳ
ನಿಕರಮೊಣಗಲ್ಕಿಹುದನೆಂದಾ ತರುಣ ಶೋಕಿಸಿದ ||೩೮||

ಅಮ್ಮನುತ್ಸವಮುಪ್ಪನಾನಂ
ದಮ್ಮನೆಗೆ ಬಂದವರ ಸಂತಸ
ತಮ್ಮದಿರ ಕುಣಿದಾಟ ತಂಗಿಯ ಮಂಗಳದನೋಟ |
ನೆಮ್ಮಿ ತನ್ನನು ವರಿಸೆ ಬಂದಳ
ಹೊಮ್ಮುತಿಹ ಸಿಹಿಪ್ರೇಮವೆಲ್ಲವು
ಮೊಮ್ಮಗೇ ಮರೆಯಹುದ ನೆನೆದಾತರುಣ ಕಂಪಿಸಿದ ||೩೯||

ಹೃದಯದಲಿ ಕೊನೆವರೆಗೆ ಯತ್ನದಿ
ಹುದುಗಿಸಿಟ್ಟಿಹ ಭಾವವಂ ಜನ
ರೆದುರಿಗೊರೆಯದೆ ಸಂಜೆಯಲಿ ಮನೆಬಿಡಲು ನಿಶ್ಚಯಿಸಿ |
ಉದಿಸುತಿರೆ ಮುದದುಗುಡವೆರಡುಂ
ಹೃದಯದಲಿ ಸಲ್ಲಿಸಿದ ಶಂಕರ
ಸದನದೊಳಗಿನ ಬಂಧುಬಳಗಕೆ ಕೊನೆಯ ಮಾತುಗಳ ||೪೦||

ಹೊತ್ತೆನನ್ನುದರದಿ ನೀನೊಂ
ಬತ್ತುತಿಂಗಳು ರಕ್ತವನೆಬಸಿ
ದಿತ್ತೆ ಮಾತೆಯೆ ಬಳಿಕ ವೇದನೆಗಳನು ಲೆಕ್ಕಿಸದೆ |
ಹೆತ್ತೆಸಲಹಿದೆ ನಿನ್ನುಪಕೃತಿ
ಗಿತ್ತು ದುಃಖದಹೊರೆಯಪೋದಪೆ
ನೆತ್ತೊ ಮನ್ನಿಪುದೀಕೃತಘ್ನನನೆಂದ ಚಿತ್ತದಲೆ ||೪೧||

ತಾಯಿ ಮಮತಾಮೂರ್ತಿಯಮೃತ
ಬಾಯಿ ಮಾತಾಪುತ್ರರೀ ಸಮ
ವಾಯವಿಂದಿಗೆ ತೀರಿದುದು ನಾಂ ನಿನ್ನ ಮಗನಲ್ಲ ।
ತಾಯಿ ನೀನೆನಗಲ್ಲವೆನೆ ತರು
ವಾಯ ದೋದಿಪುದೇಕೆನಡೆದಪೆ
ನೋಯಬೇಡೆಂದಮ್ಮಗೆಂದನು ತರುಣಚಿತ್ತದಲಿ ॥೪೨॥

ತಂದೆ ಹುಟ್ಟಿದ ದಿನದಿನೀವರ
ವೊಂದೆ ಬಗೆಯಿಂಪ್ರೀತಿತೋರಸು
ವಿಂದ ವಿದ್ಯೆಯಕಲಿಸಿ ಬೆಳೆಸಿದಿರಡಸಿವರೆ ಮುಪ್ಪು
ಮುಂದೆ ನಿಮ್ಮಿರ್ವರಿಗೆ ನೆರವಹೆ
ನೆಂದು ಬಗೆದಿರಿ ನಿಮ್ಮಸಾಲವ
ದೊಂದೆರಡೆ ಮನ್ನಿಸುವುದೆಂದನು ಮನದಿ ಜನಕಂಗೆ ॥೪೩॥

ಆದೊಡಂ ಪಿತೃದೇವ ನನ್ನಲಿ
ಗೈದ ನಿಮ್ಮುಪಕಾರವೆಲ್ಲವ
ನಾದರಿಸದಾನಿಂದು ಬೆನ್ನನು ತೋರಿ ನಿಮ್ಮೆಡೆಗೆ ।
ಪೋದಪೆನು ಬಾಂಧವ್ಯಋಣಕೊನೆ
ಯಾದುದಿಂದಿಗೆ ಕನಲದಿರಿಮೃತ
ನಾದೆನಾನೆಂದರಿಯಿರೆಂದನು ಚಿತ್ತದಲೆ ಮೂಲ ॥೪೪॥

ತಾರದಿರು ನನಗಾಗಿ ಕಣ್ಣೊಳು
ನೀರ ಮುದ್ದಿನ ತಂಗಿ ಪ್ರೇಮಕು
ಮಾರಿ ನೀನಳಬೇಡ ನನ್ನನು ಕಟುಕನೆನಬೇಡ |
ದೂರ ನೀನಿಡಬೇಡ ಹುಚ್ಚಿನ
ದಾರಿ ವಿಡಿವೆನು ಮನ್ನಿಸೆನ್ನನು
ದಾರೆ ತಪ್ಪಿರಲೆಂದೊರೆದ ಚಿತ್ತದಿ ನಿಜಾನುಜೆಗೆ ||೪೫||

ತಮ್ಮದಿರೆ ನೀವುಗಳು ನನ್ನನೆ
ನೆಮ್ಮಿ ಸುಖದಿಂದಿರ್ದಿಕ್ಕೈಸಲೆ
ನಿಮ್ಮಬಂಧನ ಕಡಿವೆನೀದಿನವೆನ್ನಬೀಳ್ಕುಡಿರಿ |
ನಿಮ್ಮವನು ನಾನಲ್ಲ ನಿಷ್ಠುರ
ನೆಮ್ಮಸೋದರನೆನ್ನದಿರಿ ನೀ
ವಮ್ಮನಂ ಸ್ಪೈರಿಸಿರಿ ಪೋದಪೆನೆಂದ ಚಿತ್ತದಲಿ ||೪೬||

ತರಳೆ ನಿನ್ನಯ ಕರವನೆನ್ನೀ
ಕರದಲಿರಿಸುತ ದಂಪತಿಗಳೆನೆ
ನೆರೆದೊಡಂ ಜನವೆದೆಯಲಾವುದು ಬೇರೆಭಾವನೆಯ |
ಧರಿಸಿದವನಾನಲ್ಲ ಪ್ರೇಮಳ
ತೆರದೆ ನೀನುಂ ತಂಗಿಯೇಸರಿ
ಮರುಗದಿರು ನಾಂಪೋಪೆನೆಂದನು ಮನದಿಕನ್ನಿಕೆಗೆ ||೪೭||

ಕಪ್ಪು ಮೋಡಗಳಂಬರವಕವಿ
ದಪ್ಪಿರಲು ನೆಲವನಿತು ಗವಗವೆ
ನಿಪ್ಪ ಬೆಡಗಿಂ ಹೃದಯದೇಶವ ಬೆಳಗಿನಿಂದಿಡಿದು |
ಅಪ್ಪಿರಲು ಕಡುಶೋಕಜಲಧರ
ಸಪ್ಪೆ ಮೊಗದಿಂದಿರ್ದ ಶಂಕರ
ನಿಪ್ಪ ತನ್ನಯ ಕೋಣೆಯಲಿ ಸೂರ್ಯಾಸ್ತವನುಹಾರ್ದ ||೪

ಸಾಗಿದನು ದಿನವಂತೆ ಪಶ್ಚಿಮ
ಸಾಗರಕೆ ರವಿದೇವ ಸಂಧ್ಯಾ
ರಾಗಮುದಿಸೊಂದೆರಡು ಗಳಿಗೆಯಕಾಲಸಂಭ್ರಮಿಸಿ |
ಹೋಗಲಿರ್ಪಾ ತರುಣನೆದೆಯನು
ರಾಗದೊಂದಿಗೆ ಬರಿಯ ಶೂನ್ಯದಿ
ನೀಗಿದುದು ತನ್ನಿರವ ಕತ್ತಲೆ ಬೆಳಕಸಂಧಿಸಿತು ||೪

ಕತ್ತಲಡಸಿತು ಶಂಕರನ ಮನ
ವತ್ತಕುದಿಗೊಳುತಿತ್ತು ಹೃದಯವ
ಮುತ್ತಿಕವಿದಿಹ ಶೋಕಜಳಧರ ಸಂಕುಲವ ಜವದಿ |
ಎತ್ತೊಸರಿಸಿತು ವಿಗಡವೇಗಂ
ಬೊತ್ತವೈರಾಗ್ಯಾನಿಲಂ ಪದ
ವೆತ್ತಿಶಂಕರ ಕೋಣೆಯಿಂ ಹೊರಗಿಟ್ಟ ಚಿಂತಿಸುತ ||೫

ಜನನಿ ನಮಿಸುವೆ ತಂದೆವಂದಿಪೆ
ನನುಜರ್ೕ ನಲ್ವರಕೆಗಳ ಕೊಳಿ
ರನುಜೆ ನಿನಗಿದೊ ನನ್ನಯಾಶೀರ್ವಾದ ಬಾಂಧವರೆ ।
ಕನಲದಿರಿ ಕನ್ನಿಕೆಯೆ ನೋಯದಿ
ರೆಸುತ ಶಂಕರನೆಲ್ಲರಂ ನಿಜ
ಮನದಲೇ ಮತ್ತೊಂದುಸಲ ನೆನೆಯುತ್ತ ಹೊರವಂದ ॥೫೧॥

ಕೋಣೆಯಿಂ ಹೊರವಂದುವಿರಹದ
ಬಾಣನೆದೆಯಂ ಚುಚ್ಚುತಿರೆ ದೆಸೆ
ಗಾಣದವನಂದದಲಿ ಸದನದ ಮೂಲೆಮೂಲೆಯನು ।
ಮೇಣು ತೊಲೆತೊಲೆಗಳನು ನಿಟ್ಟಿಸಿ
ಮಾಣು ಮನೆಯೇ ತನ್ನತನಕೊನೆ
ಗಾಣುತಿದೆ ಹೊರಗಾದೆ ನಿನ್ನಿಂದೆಂದ ಚಿತ್ತದಲಿ ॥೫೨॥

ಮದುವೆಗೋಸುಗ ಸಿಂಗರಗಳಿಂ
ಮುದವ ಬೀರುತಲಿರ್ಪ ಸುಂದರ
ಸದನದೆಲ್ಲೆಡೆಗಳನು ಕೊನೆಸಲನೋಡಿ ಹೆತ್ತವಳ ।
ಉದರದಿಂ ಹೊರವಂದ ದಿನದಿಂ
ದಿದುವರಂ ನೆಳಲಿತ್ತಮನೆಯೇ
ಹೃದಯವಂ ಕೊರೆಯದಿರು ಪೋದಪೆನೆಂದ ಚಿತ್ತದಲಿ ॥೫೩॥

ಮನೆಯೆ ಶೈಶವ ಲೀಲೆಗಳ ನೆಲೆ
ಮನೆಯೆ ಬಾಲ್ಯದ ಮಧುರನೆನಹಿನ
ಕೆನೆಯೆ ಯೌವನದಿರವ ಕ್ರೀಡಾವನವೆ ಶೋಕಗಳ |
ತೆನೆಯೆ ಬಾಳಿನಗೊನೆಯೆ ನೀಮ
ನ್ಮನವನೆಳೆಯದಿರಿದಕೊ ನನ್ನೀ
ಕೊನೆಯವಂದನೆ ಕೊಳ್ಳೆನುತ ಹೊರವಂದನಾತರುಣ ||೫೪||

ಚಿತ್ತದೊಳಗುದ್ಭವಿಪ ಮೋಹವ
ನೊತ್ತಿ ವೈರಾಗ್ಯದಕೆಳಗೆ ಮುಂ
ದಿತ್ತು ಪವನನು ಬಂದುಹೆಬ್ಬಾಗಿಲಲಿ ನಸುನಿಂದು ||
ಎತ್ತಿಕಂಗಳ ಸದನನಿಟ್ಟಿಸಿ
ಮತ್ತೆಮುಂದಕೆ ನಡೆದು ಯೋಗೋ
ನ್ಮತ್ತ ಶಂಕರನೊಂದು ಸಲ ಹಾ! ಎಂದು ನಿಡುಸುಯ್ದ ||೫೫||

ಯೌವನವಸಂತದಲಿ ಚೆಲ್ವಿನ
ಹೂವಗಂಧಕೆ ಚಿತ್ತಸೋಲದ
ತೀವ ಮಮತಾಯುತರ ಮಾತಾಪಿತರ ಬಾಂಧವರ |
ಭಾವ ಮಧುರ ಪ್ರೇಮಕೊಲಿಯದೆ
ಸಾವಿರದ ಸಂಪತ್ತಿಗುಲಿಯದೆ
ಸಾವಿರದ ಸಂಪತ್ತಗಳಿಸಲು ನಡೆದನಾತರುಣ ||೫೬||

ಮಂದಿ ತನ್ನಯ ಶುಭವಿವಾಹಾ
ನಂದಕೋಸುಗ ನೆರೆದಲಂಕೃತ
ಸುಂದರಾಲಯ ತಮದಿ ನಸುಮುಸುಕಾಗಿ ದೂರದಲಿ |
ಹೊಂದಿಸಿದ ದೀವಿಗೆಗಳಿಂ ಹಿಂ
ದೆಂದೊ ಕಂಡಿಹ ಸೊಗದ ಕನಸಿನ
ಬಂಧುರದ ನೆನಹಂತೆ ಕಾಣಿಸೆ ನಡೆದ ಶಂಕರನು ||೫೭||

ಹೊತ್ತುಮೂಡಲು ಪೂರ್ವದಲಿ ತಲೆ
ಯೆತ್ತುವಂ ದಿನಕಾಂತ ಬಹುದಿನ
ಚಿತ್ತದಲಿ ನೆಲೆಗೈದ ಮಂಗಳಗಳಿಗೆ ಸಂಧಿಸಲು |
ಸುತ್ತಸಂತಸವೆಳಕೆ ಹರಿವುದೆ
ನುತ್ತೆಜನಮಿರೆ ಮರೆಯಲಡಗಿದ
ನೆತ್ತೊ ತರುಣ ಸುಧಾಕರಂ ಮನವೆಳೆಯೆ ಪರಮಾತ್ಮ ||೫೮||

|| ಇಂತು ಮೂರನೆಯ ಸಂಧಿ ||



# ನಾಲ್ಕನೆಯ ಸಂಧಿ

**ಸೂಚನೆ—ಸಿದ್ಧಪುರದಲಿ ತಂದೆಯಡಿಯಲಿ**
**ಬದ್ಧನಾಗಿರ್ದಂತೊ ನುಸುಳುತೆ**
**ಶುದ್ಧಚೈತನ್ಯಂ ಹಲವುಕಡೆ ಹುಡುಕಿದನು ಗುರುವ ॥**

ಆಲಿಸಿರಿ ಬಾಲಕರೆ ಶಂಕರ
ನಾಲಯಾಂಬುಧಿಯಲ್ಲಿ ಹರ್ಷೋ
ತ್ತಾಲ ಲಹರಿಗಳೇಳುತಿಗೆ ಪೂರ್ವದಲಿ ಕೆಂಬೆಳಕು ।
ಓಲಗಿಸುತಿರೆ ಬಳೆದತಿಮಿರದ
ಜಾಲವಂ ಕಿತ್ತೆಸೆದು ಮೂಡಿದ
ಬಾಲದಿನಮಣಿ ತುಂಬಿಸುತ ಹೊಸಹುರುಪಜೀವರಲಿ ॥೧॥

ಮಂಗಳಾನಕ ಮೊಳಗಿದುದು ತಮ
ಭಂಗದೊಡನೆಯೆ ಹೃಜ್ಜಲಜಗಳು
ಹಿಂಗದುತ್ಸವದೊಡನೆ ನಗುತಿರೆ ವಸ್ತ್ರಭೂಷಣದ ।
ಸಂಗಕಾಂತಿಯಲೆಸೆವ ಮಂಗಳ
ಮಂಗವಡೆದಂತಿರ್ದ ಸುಂದರ
ದಂಗನೆಯರೋಡಾಡುತಿರ್ದರು ವಿಪುಲಸಡಗರದಿ ॥೨॥

ದೇವಿಯರು ಹಲಮುಂದಿ ಪಾವನ
ದೇವನಂ ಸ್ತುತಿಸುತ್ತ ಶಂಕರ
ದೇವನಾಲಯಕ್ಕೈದಿ ದ್ವಾರದಿನಿಂದು ಸಂಭ್ರಮದಿ |
ಈವರಂ ಶಂಕರನೆ! ನಿದ್ರಿಪು
ದಾವನೀತಿಯೊ ಸತಿಯವದನದ
ಠೀವಿನಿರುಕಿಸಲೇಳು ಬೇಗೇಳೆಂದು ಕೂಗಿದರು ||೩||

ಉತ್ತರಂ ಸಿಗದಿರಲು ಹೃದಯದಿ
ಬಿತ್ತರಿಸಿಮುದು ಕಳವಳಂ ಹಿಂ
ದೊತ್ತಿದರು ಬಾಗಿಲನು ಕಂಡರು ಬರಿಯಹಾಸಿಗೆಯ |
ಚಿತ್ತದಲಿ ಸಂದೇಹ ಮೂಡಿದು
ದತ್ತನಿಲ್ಲದೆ ದೇವಿಯರು ವರ
ನೆತ್ತೊಮರೆಯಹನೆಂದು ನುಡಿದರು ತಂದೆತಾಯ್ಗಳಿಗೆ ||೪||

ಹರಡಿತೆಲ್ಲೆಡೆ ಕಳವಳಂ ನೆರೆ
ಮರುಗಿದುದು ಜನಮೆತ್ತನಡೆದನೊ
ಕರೆಯಿರಾಳ್ಗಳ ಹುಡುಕಲೆಲ್ಲೆಡೆ ದುರುಳಶಂಕರನ |
ನೆರೆದಿರಲು ಬಾಂಧವರು ಕಡುನಿ
ಷ್ಕರುಣ ವಂಶದ ಕೀರ್ತಿಯನೆತಾಂ
ಮರಳಿನಲಿ ಸೇರಿಸಿದನಕಟಕಟೆಂಬ ದನಿಯಾಯ್ತು ||೫||

ಪುನೆಯಲಂಗುಲದಿನಿತನು ಬಿಡ
ದೆನಿತೊ ಹುಡುಕಿದರೆಲ್ಲಿಡೆಯೊಳಂ
ಕೊನೆಗಮಾಶಂಕರನಕಾಣದೆ ವದನಬಾಡಿದುದು ।
ಜನಕೆಮದುವೆಯ ಮಂಗಳಾನಕ
ನಿನದಮಡಗಿತು ಬಲಿದಶೋಕವ
ಹೊನಲುತೆರೆಗಳನೆಸೆದು ಹರಿದುದು ಭರದಿಮುಕ್ಕರನೆ ॥೬॥

ಮದುವೆಯುತ್ಸವಸುಮನ ಹೆತ್ತಾವ
ರೆದೆಯ ಸುಯ್ಲಿನ ಬಿಸುಪಿನಲಿ ಬಾ
ಡುದುರಿದುದು ಮಂಗಳದ ಮಂಜುಳವಾದ್ಯಗೀತೆಗಳು ।
ಉದಿತ ಹಾಹಾಕಾರ ರವದಲಿ
ಹುದುಗಿದುವು ಮರೆಯಾಯ್ತುನಗೆಗಳು
ಸದನ ಮಸಣದ ರೂಪವಾಂತುದು ನುಸುಳೆಶಂಕರನು ॥೭॥

ಒಂದುಕಡೆ ಸುತಮೋಹ ಮತ್ತೊ
ನ್ನೊಂದುಕಡೆ ಸುಡುಗೋಪಬಿಸಿಲಿನ
ಲೊಂದುಗೂಡಿದ ಬೆಂಕಿಯಂತುರದೇಶವಂ ಸುಡಲು ।
ಬೆಂದುನೊಂದಾತಂದೆ ಕುದುರೆಯ
ಮಂದಿಗಳ ಬರಮಾಡಿ ನುಸುಳಿದ
ನಂದನನ ಹುಡುಕಲ್ಕೆ ಕಳುಹಿದನಾಕ್ಷಣಮೆ ಜವದಿ ॥೮॥

ಕುದುರೆಯಾಳ್ಗಳು ಕೆಲದದೂರದ
ಪೊದರುಗಳ ಕತ್ತರಿಸಿ ಮೆದೆಗಳ
ಸದೆದು ಮನೆಗಳತೆರೆದು ಕೆರೆಗಳ ನದಿಯಸರಸಿಗಳ |
ಕದಡಿ ಗುಡಿಗಳೊಳರಸಿ ಮರಗಳ
ನೊದರಿ ಕೊನೆಗಂ ತರುಣ ಸಿಗದಿರೆ
ಕುದಿದು ಹಿಂದಿರುಗೊರೆದರಾ ನಿರ್ಭಾಗ್ಯಭೂಸುರನ ||೯||

ಮಿಡಿದು ಕಂಬನಿಗಳನು ನೆರೆಬೆಂ
ದೊಡಲ ತಾಯ್ತಂದೆಗಳು ಕುಳಿತರು
ಬಿಡದೆ ಬೋದಿಸುತುಳಿದರೊಡಹುಟ್ಟಿದರು ಬಾಂಧವರು |
ನುಡಿದೆರಡು ಸ್ಥೈರಣೆಯ ನುಡಿಗಳ
ನಡೆದರಾಲಯಗಳಿಗೆ ಸಿಂಗರ
ಸುಡುಬನದ ಬೆಳದಿಂಗಳಂದದಲಿತ್ತು ಬಿಮ್ಮನಿಸಿ ||೧೦||

ಒರೆವುದಿನ್ನೇನತ್ತ ಮದುವೆಯ
ಬರವೆ ತಾಯ್ತಂದೆಗಳ ನಲಿವಿಗೆ
ಬರವೆನಿಸಿ ಕಣ್ಣೀರೆಭೋಜನಮಾಗಲಾಲಯದಿ |
ಕೊರಗುತಿರ್ದರು ತರುಣನೀಕಡೆ
ತೆರತೆರದ ಬವಣೆಗಳ ಸೈರಿಸು
ತರಸಿ ಗುರುಗಳನಲೆಯುತಿರ್ದನು ಹಳ್ಳಿಹಳ್ಳಿಯಲಿ ||೧೧||

ಮೂರುದಿನವರಮಿಂತು ಶಂಕರ
ದಾರಿನಡೆದಿರಲೊರ್ವನರ ಟಂ
ಕಾರಪುರದಾ ಕೃಷ್ಣನಾತ್ಮಜ ಮೂಲಶಂಕರನು ।
ಜಾರಿರಲ್ಮನೆಯಿಂದ ಮದುವೆಯ
ಪಾರ ಸಂಭ್ರಮದಲ್ಲಿ ರಾಹುತ
ರಾರುಜನ ಬಂದಿರ್ದರರಸುತಲಿಲ್ಲಿವರಮೆಂದ ॥೧೨॥

ಪೊಸಮಸೆದ ಕಣೆಯಂತೆದಾರಿಗ
ನುಸಿರಿದೀನುಡಿ ಚುಚ್ಚಲಿದೆ ಕಂ
ಪಿಸಿತು ಜನನೀಜನಕಸೋದರಿಸೋದರಾದಿಗಳ ।
ಮಸೆವ ಭೀಕರಶೋಕಚಿಂತನ
ಮುಸುಕಿದುದು ಚಿತ್ತವನು ಕುದಿಯುವ
ಬೆಸನದೊಂದಿಗೆ ಭೀತಿಹಿಂಡಿತು ತಳೆದಧೈರ್ಯವನು ॥೧೩

ಆದೊಡಂ ತನ್ನೆದೆಯ ಭಾವವ
ನಾದಯಾಳಂ ಹೃದಯದಲಿಮರೆ
ಗೈದು ತಾನಪರಾಧಿಯೆಂಬುದ ಹೊರಗೆ ತೋರಿಸದೆ ।
ಹಾ! ದುಗುಡ ನಿಷ್ಪಾಪ ಭೂಸುರ
ಗಾದುದಲೆ ನಂದನನು ದುಷ್ಕೃತಿ
ಗೈದನೆಂದುಸಿರೊಯ್ಯನೊಯ್ಯನೆಸುಯ್ದು ಮುನ್ನಡೆದ ॥೧೪॥

ಪುರಪುರವ ತಿರುಗುತ್ತ ಶಂಕರ
ಗುರುವನರಸುತ್ತಿರಲು ಸಾಯಲಿ
ಪುರದಿ ಸಾತ್ವಿಕಭಕ್ತನೊರ್ವನು ಶಿಷ್ಯರೊಡಗೂಡಿ |
ಮೆರೆವನೆಂಬುದಕೇಳಿ ತತ್ಪುರ
ವರವಶೀಘ್ರವೆಸೇರಿಯೋಗದ
ತಿರುಳನರಿಯಲು ಯತ್ನಗೈದನು ನೆಲಸಿ ತನ್ಮಠದಿ ||೧೫||

ಇರಲಿರಲು ಶಂಕರನ ಕಾಮನೆ
ಯರಿತನೊರ್ವ ಬ್ರಹ್ಮಚಾರಿಯು
ತೆರಳಿ ನೈಷ್ಠಿಕ ಬ್ರಹ್ಮಚರ್ಯದ ರೀತಿನೀತಿಗಳ |
ಅರುಹಿ ಸತ್ಪ್ರೇರಣವನೀಯಲು
ಪರಮಹರ್ಷದಿ ತರುಣ ತದ್ವ್ರತ
ಧರಿಸಿದನು ತದ್ಬ್ರಹ್ಮಚಾರಿಯ ಕರದಿ ವಿಧಿಯಿಂದ ||೧೬||

ಮತ್ತೆ ಕಾಷಾಯಾಂಬರವನವ
ಗಿತ್ತು ಹಸ್ತದಿ ಪಾತ್ರಕಂಗೊಳಿ
ಸುತ್ತಿರಲು ಗಂಭೀರದನಿಯಿಂದೀಕ್ಷೆಯಿತ್ತವನು
ಉತ್ತಮನೆ ನವನಾಮವೊಂದನು
ಬಿತ್ತರಿಪೆ ನಿನಗಿಂದು ನೀನೀ
ಹೊತ್ತಿನಿಂ ಶ್ರೀಶುದ್ಧಚೈತನ್ಯನಹೆ ಕೇಳೆಂದ ||೧೭||

ವಾಸಿಸುತೆ ತನ್ಮಠದಿ ಕತಿಪಯ
ವಾಸರಂಗಳ ತನಕ ಬಿಡದ
ಭ್ಯಾಸಿಸುತೆ ಯೋಗವನನಂತರ ತನ್ನಕಾಮಿತದ ।
ಆಸುವಿದ್ಯಾಗ್ರಹಣ ಸಾಧನ
ದಾಸೆ ತೀರದೆ ವಿಮಳಸತ್ಯೋ
ಪಾಸಕಂ ಕಾಂಗಡಕೆ ಬಂದನುಸಾಧುಮಂಡಳಕೆ ||೧೮||

ತುಂಬಿದಾ ಸಾಧುಗಳ ಬಾಹ್ಯಾ
ಡಂಬರಕೆ ಬೇಸತ್ತು ಮಠದಲಿ
ಬೆಂಬಲಂ ಸಿಗದೆಂದು ನಗರದಿನೆಲಸಿ ಚೈತನ್ಯ ।
ನಂಬಿದೇವನ ಮೂರುಮಾಸ ವಿ
ಳಂಬಿಸುತ್ತಿರೆ ಸಿದ್ಧಪುರದಲಿ
ಮುಂಬರಿವ ಕಾರ್ತಿಕದ ಜಾತ್ರೆಯು ನೆರೆವುದಾಲಿಸಿದ ||೧೯||

ಸಿದ್ಧಪುರದಲಿ ನೆರೆವಕೂಟದಿ
ಸಿದ್ಧಯೋಗಿಗಳಾವರಾದೊಡ
ಮುದ್ಧರಿಸೆ ಸಿಗಬಹುದುನನ್ನನೆನುತ್ತ ಚಿಂತಿಸುತ ।
ಶುದ್ಧ ಚೈತನ್ಯಂ ಪುರವನವಿ
ರುದ್ಧಗತಿಯಿಂದಗಲಿ ಗಡಿಯಲಿ
ಬದ್ಧಯತ್ಯಂಬರನನೊಬ್ಬನನಂದುಸಂಧಿಸಿದ ||೨೦||

ಮೊದಲೆ ತತ್ಸನ್ಯಾಸಿ ತರುಣನ
ಸದನ ನೆರೆಹೊರೆಯೆಲ್ಲಬಲ್ಲವ
ನೊದವಿದುದು ಪರಿವಾರದೊಡನಾತಂಗೆ ಹತ್ತಿರದ |
ವಿದಿತಪರಿಚಯುವದರಿನಿಂ ಹಿಂ
ಬದುಕ ನೆನಹುಗಳುದಿಸೆಮೃದುಲ
ಹೃದಯನೊಂಪುದು ಶುದ್ಧಚೈತನ್ಯಂಗೆ ತತ್ಕ್ಷಣವೇ ||೨೧||

ಸದನವಗಲಿದನಂತರಮಿದೇ
ಮೊದಲು ಪರಿಚಿತನಾದನೊಬ್ಬನ
ವದನಕಂಡುದರಿಂದ ಕಂಬನಿಗರೆದು ಕಂಠದಲಿ |
ಉದಿಸೆ ಗದ್ಗದ ಕಾಯಕಂಪಿಸೆ
ಕುದಿವ ಚಿತ್ತದ ಬೇಗೆಸಹಿಸದೆ
ಹೃದಯ ತೆರೆದೆಳಿಮಗುವಿನಂತಳಲಿದನು ಚೈತನ್ಯ ||೨೨||

ಮೊದಲು ತರುಣನ ಕಾವಿವಸ್ತ್ರದ
ಬದುಕನೀಕ್ಷಿಸಿ ನಕ್ಕೊಡಂ ಸ್ವ
ಹೃದಯ ಬಿಚ್ಚಳುತಿರ್ಪ ಚೈತನ್ಯನನು ಕಂಡೊಡನೆ |
ಉದಿಸೆ ಮರುಕಂ ನಯದಿನಾಯತಿ
ಸದನ ಬಿಟ್ಟೈಯದೇಕೆ ಮನೆಯಲಿ
ಪದವಿಡೆಯ ನೀಮರಳಿ ಎನ್ನುತಲಂದು ಬೆಸಗೊಂಡ ||೨೩||

ಇಂತು ಸಾಧುವು ಕೇಳೆ ಚೈತ
ನ್ಯಂ ತೋರಿದೆ ಸದನವನು ಗಳಿಸಲ
ನಂತಜೀವನವರಿಯರಿಂದಿಗುವಾಂ ಮನೆಗೆ ಮರಳಿ |
ಓಂತಿರುಗೆ ಕಾರ್ತಿಕದಿ ಸೇರುವ
ಸಂತೆಗೋಸುಗ ಸಿದ್ಧಪುರದೆಡೆ
ಮುಂತೆರಳುತಿಹೆನೆಸುತ ನಿಶ್ಚಮನಾಗಿ ಮುಂದರಿದ ||೨೪||

ಇಂತುಸಿರಿ ಮುಂದರಿದ ಚೈತ
ನ್ಯಂ ತಿರುಗಿ ಹಲಪುರಗಳನುಭವ
ವಂ ತಳೆದು ತಿಳಿದರನು ಬೆಸಕ್ಕೈಯುತ್ತಮಾರ್ಗದಲಿ |
ಅಂತದೊಳು ತಾಂ ಸಿದ್ಧಪುರವನು
ಸಂತೆಸೇರುವ ದಿನಕೆ ಸೇರುತ
ಸಂತಜನ ಪಲರಿಳಿದ ಶಿವಮಂದಿರದಿ ನೆಲೆಗೊಂಡ ||೨೫||

ದೇಗುಲದಿ ನೆಲೆಸಿರ್ದ ಸಂತರ
ನಾ ಗುರೂನ್ನತಿಕಾಮನೋಲಗಿ
ಸಾಗಮಿಸೆ ಬೇರೆಲ್ಲಿಗಾದೊಡಮಾತ್ಮದರ್ಶಿಗಳು |
ಪೋಗಿ ತತ್ಕ್ಷಣ ಪದಗಳಲಿ ತಲೆ
ಬಾಗಿ ಯೋಗವ ಕುರಿತು ಕೇಳ್ದಪ
ಲೋಗರುತ್ಸವಗಳಲಿ ಮೈಮರೆದಿರ್ಪ ಸಮಯದಲಿ ||೨೬||

ಇತ್ತಲೀ ಜಿಜ್ಞಾಸುವೀಪರಿ
ಸುತ್ತಿನಗರದಿ ಯೋಗಿಗಳನರ
ಸುತ್ತ ಬೆಸಕ್ಕೈದಿರಲು ಮಾರ್ಗದಿ ದೈವಯೋಗದಲಿ |
ಅತ್ತ ಸಿಕ್ಕಿದಸಾಧುನೊಂದಿಹ
ಚಿತ್ತದಿಂದಾ ಕೃಷ್ಣಭೂಸುರ
ಗತ್ತಜಾತ್ರೆಗೆ ಬೇಗಪೋಮುವುದೆಂದು ಬರೆಯಿಸಿದ ||೨೭||

ನಡುವಗಲು ಮರುಭೂಮಿಯಲಿಮಿಗೆ
ಸುಡುವಿಸಿಲಿನಲಿ ದಾರಿತಪ್ಪಿದ
ಕಡುತೃಷಿತಗಾಕಸ್ಮಿಕಮೆ ನೀರೊರತೆ ಕಂಡಂತೆ |
ಹುಡುಗನಿಹನೆಲೆ ತಿಳಿಯೆ ಜನಕಂ
ತಡವಗೈಯದೆ ಕುದುರೆಯಾಳ್ಗಳ
ನೊಡನೆ ಕೊಂಡಾಕ್ಷಣಮೆ ನಡೆದನು ಸಿದ್ಧಪುರದೆಡೆಗೆ ||೨೮||

ಗುಡಿಯಿದೆನ್ನದೆ ಸದನವೆನದಂ
ಗಡಿಯಿದೆನ್ನದೆ ಶಾಲೆಯೆನ್ನದೆ
ಗುಡಿಸಿಲೆನ್ನದೆ ತೋಟವೆನ್ನದೆ ಹಳ್ಳಮುಳ್ಳೆನದೆ |
ಮಡುವೆನದೆ ಸೂಚ್ಯಗ್ರದಿನಿತುಂ
ಬಿಡದೆ ಹುಡುಕುತ ಮಗನ ಸೈನಿಕ
ರೊಡನೆ ತಿರುಗಿದ ಸಿದ್ಧಪುರದಲಿನೊಂದೆದೆಯತಂದೆ ||೨೯||

ಮೂಡುತಿರೆ ರವಿದೇವನದುವೇ
ಮೂಡಲಲಿ ಕೆಂಗಿರಣಗಳು ಕುಣಿ
ದಾಡುತಿರೆ ಮರದೆಲೆಗಳಿಂ ತಪೆ ತೂರುತೊಳಗಡೆಗೆ |
ಬಾಡುತಿರಲಂಗಳದ ಸರಸಿಯು
ಲೂಡಿದಾ ಕುಮುದಗಳು ನೆರೆಹುಡು
ಕಾಡುತಾತ್ಮಜನಿರ್ದ ಗುಡಿಯಲಿ ಬಂದನಾತಂದೆ ||೩೦||

ಸಂತಮುಂಡಳದೊಳಗೆ ಚಿತ್ತದ
ಚಿಂತೆಯಂ ಬಿತ್ತರಿಸಿ ಭವಭಯ
ವೆಂತು ಕಳೆದಪುದೆಂದು ಪ್ರಶ್ನಿಸುತುತ್ತರವನಾಂತು |
ಅಂತರಂಗದೆ ಮನನಮಾಡುತ
ನಂತಸಿದ್ಧಿಗೆ ಕುಳಿತ ಚೈತ
ನ್ಯಂ ತೆರೆಯೆಕಂಗಳನು ಕಂಡನು ಕಡುಮುಳಿದತಂದೆ ||೩೧||

ಕೆಂಗಿಡಿಗಳನೆ ಹೊರಗೆ ಚಿಮ್ಮುವ
ಕಂಗಳಿಂ ನಿಟ್ಟಿಸುತ ತಾಂ ಭ್ರೂ
ಭಂಗಮೆಸಗುತಲೋಷ್ಠಕಚ್ಚುತ ಮುಷ್ಟಿಕಟ್ಟುತಲಿ |
ಅಂಗಗಳನೊದರುತ್ತ ಗುಡುಗನೆ
ಹಂಗಿಸುತ ಗದರಿಸುವ ಜನಕಂ
ಕಂಗೆದುರು ತಟ್ಟನೆಯೆ ಕಾಣಲು ಕುವರ ಕಂಪಿಸಿದ ||೩೨||

ಕೊಂಕುಮತಿಯ ಪಿಶಾಚಿ ಪರಿಜನ
ಕಂಕುಲವ ಸಾಯಿಸಲು ಕುಲಕೆ ಕ
ಳಂಕ ತರುವೊಡೆ ನೀನು ಜನಿಸಿದೆ ನನಗೆ ಮಗನಾಗಿ |
ಮಂಕೆ ನಿನ್ನಯತಾಯಿ ಮೃತ್ಯುವಿ
ನಂಕದಲ್ಲಿರೆ ನಿನಗೆ ಯೋಗದ
ಬಿಂಕ ಹರಿಯದೆ ಛೀ! ಎನುತಲಾತಂದೆ ಪಲ್ಮೊರೆದ ||೩೩||

ತಿನ್ನಲೊಲ್ಲಳುತಾಯಿ ಸೋದರಿ
ಎನ್ನದಿಂ ಕೃಶಳಾಗುತಿರ್ಪಳು
ಎನ್ನ ಸೋದರರಳಲುತಿರ್ಪರು ರಾತ್ರಿಹಗಲೆನದೆ |
ನಿನ್ನುದರ ಸೀಯುತಿದೆ ಛೀ! ನಿನ
ಗಿನ್ನುಮುದಿಸದೆ ಕರುಣೆಸಾವಿಗೆ
ತನ್ನವರ ಬಲಿಕೊಟ್ಟು ಯೋಗವೆ ಕಟುಕನೀನೆಂದ ||೩೪||

ವಾರಿದಂಗಳಲೊಮ್ಮೆಲೆಗೆ ಮೈ
ದೋರಿ ನೋಳ್ಪರ ಕಂಗಳಂ ತವೆ
ಕೋರಯಿಪ ಮಿಂಚಂತೆ ತತ್ಕ್ಷಣ ತನ್ನಹತ್ತಿರಕೆ |
ನಾರಿ ಸಮ್ಮುಖ ನಿಂದು ಕೋಪವ
ತಾರುತಿಹ ನಿಜಪಿತನನೀಕ್ಷಿಸಿ
ಧೀರತನ ಕುಸಿಬೀಳೆ ಕಂಪಿಸಿ ಕುವರನುರುಳಿದನು ||೩೫||

ತಂದೆಯಾಗ್ರಹದಿಂದುಳಿಯೆ ಬೇ
ರೊಂದುಪಾಯವ ಕಾಣದಿಹ ಮಗ
ನಂದು ಹಾ! ನಾಂ ಪರರು ಹುರಿದುಂಬಿಸಲು ಮತಿಸೋತೆ ।
ನೊಂದಿಹೆನು ಸಾಕನಿತು ನಾನೇ
ಹಿಂದಿರುಗಿ ಬರಲಿರ್ದೆ ತಾವ್ಕೈ
ತಂದುದೊಳ್ಳಿತೆನುತ್ತಲುರುಳಿದ ಪಿತನ ಪಾದದಲಿ ||೩೬||

ನಂದನಂ ನುಡಿದಿಂತು ಮಿಗೆ ಭಯ
ದಿಂದ ಸೊರಗಿದ ಮುಖವನೆತ್ತುತ
ತಂದೆಯುರಿಗಂಗಳನು ನಿಟ್ಟಿಸುತೋರೆ ನೋಟದಲಿ ।
ಇಂದು ಮನ್ನಿಸಿರೆಂದು ಬೇಡಿದೊ
ಡಂ ದಹಿಪ ಕೋಪಾನಳಂ ಕಳೆ
ಗುಂದದಿರಲಾ ತಂದೆ ಪುತ್ರನ ಜಗ್ಗಿ ಮುಂದೆಳೆದ ||೩೭||

ಹಾರಿ ಮುಂದಕೆ ಹರಿದು ಸುತನ ಶ
ರೀರದೊಳಗಿನ ಕಾವಿವಸ್ತ್ರವ
ತೂರಿ ಗಾಳಿಯಲದನು ಪೊಸತಹ ಬಿಳಿಯಬಟ್ಟೆಗಳ ।
ಧಾರಣಂಗೈಸುತ್ತಲಾ ಕ್ರೋ
ಧಾರುಣಾಂಬಕ ಜನಕ ನಿಜಗೂ
ಡಾರಕೊಯ್ದನು ಸೈನಿಕರ ಕಾಹಿನಲಿ ನಂದನನ ||೩೮||

ಮಗನ ಕರದೊಯ್ಗಿರಿಸಿ ಬೀಡಿನೊ
ಳುಗಿದು ಕೋಪಾನಳನ ಮತ್ತುಂ
ಮೃಗನೊ! ಮಗನೋ! ನೀನು ನಿನ್ನಗಲಿಕೆಯಕತದಿಂದ |
ದುಗುಡದಿಂ ಹೆತ್ತವಳು ಸಾವಿನ
ಬಿಗಿಪಿಡಿಯಲಿಹಳಲ್ತೆ ನೀನೋ
ಬಗೆದವಳ ಕೊಲ್ಲುತಿಹೆಯೆನ್ನುತ ತಂದೆನಿಂದಿಸಿದ ||೩೯||

ನಂದನಂ ಹಲವಿಧದಿ ತನ್ನಯ
ತಂದೆಗಾಶ್ವಾಸನವನಿತ್ತೊಡ
ಮುಂದು ತಾಂ ನಿಶ್ಚಿಂತನಾಗದೆ ನಂಬಿಕೆಯನಿಡದೆ |
ತಂದೆ ಕಾಹಿನ ಜನರ ನೇಮಿಸಿ
ನಿಂದು ನಿರ್ಮೋಹನನು ಹಗಲಿರು
ಳೆಂದೆನದೆ ಕಾದಿರುವುದೆಂದನು ಬಿಚ್ಚುಮಾತಿನಲಿ ||೪೦||

ತಂದೆಯಾ ನಿರ್ಮೋಹಪುತ್ರನ
ಬಂಧನದಲಿಡಲೆನಿತೆನಿತು ಬಗೆ
ಯಿಂದ ಹಗಲಿರುಳೆನದೆ ಯತ್ನಿಸುತಿರ್ದನೆಚ್ಚರದಿ |
ನಂದನಂ ಸಹವನಿತನಿತೆ ನಿಜ
ಬಂಧನವ ಕಿತ್ತೊಗೆಯೆ ಸಮಯದ
ಸಂಧಿಯರಸುತ ಮನದಿಯೋಚಿಸುತಿರ್ದ ಯುಕ್ತಿಗಳ ||೪೧||

ಜಾತ್ರೆತೀರಿದಮೇಲೆ ಮನೆಗೆ ಸು
ಸೂತ್ರದಿಂ ಪೋದಪೆವೆನುತ ನುತಿ
ಪಾತ್ರನಂ ಬಂಧಿಸುತಜನಕಂ ತಾನಿಳಿದಕಡೆಯೆ |
ರಾತ್ರಿಹಗಲೆನದಿಟ್ಟು ಕಾವಲ
ನೇತ್ರವಗಲಿಸಿ ನೋಡುತಿರಲು ವಿ
ಧಾತ್ರನೇ ಗೈದಪನೊ ಕಾಂಬೆನೆನುತ್ತ ಸುತನಿರ್ದ ||೪೨||

ಬರಲು ಮೂರನೆರಾತ್ರಿ ನುಸುಳುವ
ಪರಿಯ ಚಿಂತಿಸಿ ತರುಣಕೃತಕದ
ಗೊರಕೆ ವಿರಚಿಸಿ ಮಧ್ಯರಾತ್ರಿಯತನಕ ಮಲಗಿರಲು |
ಒರಗಿದರು ನಿದ್ರೆಯಲಿ ಕಾಹುಗ
ರರಿದಿದಂ ಚೈತನ್ಯ ಮೆಲ್ಲನೆ
ಸರಿದು ಹಾಸಿಗೆಯಿಂದ ತಂಬಿಗೆವಿಡಿದು ಹೊರವಂದ ||೪೩||

ಕರದಲೀಪರಿ ಪಾತ್ರಮೊಂದನು
ಧರಿಸಿ ಕಂಡವರೆನ್ನಬೆಸಗೊಳೆ
ಹೊರಗೆ ಮೂತ್ರವಿಸರ್ಜನಕೆ ನಾಂ ಪೋಗುತಿಹೆನೆಂದು
ಒರೆವೆನೆನ್ನುತ ನಿಶ್ಚಯಿಸುತಾ
ತರುಣಹೊರಗೈತಂದು ನಿಜಮೊಗ
ದಿರುಹಲಾರುಂ ಕಾಣದಿರೆ ಮುಂದರಿದ ಜವದಿಂದ ||೪೪||

ಕಾಪುಗತ್ತಲ ಮಧ್ಯನಿಶೆಯಲಿ
ದಾರಿವಿಡಿದಾತರುಣ ಕೊನೆಯಲಿ
ಸೇರಿವಾಟಿಕೆಯೊಂದನದರಲಿ ಹಳೆಯಗುಡಿಯೊಂದ ।
ಮಾರುತಿಗೆ ಕಟ್ಟಿದುದನೀಕ್ಷಿಸಿ
ಮೀರಿ ಕೆಲದಲಿ ಬೆಳೆದ ಪಟದವ
ನೀರುಹವ ಕಂಡದರ ಕೆಳಗೈತಂದು ನಸುನಿಂದ ||೪೫||

ಇತ್ತಲಾಲನ ಬಿಳಲ ಮೇಲಿಂ
ಕತ್ತಲಲಿ ಚೈತನ್ಯಗುಡಿಯನು
ಹತ್ತಿದರ ಗೋಪುರದ ಓಂಗಡೆ ಹುದುಗಿಕುಳ್ಳಿರಲು ।
ಅತ್ತಮಗನ ಪಲಾಯನವ ತಿಳಿ
ದತ್ತುಜನಕಂ ನಿರ್ಮಮನ ಬೆಂ
ಬತ್ತಿ ಕಳುಹಿದ ಸೈನಿಕರ ಮೂರನೆಯ ಜಾವದಲಿ ||೪೬||

ಸನಿಯಮೆಲ್ಲಡೆ ಹುಡುಕಿ ತರುಣಂ
ಜನಕೆ ಕಾಣದತೆರದಿ ಕುಳಿತು ಪ
ವನದೊಳಂ ಗುಡಿಯೊಳಗೆ ಹೊರಗೆನದೆಲ್ಲಕಡೆ ತಿರುಗಿ ।
ಜನವ ಬೆಸಗೊಂಡೆಲ್ಲವುಂ ಬರಿ
ದೆನಿಸಿ ನೈರಾಶ್ಯದಲಿ ನಡೆದರು
ಕೊನೆಗೆ ನಂದನ ಸಿಗದಸಂಗತಿಯರುಹೆ ಜನಕಂಗೆ ||೪೭||

ದೇಗುಲದ ಗೋಪುರದ ಮರೆಯಲಿ
ಬಾಗಿಹುದುಗಿದ ತರುಣ ಚಿಂತೋ
ದ್ವೇಗದಲಿ ಮೈಯಲುಗಿಸದೆ ಪೋಣ್ಸೇನುಕೆಮ್ಮುಗ್ರಳ |
ಆಗಮನಕೆಡೆಗುಡದೆಯಾಳ್ಗಳು
ಪೋಗುವನಕಂ ದೃಶ್ಯವೆಲ್ಲವ
ರಾಗಹೀನತೆಯಿಂದ ನೋಡುತಲಿರ್ದ ಮೌನದಲಿ ||೪೮||

ಪುಂದಿನಾದಿನ ಕೂಡ ದೇಗುಲ
ದಿಂದಲಿಳಿಯದೆ ಮೀಯದಂಬಿನ
ಬಿಂದುಕುಡಿಯದೆ ತುತ್ತನೊಂದನು ಭುಂಜಿಸದೆ ಮರಳಿ |
ಪುಂದಿಪಿಡಿದಪರೆಂಬ ಭಯದಿಂ
ನೊಂದು ಬಗೆಬಗೆಯಿಂದ ಹುದುಗಿ
ರ್ದಂದು ಕತ್ತಲೆಯಪ್ಪವರೆಗಂ ಕಾಲವನು ಕಳೆದ ||೪೯||

ಧಾರುಣಿಯನಾವರಿಸೆ ತಿಮಿರಂ
ಭೂರುಹಕೆ ಕೈಯೊಡ್ಡಿ ಮೆಲ್ಲನೆ
ಜಾರಿನೆಲದೆಡೆ ಭರದಿತೋಟವನುಳಿದು ಚೈತನ್ಯ |
ದಾರಿವಿಡಿದಲೆದಲೆದು ತಾಹಲ
ವಾರುದಿನ ಹಲವೆಡೆಯ ವಿಜ್ಞೋ
ದಾರರಂ ಬೆಸಕೈದು ಸೇರ್ದ ಬರೋಡೆ ನಗರಿಯನು ||೫೦||

ಇತ್ತ ಚೈತನ್ಯನುರೆ ವೇಗವ
ಬಿತ್ತರಿಸಿ ನಡೆದಿರಲು ಸೇವಕ
ರತ್ತ ತಂದೆಯಬಳಿಗೆ ನಡೆತಂದಮಿತಶೋಕದಲಿ |
ಎತ್ತ ಪೋದನೊ ತರುಣನಾವ್ಬೇ
ಸತ್ತೆವೆಲ್ಲೆಡೆ ತಿರುತಿರುಗಿ ಹುಡು
ಕುತ್ತೆ ಕಾಣೆಸನಾತನೆಂದರು ಜೋಲುಮೂಗದಂದ ||೫೧||

ಆಲಿಸಿದನಾಕ್ಷಣವೆ ಪಿತನ ಕ
ಪೋಲಕಂಬನಿಯಿಂದ ನೆನೆದುದು
ಫಾಲವಂಕರದಿಂದ ತಾಡಿಸಿ ವಿಧಿಯದೂಷಿಸುತ |
ಆಲಯವನೆಂತಾಂ ಪುಗುವೆ ನ
ನ್ನಾಲತಾಂಗಿ ದಯಾಳನೆಲ್ಲೆನೆ
ಜೋಲುಮೊಗದಿಂದಿಲ್ಲವೆಂದೆಂತೆನುವೆನಕಟೆಂದ ||೫೨||

ನೆಟ್ಟನಿದೆ ತಮ್ಮಣ್ಣಸದನದ
ಲಿಟ್ಟಪಂ ಪದವೆಂದು ಕಾಧಿಹ
ಪುಟ್ಟಮಕ್ಕಳಿಗೆಂತು ತೋರ್ಪೆನೊ ಸುಟ್ಟಮೋರೆಯನು |
ಕೆಟ್ಟೆನಕ್ಕಟ ತುತ್ತಬಾಯೊಳು
ಕೊಟ್ಟುಕಸಿದೆಯ ವಿಧಿಯೆಶೂನ್ಯದ
ಬಟ್ಟೆಯಲಿನಾನೆಂತು ನಡೆದಪೆನೆಂದು ರೋದಿಸಿದ ||೫೩||

ಬೆಂದೆದೆಯ ಬೇಗೆಯನು ಸಹಿಸದೆ
ತಂದೆವಿಧಿಯನು ಬೈದು ಹೃದಯಾ
ನಂದನಂಗತಿಮುಳಿದು ಸೇವಕಸಂಕುಲವಹಳಿದು |
ಅಂದಗೆಟ್ಟಿರೆ ವದನ ಮನೆಗೈ
ತಂದು ನೈರಾಶ್ಯದಲಿ ಪರಿಜನ
ದೊಂದಿಗಳಲುತ ಹಲುಬಿಗೋಳಾಡಿದನು ಮೋಹದಲಿ ||೫೪||

ಸಂಗತಿಯ ಕೇಳ್ದೊಡನೆ ನೆಲಕುರು
ಳಂಗನಾಮಣಿ ಮಗನೆ ಹಾ ಎನು
ತಂಗಮುರಿದಳು ಸೋದರರು ಹಲುಬಿದರು ಚೀತ್ಕರಿಸಿ |
ಕಂಗಳಿಂದುದುರುತಿರೆ ಕಂಬನಿ
ತಂಗಿ ವಕ್ಷವ ಚಚ್ಚಿಕೊಳ್ಳುತ
ಬೆಂಗದಿರನಾತಪದ ಹೂವೊಲು ಬಿದ್ದಳೊಂದೆಡೆಗೆ ||೫೫||

ಉರುಳಿ ಹಲಚಣ ತಾಯಿಕಂಗಳ
ತೆರೆದು ನೊಸಲನು ಬಡೆದುವಕ್ಷವ
ಭರದಿತಾಡಿಸಿ ಕೆದರಿ ತಲೆಗೂದಲುಗಳನಿಲಂಗೆ |
ಹರಿದಿರಲು ಹಾ ವತ್ಸ ಹೆತ್ತವ
ಳುರವನಿರಿವುದೆ ಮುಕ್ತಿಯೇನೆನು
ತೊರಗಿ ಮೂರ್ಛಿತೆಯಾಗಿ ಬಿದ್ದಳು ಮತ್ತೆ ಭೂಮಿಯಲಿ ||೫೬||

ಕಿರಿಯಪುತ್ರಿಯ ಸಾವಿನಲಿ ಶಂ
ಕರನೊರಗಿದಾ ಗೋಡೆಯನೆ ತಾ
ನೊರಗಿಜನಕಂ ಹಿಂದೆನಡೆದುದನೆಲ್ಲ ಚಿಂತಿಸುತ |
ಕೊರಗುತಿಹ ಸತಿಯುಳನು ಸುತಸುತೆ
ಯರನು ನೋಡುತ ಕರದಿಮಿಡಿಯುತ
ಹರಿವಕಂಬನಿಗಳನು ಕರ್ಮವೆ! ಎಂದು ರೋದಿಸಿದ ||೫೭||

ಮತ್ತೆಮತ್ತರಸರಸಿ ಸಿಗದಿರೆ
ಹೆತ್ತವರು ಕೈಕೈಯ ಹಿಸುಕುತ
ಲಿತ್ತಲುಳಿದರು ಮಗನತೀತದ ಮಧುರನೆನಹೆಂದು |
ಅತ್ತಚೈತನ್ಯಂ ಹಲವುಕಡೆ
ಸುತ್ತಿಯೋಗಜ್ಞರನು ಬೆಸಕೈ
ಯುತ್ತ ಸರ್ವಶ್ರೇಷ್ಠಜೀವನಗಳಿಸೆ ಯತ್ನಿಸಿದ ||೫೮||

ಅಂದು ಜನನೀಜನಕಪರಿಜನ
ಬಂಧು ಬಾಂಧವವದನಕಮಲ
ವೃಂದಬಾಡಲು ಮನೆಯಕೆರೆಯಲಿ ಭಾರತಾವನಿಯ |
ಸುಂದರ ಸರೋವರದಿ ನಗಿಸಲು
ನೊಂದರೆದೆಕುಮುದಗಳ ತವೆಸೊಗ
ಸಿಂದೆಸೆದ ಯಾತ್ರಿಕಸುಧಾಕರ ಹರಸೆ ಪರಮಾತ್ಮ ||೫೯||

|| ಇಂತು ನಾಲ್ಕನೆಯ ಸಂಧಿ ||



# ಐದನೆಯ ಸಂಧಿ

**ಸೂಚನೆ—ಹೊಂದುತಾ ಯತಿ ದೀಕ್ಷೆಯ ದಯಾ**
**ನಂದನೆನಿಸಿ ಮಹಂತ ಪದವಿಯ**
**ನಂದು ಭಂಗಿಸಿ ತಿರುಗಿದಂ ಸಿತ ಹಿಮಗಿರಿವ್ರಜದಿ ॥**

ಮುಂಪೆಕೇಳಿರಿ ಬಾಲಕರೆ ನಡೆ
ತಂದು ವರಚೈತನ್ಯ ಮಠದಲಿ
ನಿಂದು ಬ್ರಹ್ಮಾನಂದ ಮೊದಲಹರಿತ್ತ ಬೋಧನಕೆ ।
ಅಂದು ಚಿತ್ತವಸೋಲ್ದು ಸಂತಸ
ದಿಂದ ನಾನೇ ಬ್ರಹ್ಮನೆನ್ನುವ
ದೊಂದು ತತ್ವವ ತಳೆದು ನಲಿದನು ಶುದ್ಧಚೈತನ್ಯ ॥೧॥

ಇಂತು ತಾನೇ ಬ್ರಹ್ಮನೆಂಬುವ
ಪಿಂತಣಾಡಂಬರದಿ ನಿಜಮನ
ನಿಂತೊಡಂ ಜಿಜ್ಞಾಸೆ ಹಿಂಗದೆ ನರ್ಮದಾತಟದಿ ।
ಸಂತಸಭೆಸೇರಿರ್ದ ಸಂಗತಿ
ಯಂತಿಳಿದು ತತ್ಪುರವ ವರ್ಜಿಸಿ
ಮುಂತಣದ ಮಾರ್ಗವನು ನಡೆದನು ಶುದ್ಧಚೈತನ್ಯ ॥೨॥

ಜ್ಞಾನತೃಷ್ಣೆಯ ಹಿಂಗಿಸಲು ನಡೆ
ದಾ ನವೀನ ತ್ಯಾಗಿ ತೀರದ
ಕಾನನದಿ ಯತಿ ಸಚ್ಚಿದಾನಂದನನು ಸಂಧಿಸಲು |
ಆನುತಂ ಚಾಣೋದಮೆಸೆದಿಹು
ದೀ ನದೀ ತಟದಲ್ಲಿ ಏದ್ವ
ದ್ಭಾನು ಸಭೆಯಾಪುರದೆ ಸೇರ್ದಪುದೆಂದ ನಯದಿಂದ ||೩||

ಆಲಿಸಿದ ಚಾಣೋದ ಕರ್ನಾ
ಲೀಲಸತ್ಪುರಕ್ಕೈದಿ ವಿನಯದಿ
ಫಾಲವಿರಿಸಿ ಚಿದಾಶ್ರಮಾದಿಯತೀಶ್ವರರಪದದಿ |
ಓಲಯಿಸಿ ಪಾವನದ ಶಾಸ್ತ್ರದ
ಜಾಲವನು ತಾಂ ಹಲವು ತಿಂಗಳ
ಕಾಲ ಪರಮಾನಂದನಡಿಯಲಿ ಕಲಿತ ಚೈತನ್ಯ ||೪||

ಓದಿನಲಿ ತನುಮನವನೀಯುವೊ
ಡಾದಿಯೊಳೆ ಸಾಂಸಾರಿಕೇಚ್ಛಾ
ಮೋದಸಂಪದ ಪದವಿಶೇಷದ ಕಾಮುಕಾಷ್ಠಗಳ |
ಬೂದಿಗೈದೊಡಮನ್ನ ಪಾಚನ
ಗೈದು ತಿನುವಲೆ ಸಮಯಪೋಪುದ
ನಾದಯಾಸ್ಪದ ಕಂಡು ಸನ್ಯಾಸವನು ಕೊಳೆಬಗೆದ ||೫||

ಅಂದದಿಂದಾ ತರುಣ ಪಲದಿನ
ವಂದಡದೆ ಕಳೆದಿರಲು ಪೂರ್ಣಾ
ನಂದ ನಾಮಕದಂಡಿಯತಿ ದಕ್ಷಿಣದಕಡೆಯಿಂದ |
ಬಂದಿಳಿಯೆ ಚೈತನ್ಯ ತಾಂ ನಡೆ
ತಂದು ಪದಗಳಿಗೆರಗಿ ನಮ್ರತೆ
ಯಿಂದ ಯೋಗದ ವಿಷಯ ಚರ್ಚಿಸಿ ಸಂತಸಂಬಡೆದ ||೬||

ಕೊನೆಗೆ ಯತಿದೀಕ್ಷೆಯನು ಕೊಳ್ಳುವ
ಮನದ ಕಾಮನೆಯರುಹೆ ಸಮ್ಮತಿ
ಯನು ಕೊಡುತಲಾ ದಂಡಿಪೂರ್ಣಾನಂದ ತರುಣಂಗೆ |
ತನುಜನಾಸೆಯ ವಿತ್ತದಾಸೆಯ
ಜನದಿಲೌಕಿಕ ಪದವಿಯಾಸೆಯ
ಮನದಲೆಂದುಂ ಧರಿಸಬೇಡೆಂದೆನುತ ಬೋಧಿಸಿದ ||೭||

ವೇದವಿಧಿಯಿಂ ಕ್ಷೌರಕರ್ಮಗ
ಳಾದನಂತರದಂಡಿಯತಿ ಹಿತ
ವಾದ ಕರುಣಿಸಿ ಕಾವಿವಸ್ತ್ರವ ತೊಡಿಸಿ ತರುಣಂಗೆ |
ಆದರದೆ ಕೈಗಿತ್ತು ದಂಡವ
ನಾದೆನೀ ನಿರ್ದ್ವಂದ್ವನೀದಿನ
ವಾದೆಯ್ಯೆ ನಿಷ್ಕಾಮ ವತ್ಸನೆ ಪೂರ್ಣನಾಗೆಂದ ||೮||

ನರ್ಮದಾನದಿಯಂತೆ ನೀನುಂ
ನಿರ್ಮಳನು ಗಂಭೀರನುಂ ಸ
ತ್ಕರ್ಮನಿರತನುಮಾಗು ಜಗದುಪಕಾರಪರನಾಗು |
ನಿರ್ಮಿತದ ನದಿತೆರೆಗಳಂದದೆ
ಧರ್ಮದಲೆಗಳ ರಚಿಸು ವತ್ಸನೆ
ನಿರ್ಮಮತ್ವದಲೆಂದು ಪೂರ್ಣಾನಂದಬೋಧಿಸಿದ ||೯||

ಮೆರೆವ ರೋಮಾಂಚದಲಿ ಕಣ್ಣಂ
ಪರಿವ ಕಂಬನಿಗಳಲಿ ದಂಡಿಪ
ನಿರಿಸಿ ತರುಣನ ಸಿರದಿ ಕರವನು ಜೀವಮಾತ್ರರಿಗೆ |
ಕರುಣೆತೋರ್ಪುದೆ ನಿನ್ನವ್ರತವಾ
ಗಿರುವ ಕತದಿಂದಿಂದಿನಿಂದೀ
ಧರೆಯೊಳು ದಯಾನಂದನಾಮಕನಾದೆ ನೀನೆಂದ ||೧೦||

ಆ ತಪೋಧನ ಹರಸಿ ನಡೆದನು
ನೂತನ ದಯಾನಂದ ಯತಿಯಂ
ಪ್ರೀತಿಯಿಂದವ ಯೋಗಿಯೋಗಾನಂದಪದಗಳನು |
ನೀತಿಯಿಂಬೆಸಕ್ಕೈದು ಯೋಗದ
ಮಾತನರಿತನು ಮತ್ತೆತತ್ಪುರ
ಕೈತರಲು ಯೋಗಜ್ಞರಿರ್ವದಿರವರ ಸೇವಿಸಿದ ||೧೧||

ತಾನು ಹಿರಿಯವನೆನದೆ ತನಗಪ
ಮಾನಮಾದವುದೆನದೆ ದೇಹಕೆ
ಹಾಸಿಯೊದಗುವುದೆನದೆ ವಿನಯದ ಜೋಳಿಗೆಯಕೊಂಡು |
ಆ ನವೀನ ತ್ಯಾಗಿ ವಿದ್ಯಾ
ದಾಸಿಗಳ ಬಾಗಿಲನು ತಟ್ಟುತೆ
ಭೋನಮೋ ಭಿಕ್ಷೆಯನು ಕರುಣಿಸಿರೆಂದು ಬೇಡುವನು ||೧೨||

ಬೇರೆಬೇರೆಯ ಪುರಗಳಲಿ ಸಂ
ಚಾರಗೈಯುತಲಾಪ್ತಗುರುಗಳ
ನಾರಿಸುತ ಬುಧರೊಡನೆ ಯೋಗದಗೂಢತತ್ವಗಳ |
ಸಾರವರಿಯುತ ಸಾವಗೆಲ್ಲುವ
ದಾರಿ ಬಲ್ಲರನರಸುತ ಹರಿ
ದ್ವಾರಕ್ಕೈದಿದ ಕುಂಭಜಾತ್ರೆಯ ಕಾಲದಲಿ ಯತಿಪ ||೧೩||

ರಾಜಠೀವಿಯ ಹಂಗಿಸುತ ಜಗ
ಸೋಜಿಗಂಬಡುವಂತೆ ವೈರಾ
ಗೀಜನಂ ಬಗೆಬಗೆಯ ಬೆಡಗಿನ ವಸ್ತ್ರಭೂಷಣದ |
ತೇಜದಿಂದಾನೆಗಳಮೇಲೆ ವಿ
ರಾಜಿಸುತ ಸಂಪದದ ರಾಶಿಯ
ಸಾಜದಲೆ ಕೂಡಿಪುದ ಕಂಡನು ಯತಿಪನಾಸ್ಥಳದಿ ||೧೪||

ತಾವು ಗೈದಿಹ ಪಾಪತೊಡೆಯುವ
ಭಾವದಿಂ ಭಕ್ತಜನರೆರಚಿದ
ಪೂಪನಿಂ ಸಾಧುಗಳ ಪ್ಪೆಯಲಿ ತೊಡೆದಬೂದಿಯುಂ ।
ಸಾವಿರದ ಕೊಳೆಯಾಂತನೀರಿನ
ದೇವನದಿಯಂ ಕಂಡು ಯತಿನರ
ದೇವನಚ್ಚರಿವಡೆದು ನಡೆದನು ನೋಡುತುತ್ಸವನ ||೧೫||

ಜಾತ್ರೆಗೋಸುಗ ನೆರೆದ ನಾನಾ
ಯಾತ್ರಿಕರ ಮಧ್ಯದಲಿ ಮರಣಕೆ
ಪಾತ್ರರಾಗದ ಪರಿಯನರಿತಿಹ ಯೋಗಿವರ್ಯರನು ।
ಮಾತ್ರುಪರಸುತ ಸೇವೆಗೈದು ವಿ
ಧಾತ್ರನನೆ ನೆರೆನಂಬಿ ತಚ್ಛುಭ
ಗಾತ್ರನು ಹರಿದ್ವಾರವಗಲುತ ಮುಂದೆ ನಡೆಗೊಂಡ ||೧೬||

ಶ್ರೀನಗರದಲಿ ಬುಧರೊಡನೆ ವಿ
ಜ್ಞಾನಕಾಮನು ಧರ್ಮಜಿಜ್ಞಾ
ಸಾನುಗತನಾಗಿರ್ದು ಕೇದಾರದಲಿ ಗುಡಿಯೊಳಗೆ ।
ತಾ ನೆಲಸಿ ಕೆಲದೊಂದು ಶೈಲ
ಸ್ಥಾನದಲಿ ನೆಲೆಗೈದ ಯೋಗ
ಜ್ಞಾನಿಗಂಗಾಗಿರಿಯ ಪದಗಳಲರಿತ ಭೇದಗಳ ||೧೭||

ಯೋಗಿ ಗಂಗಾಗಿರಿಯ ಸಂಗಡ
ಯೋಗವಿದ್ಯಾಭ್ಯಾಸ ದೈವಿಕ
ಭೋಗದಿ ದಯಾನಂದಸರಸತಿ ಕಳೆದು ಹಲದಿನವ ।
ಆ ಗಿರಿವ್ರಜಗಳಲಿ ಘನಗುಹೆ
ಯಾಗರಂಗಳಲಡಗಿ ಕುಳ್ಳಿಹ
ಯೋಗಿಗಳನರಸಲ್ಕೆ ತುಂಗಾದ್ರಿಗಳ ಮೇಲ್ನಡೆದ ||೧೮||

ತುಂಗ ಶಿಖರಂಗಳಲಿ ಕಾಮನೆ
ಭಂಗಮಾಗಲು ಕೊನೆಗೆ ಯತಿವರ
ತುಂಗನಾಥವನೇರಿ ವಿಗ್ರಹಪಜ್ತಿಗಳ ನೆಲೆಯ ।
ಕಂಗೆವರೆ ಬೇಸರಿಸಿ ಪೂಜಕ
ಜಂಗುಳಿಯ ಮಧ್ಯದಲಿ ಮೇಗಡೆ
ತಂಗದಿಳಿಯುತ ಕಾಲುಹಾದಿಯದೊಂದರಲಿ ನಡೆದ ||೧೯||

ಗುಡ್ಡದಂವದಿ ಹರಡಿ ಪಸರಿಸಿ
ದಡ್ಡಸಾಲ್ಬಂಡೆಗಳ ಸುತ್ತಲು
ಮೊಡ್ಡಿಚೆಲ್ಲಿದ ತೀಕ್ಷ್ಣದಗ್ರದ ಕಲ್ಲುಮುಳ್ಳುಗಳ ।
ಗುಡ್ಡೆಗಳ ಪೊದರುಗಳ ಪಾಂಥರ
ನಡ್ಡಗಿಪ ವನಮೃಗದ ಗುಂಪಿನ
ಮೊಡ್ಡಿಯೆನ್ನಿಪ ವನದಿ ಯತಿಪನ ನಿಲಿಸಿತಾಮಾರ್ಗ ||೨೦||

ಬಿತ್ತರಿಸಿದಿಟ್ಟಯನು ನೋಡಲು
ಬತ್ತಿದಾಪಗೆಗಳಿರೆ ನಾಲ್ಕೆಡೆ
ಸುತ್ತಿಕೊಂಡಿರೆ ಗಗನಕಡರಿದ ಪರ್ವತಸ್ತೋಮ ।
ಒತ್ತಿಡಿದ ಘನಜಡರುಹಂಗಳ
ಕತ್ತಲಾವರಿಸಿರಲು ಹೆಜ್ಜೆಯ
ನೆತ್ತಲಿಡಲೆಂದಾ ಯತೀಶ್ವರ ನಿಂತು ಚಿಂತಿಸಿದ ॥೨೧॥

ಎತ್ತಿ ನಿಜಮಸ್ತಕವ ಮೇಲಕೆ
ಬಿತ್ತರಿಸೆ ಕಂಗಳನು ತಾನಿಳಿ
ದತ್ತಪಂದಿಹಮಾರ್ಗಮೊಂದೇ ಸರಳರೇಖೆಯೊಲು ।
ಎತ್ತಿತೋರಲು ತುಂಗನಾಥನ
ಹತ್ತಲಸದಳವೆಂದು ಯತಿವರ
ಚಿತ್ತಪಂಬಿಗಿವಿಡಿದು ಕೆಳವರೆ ಮತ್ತೆಮುಂದರಿದ ॥೨೨॥

ಉಜ್ಜುಗಿಸಿ ಮುನ್ನಡೆಯೆ ಯತಿಪಂ
ಹೆಜ್ಜೆಯಿಡಲೆಡೆಯಿರದೆ ದೇಹವ
ಗುಜ್ಜುಗೊಳಿಸಿರಲಕ್ಕಪಕ್ಕದ ಮೊನಚುಬಂಡೆಗಳು ।
ಉಜ್ಜಿಕುಚ್ಚುತಲಿರಲು ಮುಳ್ಗಳು
ಸಜ್ಜಿನಿಂದಡಿಗಳನು ನೆತ್ತರ
ಮಜ್ಜನಂಗೈಯುತ್ತನುಸಿದನು ಸಂದಿಸಂದಿಯಲಿ ॥೨೩॥

ಒಂದುಕೊಂಬೆಯ ಪಿಡಿದು ಬೀರಿ
ನ್ನೊಂದುಕೊಂಬೆಗೆ ನೆಗೆದು ಬಂಡೆಯ
ದೊಂದರಿಂಚಗಿದೆದ್ದು ಬೇರೆಯ ಶಿಲೆಯಮೇಲ್ವಾಯ್ದು ।
ಒಂದೆನಿಸಿ ಪೆಣೆದಿರ್ದ ಪೊದರಿನ
ಸಂದಿಯೊಳಗಹಿಯಂತೆ ತೆವಳುತ
ಮುಂದಮುಂದಕದೆಂತೊ ನಡೆದನು ಯತಿಪಯಾನಂದ ॥೨೪॥

ದಾರುದಾರುಣ ವಿಜನವಿಪಿನದಿ
ಘೋರಕಷ್ಟದಿ ಹೊಳೆಯದೊಂದರ
ತೀರವಂ ಬಳಿಸಾರ್ದು ಕೆಲದೆತ್ತರದ ಶಿಲೆಯೊಂದ ।
ಏರಿ ಸುತ್ತಲು ತನ್ನದಿಟ್ಟಿಯ
ಬೀರೆ ಪರ್ವತಮಾಲೆ ಘನಕಾಂ
ತಾರಮಲ್ಲದೆ ಬೇರದಾವುದು ಗೋಚರಿಸದಾಯ್ತು ॥೨೫॥

ಅಡರಿ ಬಂಡೆಯ ಯತಿಪ ರವಿ ಕ
ಟ್ಟಡವಿಯಲ್ಲಿನ ತಿಮಿರವಂ ಬಲ
ವಡಿಸಿ ಪಡುವಣ ಕಡಲ ಮೆಲ್ಲನೆ ಸೇರುವುದಕಂಡು ।
ಕಡುವಿಷಮ ಕಾನನದಿ ಮೃಗಗಳ
ನಡುವೆ ರಾತ್ರಿಯ ಕಳೆವುದಸದಳ
ನಡಪೆನೆನ್ನುತ ನುಸಿದನತಿಭೀಕರದ ಮರಗಳಲಿ ॥೨೬॥

ದಂಡವನು ಮರಗೊಂಬೆಗಳು ನಿಜ
ಮುಂಡವನು ಕೆಲಬಲದಿ ಹಬ್ಬಿದ
ಬಂಡೆಗಳು ಪದಗಳನು ಮಾರ್ಗದಿ ಹಾಸಿದಂದದಲಿ |
ಮಂಡಿವರೆಗಂ ಬಳೆದ ಮುಳ್ಗಳು
ಖಂಡಖಂಡಕೆ ಕೊಯ್ದೊಡಂ ಧೃತಿ
ಗೊಂಡು ಯತಿವರ ಬಸಿಪನೆತ್ತರ ಕೋಡಿಯಲೆನಡೆದ ||೨೭||

ಎಂತೊಕಾಂತಾರವನು ದಾಂಟುತ
ಲಂತವಲಿ ಸುಯ್ಯುತ್ತ ಶಾಂತಿಯ
ಸಂತಸದ ಸುಯ್ಲೊಂದ ಕೆಲದಲಿ ತುಂಗನಾಥಗಿರಿ |
ನಿಂತುಸಾಹಸವಂ ಪ್ರಶಂಸಿಸು
ವಂತಿರಲು ಸರಳಸುಹಮಾರ್ಗದಿ
ಸಂತಭೂವರ ನಡೆದನೋಃಖೀಮಠದದೆಸೆವಿಡಿದು ||೨೮||

ಮರುದಿವಸ ಬೆಳಗಿನಲಿ ಯತಿಭೂ
ವರನ ವಾಙ್ಮಧುಮಳೆಯ ವದನದ
ಮಿರುಪಸೊಬಗನು ಬುದ್ಧಿಸಾಮರ್ಥ್ಯವನು ಕಂಡೊಡನೆ |
ಭರದಿ ಮಠದ ಮಹಂತನೆದೆ ತವೆ
ಬೆರಗುವೋದುದು ನಸುನಗೆಯ ಮಳೆ
ಗರೆಯುತಾತನು ನುಡಿದನೀಪರಿಯಿಂದ ಯತಿಪಂಗೆ ||೨೯||

ಪದುಳವಾದುದು ವತ್ಸ ನೀನಿ
ತ್ತ್ರೊದಗಿದುದು ನಮ್ಮಲ್ಲಿಶಿಷ್ಯನ
ಪದವಲಂಕರಿಸೆಮ್ಮನಂತರ ಮಠದ ಸಂಪದಕೆ ।
ಮುದದಿಪತಿನೀನಾಗು ನಿನ್ನಯ
ವದನ ಕಂಡೊಡನೆಮ್ಮೆದೆಯಲುದಿ
ಸಿದುದು ದೈವೀಪ್ರೇಮವೆಂದ ಮಹಂತ ಸಂತಸದಿ ||೩೦||

ಸುಲಭದೊಳಗೀಪರಿಯ ಸಂಪದ
ವೊಲಿಯದೀ ಭುವನದಲಿ ಮನುಜಗೆ
ನಿಲಲು ನೀನು ಮಹಂತಪದವಿಯಲಾದವುದು ಪಿರಿಮೆ ।
ಬಲಿದ ವಿಜೃಂಭಣೆಯ ಧಾರ್ಮಿಕ
ಕುಲಕೆ ಪತಿಯೆಂದೆನಿಪ ಭಾಗ್ಯವ
ನೊಲಿದುಭೋಗಿಪುದೆಂದು ಯತಿಗೆ ಮಹಂತಪೇಳಿದನು ||೩೧||

ಇಂತು ನಲ್ಮೆಯತೋರಿಮಠದ ಮ
ಹಂತ ಬಗೆಬಗೆಯಿಂದ ಬಣ್ಣಿಸಿ
ಚಿಂತಿಸದೆ ಮಠಪತಿಯ ಪದವಿಯ ಕೊಳುವುದೆಂದೆನಲು ।
ಅಂತರಂಗದ ಬಿಂಬ ರಾಜಿಸು
ವಂತೆ ಮುಖದರ್ಪಣದಿ ಗಾಂಭೀ
ರ್ಯಂ ತವೆ ಭ್ರಾಜಿಸುತಿರಲ್ಯತಿದೇವನಿಂತೆಂದ ||೩೨||

ತಾವು ಮಠದಧಿಪತಿಗಳೆಂಬುದ
ನಾವು ಬಲ್ಲೆವು ಭವದ ರೋಗದ
ನೋವ ಕಳೆವರೆ ಬಂದಿತಮ್ಮೆಡೆ ಬರುವನರಿತಿಹೆವು
ದೇವರೆಣೆತಾನೆಂಬ ಭಕ್ತರ
ಭಾವವೆಮಗರಿದಲ್ಲವಾದೊಡ
ನೀ ವಿಭವಸಂಭ್ರಮಗಳಾವುದುಮೆಮಗೆ ಬೇಡೆಂದ ||೧೩||

ಹಿರಿಮೆ ತಮ್ಮೊಳಗಿರಲಿ ಧರ್ಮದ
ಗುರುತನಂ ತಮಗಿರಲಿ ಲೌಕಿಕ
ಸಿರಿಯು ಸೇವೆಯು ತಾವೆಕೊಳ್ಳಿರಿ ಸುಖದ ಗದ್ದುಗೆಯು
ಅರಸು ಸಹ ತಾವಾಗಿ ನಮ್ಮೊಳು
ಕಿರಿತನವ ನೆಲೆಗೊಳಿಸಿ ಮೋಹದಿ
ಬೆರೆವವರು ನಾವಲ್ಲವೆಂದನು ಯತಿಪ ಮಠಪತಿಗೆ ||೧೪||

ಅರಿವನರಿಯದ ಮುಗ್ಧಮನುಜರ
ಮರುಳುಗೈದಾರ್ಜಿಸಿದ ತಮ್ಮಯ
ಸಿರಿಗೆ ನೂರ್ಮಡಿ ನಮ್ಮಜನಕನ ಸಂಪದಂಗಳಿರೆ |
ತೊರೆದವಂ ಬಂದಿರ್ಪ ನಮ್ಮನು
ಜರಗುವಡಿಸಲು ಬಗೆದ ತಮ್ಮೀ
ಬಿರುನುಡಿಗೆ ಮನನೋಲ್ವವೆಸೆಗಡಯೆಂದನಾಯತಿ ||೧೫||

ಬರಿದೆ ಕೋಪಿಸಬೇಡಿ ನಮ್ಮನು
ಹುರುಳರಿಂದೆನಬೇಡಿ ಮೂಜಗ
ದರಸುತನಕಂ ಲುಬ್ಧಗೊಳ್ಳುವ ಜೀವನವಿದಲ್ಲ |
ಪರಮಶಾಶ್ವತ ಜೀವನದ ಪರಿ
ಯರಿಪಲಾರದು ತಮ್ಮಕೆಳೆತನ
ತೆರಳಿದಪೆವಪಿನಯಕೆ ಮನ್ನಿಸಿರೆಂದು ಯತಿನುಡಿದ ||೩೬||

ಇಂತು ಯತಿವರನೆನಲು ಮಠದ ಮ
ಹಂತ ನಸುನಗುತೊಳ್ಳಿತ್ತೈ ನಿ
ಸ್ವಾಂತರಂಗದ ಬಯಕೆಯೀವುದು ವತ್ಸಹೇಳೆನಲು |
ಸಂತ ಸರ್ವರ ಸುಲಿಪ ಸಾಧನೆ
ಹಿಂತೆಗೆಸಿ ಸಂತಸದ ಪದದಲಿ
ಸಂತತಂ ಬಾಳುವುದೆ ನಮ್ಮಾದರ್ಶ ಕೇಳೆಂದ ||೩೭||

ಮರುದಿವಸ ಬೆಳಗೆದ್ದು ಯತಿಭೂ
ವರನು ಪೋಪುದನಾಮಹಂತಂ
ಗೊರೆದು ಜೋಷೀಮಠಕೆ ನಡೆತಂದಿಳಿದು ಸಂತರಲಿ |
ಅರಿದು ಯೋಗರಹಸ್ಯಗಳ ಮುಂ
ದರಿದು ವರ ರಾವಲ ಮಹಂತನ
ಪರಮಸ್ನೇಹದಿ ಬದರಿನಾರಾಯಣದಿ ವಾಸಿಸಿದ ||೩೮||

ತಮ್ಮದಿರೆ ರಾವಲ ಮಹಂತನ
ನೊಮ್ಮೆ ಗಿರಿ ಕಾಂತಾರ ಗುಹೆಗಳೊ
ಳಮ್ಮಹಿತಯೋಗೀಶರಿರ್ಪರೆಂಬರಿದು ದಿಟವೆ ।
ನೆಮ್ಮುವಿರೆ ನೀವೆಂದು ಯತಿಭೂ
ಪಮ್ಮಣಿದು ಬೆಸಗೊಳಲು ರಾವಲ
ನೆಮ್ಮ ತಿಳಿವಳಿಕೆಯಲಿ ತೋರದು ಕಾಣೆವಾವೆಂದ ||೩೯||

ಎಂದು ರಾವಲನೆನಲು ಯತಿವರ
ನೊರಾಮುದಿನ ಬೆಳಗೆದ್ದು ಸತ್ಯವ
ನಿಂದು ನಾನೇ ಕಾಂಬೆನೆನ್ನುತ ಬಿಟ್ಟು ತನ್ಮಠವ ।
ಮುಂದೆ ಘನಕಾಂತಾರ ಪರ್ವತ
ಕಂದರಂಗಳೊಳಲೆದು ಕೊನೆಗೈ
ತಂದು ಸುಂದರವಲಖನಂದಾನದಿಯನೀಕ್ಷಿಸಿದ ||೪೦||

ತರಳ ರವಿಯುದೆ ಸಿರಗರೆದು ಕೆಂ
ಗಿರಣ ಕರಗಳನಿರಿಸಿ ಹಬ್ಬಿದ
ಗಿರಿನಿಕರ ಶಿಖರಗಳಮೇಗಡೆ ಮೆರೆದ ಮಂಜುಗಳ ।
ತೆರೆಗಳಂ ಮೆಲುವೇಗದಲಿ ಕೆಳ
ಸರಿಸಿ ನೈಸರ್ಗಿಕದ ಸೊಬಗಿನ
ಬೆರಗ ಮೆರೆಸುತ್ತಿರಲು ಯತಿವರ ನದಿಯ ಬಳಿನಿಂದ ||೪೧||

ಗಿರಿಗಳಿಂ ಕೆಳಧುಮುಕಿ ಮುಂಬರಿ
ಪರಿದು ಕಲ್ಗಳಮೇಲೆ ಹೊರಳುತ
ಗರಗರನೆ ಕಲ್ಲೋಲವೊಸಗುತ ಮುರಿದು ಮರುದಿರುಗಿ |
ತೆರೆತೆರೆಯು ಪಿರಿಚಸುತ್ತ ಬಲುಬೆ
ಳ್ನೊರೆನೊರೆಯು ತೇಲಿಸುತ್ತ ಪಸಿತುಂ
ತರಸೆರಚಿ ನೆಗೆಪಲಖನಂದೆಯ ತಟದಿ ಯತಿನಿಂದ ||೪೨||

ಉದಿಪ ದಿನಮಣಿಯುಷದ ಕಂಗರಿ
ಹೂದಿಕೆಯುಂ ವಕ್ಷದಲಿ ಧರಿಸುತೆ
ಮುವಪಿ ಸರಿಯಿಸಿ ತೆರೆಯ ಸೀರೆಯ ಸೆರಗಿನಂಚುಗಳ |
ಆಡುವೆ ನರ್ತಿಸಿ ತಟವ ಚುಂಬಿಸು
ತೆಡೆಯನುಬ್ಬಿಸುವಲಖನಂದಾ
ನದಿ ಸುದತಿಯಳ ಸೊಬಗನೀಕ್ಷಿಸಿ ಯತಿಪ ಬೆರಗಾದ ||೪೩||

ಕಲದಿ ಕಲಕಲನಾದದಿಂ ಹರಿ
ವಲಖನಂದಾ ತಟನಿಯೆದೆಯಲಿ
ಕಲಿತನೀರ್ಗುಳ್ಳೆಗಳ ತೆರೆಗಳ ತೇಲ್ವ ಬೆಳ್ನೊರೆಯ |
ಪಲತೆರದ ಲೀಲೆಗಳ ಖಗಸಂ
ಕುಲದ ಸಂಗೀತಗಳ ಪಲವಿಧ
ದಲರ ಸಿಹಿಗಂಪುಗಳ ಸೊಗಸಿಂ ಮೈಮರೆದು ನಡೆದ ||೪೪||

ನಡೆನಡೆದು ನದಿತಟದೆ ಯತಿಜನ
ದೊಡೆಯ ಚೆಲ್ವೊತ್ತಲಖಸಂದೆಯ
ಬೆಡಗಿನಾ ಸ್ರೋತವನು ಸಂಧಿಸಿ ತನ್ನ ಪದಗತಿಯ |
ತಡೆದು ಕಣ್ಣೆತ್ತೀಕ್ಷಿಸಿದೊಡೆಡೆ
ಬಿಡದೆ ಹಬ್ಬಿದ ಮೇಲುಗಗನವ
ನಡರಿದದ್ರಿಸ್ತೋಮಮಾವರಿಸಿತ್ತು ನಾಲ್ದೆಸೆಯ ||೪೫||

ಜಳಜಳಿಪ ನಗಶಿಖರಗಳ ಸಲೆ
ಬಿಳಿಯ ಮಂಜಿನ ಸಾಲ್ಗಳಲಿ ಕೆಂ
ಗಳೆಯ ರವಿಕಿರಣಗಳು ಪಸರಿಸೆ ತುಂಗಶೈಲೇಂದ್ರ |
ತಳೆದ ರಜತ ಕಿರೀಟ ಕಾಂತಿಯ
ಹೊಳೆಹೊಳೆಸಿತೆಂಬಂತೆ ನೇತ್ರಂ
ಗಳನು ಕೋರೈಸುತಿರೆ ನೋಡುತ ಸೋಜಿಗಂಬಡೆದ ||೪೬||

ಇಡದೆ ರೆಪ್ಪೆಯ ಕಂಗಳರಳಿಸಿ
ಬಿಡದೆ ಹಬ್ಬಿದ ಗಿರಿನಿಕರಗಳ
ನಡುವೆ ದೃಷ್ಟಿಯಬೀರಿ ಭೋಗಿಸಿ ದಿವ್ಯನೋಟಗಳ |
ಬೆಡಗಸೌಖ್ಯವನಂತರದಲೆ
ಲ್ಲೆಡೆಗೆ ನಿಟ್ಟಿಸಿ ದಾರಿಗಾಣದೆ
ಕಡೆಗೆ ತಟನೀಜಳವ ದಾಂಟಲು ನಿಶ್ಚಯಂಗೈದ ||೪೭||

ಒಂದೆಡೆಯೊಳತಿಯಾಳ ನದಿ ಮ
ತ್ತೊಂದುಕಡೆ ಬಹುಸರಳ ಭಾವಿಸ
ಲೊಂದು ಕಡೆಯಲಿ ಪಾದವುಂಸಹ ಮುಳುಗದಂತಿಹುದು |
ಮುಂದೆ ಪದವಿದೆ ಕೊರಳವರೆಗಂ
ಬಂದು ಜಳತೆರೆಮುಸಗಿ ಕುಟ್ಟುವು
ದೊಂದಡಿಯ ಕೆಳಗಿಡಲು ನೆರೆಸುಳಿತಿರ್ರನಾಡಿಪುದು ||೪೮||

ಸೂಚಿಯೊಲು ಮೊನಚಪ್ಪ ಮುಂಜಿನ
ಕೋಚುಗಲ್ಗಳು ತನ್ನ ಪದಗಳ
ಗೀಚಿ ರಕ್ತವಬಸಿದು ತಟನೀಜಳವ ಕೆಂಪೆನಿಸೆ |
ಪಾಚಿಯಿಂ ಜಾರುತಿಹ ಹೆಜ್ಜೆಯ
ತ್ರೋಚಿದೆಡೆಗಿರಿಸುತ್ತ ಯತಿವರ
ನೀಚೆಬರುತಿರೆ ಸಾಪಿನೊಲು ಹಿಮಪಾತಮೊದಗಿದುದು ||೪೯||

ಕೊರೆವ ಹಿಮುವದ್ಗಿರಿಯ ಶೀತಳ
ಮರುತನತಿವೇಗವನು ತಳೆದನು
ಭರದಿ ದಿನಮಣಿ ಕಿರಣಗಳ ಹುದಗಿಟ್ಟುಮರೆಯಾದ |
ತೊರೆಯನೀರಿನ ತಂಪುಬಲಿದುದು
ಸುರಿದುದೆಲ್ಲೆಡೆಮುಂಜು ನವಯತಿ
ವರನ ತನುವವನಿಗೆಯೆ ಕಾಣಿಸದಾಯ್ತು ತಟನಿಯಲಿ ||೫೦||

ಮೇಲಿನಿಂ ತಟನಿಯಲಿ ವೇಗದಿ
ತೇಲಿವಂದಿಹ ನೀರುಗಲ್ಗಳು
ಕಾಲತಾಡಿಸುತಿರಲು ಮಾರುತಪತಿಯಿನಂಗಗಳು |
ಜೋಲುತಿರೆ ಬಾಯಲುಗದಂತೆ ಕ
ಪೋಲಸೆಪೆತಿರೆ ಸೆಳೆತದಲಿ ಗುಣ
ಮೂಲನೆಂತೋ ಪದವನೆಳೆಯುತ ನಡೆದ ನಸುದೂರ ||೫೧||

ನಡೆದಿರಲು ಯತಿಪಾಲನೀಪರಿ
ಪೊಡೆಯುದತಿ ಕುಳಿರಾಂತಮಾರುತ
ಸೆಡೆತುದಂಗೋಪಾಂಗ ಮುಲಿತಾ ಶೈತ್ಯಕೋಪದಲಿ |
ಒಡಲಮೇಲಣ ತಿಳಿವು ತಪ್ಪುವ
ಬೆಡಗುತೋರಿತು ತುಂಬುಹೊಳೆಯಾ
ನಡುವೆ ಮೂರ್ಛಾಸ್ಥಿತಿಯುಡಸುವಂತಾಯ್ತು ಮುನಿಪಂಗೆ ||೫೨||

ಸುರಿವಮಂಜಿನ ಮಳೆಯೊಳಂ ತ
ನ್ನುರದ ಶಾಶ್ವತ ಪದದ ಬಯಕೆಯ
ಮುರಿಯುದಂಗಂಗಳನು ಸಡಲಿಸದತುಳ ಧೈರ್ಯದಲಿ |
ಜರಿದಿರಲು ಕಣ್ಣೀರು ನೀರೊಳು
ಸರಿಸರಿದು ಮುನ್ನಡೆದು ಯತಿಭೂ
ವರನು ನದಿಯಿಂ ಹೊರಗೆ ಬಂದನದೆಂತೊ ಬಲುಬಳಲಿ ||೫೩||

ಕಡೆಗೆ ದಾಂಟುತಲಿಂತು ತಟಿನಿಯ
ದಡದಿ ಹಬ್ಬಿದ ವಿಟಪಸೂಂದರ
ಬುಡದಿ ಪ್ಯುಚಾಚೊರಗಿ ರಕ್ತ್ಮವಬಸಿವ ಪಾವಗಳ |
ಕಡುತರದ ವೇದನೆಗೆ ನೊಂದಳ
ಲೊಡಲ ವಸ್ತ್ರವ ಹರಿದು ಸುತ್ತ್ರಿದ
ನಡಿಗಳಿಂ ಪೂಳಕಾಲವರಿಗಂ ಬಿಗಿದು ಯತಿಪಾಲ ||೩೪||

ಯತಿವರಂ ತಟಿಕೇರಿಬಂದೊಡ
ಮತಿಹಿಮಾವೃತಗಿರಿಯ ಮಾರುತ
ಹತಿಯ ಕತದಿಂದಡಿಯುಗಾಯತ ವಿಷಮಪೀಡನದಿ |
ಮಿತಿಯಮೀರಿದ ಹಸಿವು ದಾಹದ
ಹುತವಹನ ಕೋಪದಲಿ ಸಲಿಮೂ
ರ್ಛಿತನಸಸ್ಥೆಯಲಂದು ಪ್ಯುಮರಿದುರುಳಿಗನು ನಲದಿ ||೩೫||

ಮುನಿಪನಿರಲೀ ಸ್ಥಿತಿಯಲಿರ್ಪಗ
ವನಚರರು ಬಂದಡಿಗರಗಿ ಗುರು
ಜನರೆ ಸಮ್ಮಯ ಸದನದಲಿ ವಿಶ್ರಮಿಸಿರೆಂದೆನಲು |
ನನಗೆ ನಡೆವುದಸಾಧ್ಯವೆನ್ನುತ
ಮುನಿಪನವರಂ ಹರಸಿ ಮಲಗಿದ
ದಿನಪನಭ್ರವ ಸರಿಸಿ ತೊಳಗಿದ ಕೊಂಚಹೊತ್ತಿನಲಿ ||೩೬||

ಎಸೆಯೆ ದಿನಮಣಿ ಸುರಿಪಮುಂಜಿನ
ಏಸರಕಱಗಿತು ಕುಳಿಱಗಾಳಿಯು
ಬೆಸನಹರಿಯಿತು ಸೆಡೆತೊಱಲಕಡುಬಿಗಿತ ಸಡಲಿದುದು
ಬಿಸುಪುದಿಸಿತಾಯಾಸಮುಳಿದುದು
ಹೊಸತೆನಿಪ ಹುರುಪಂಗವಂಗದಿ
ಪಸರಿಸಿತು ಮ್ಯೆಮುರಿದು ಕುಳಿತಸು ಪುಲ್ಲನಾಯಕಪ ||೫೭||

ಮೆಲ್ಲಮೆಲ್ಲನೆ ನಡೆದು ಯತಿಭೂ
ವಲ್ಲಭಂ ದಿನಪಾಲನಸ್ತ್ರಮಿ
ಪಲ್ಲಿ ಬದರೀಕ್ಷೇತ್ರಕ್ಕೈತರೆ ಗಾಯಗಳ ಕಂಡು |
ತಲ್ಲಣಿಸಿ ರಾವಲನು ಪೆಳಗಿಂ
ದೆಲ್ಲಿ ಪುರಿಯಾಗಿರ್ದಿರಕಜನ
ಲೆಲ್ಲವಂ ಬಿತ್ತರಿಸಿಪೇಳ್ದನು ಮುಸಿಪ ನಸುನಗುತ ||೫೮||

ತಿಳುಹಿದೆಲ್ಲವ ಕೇಳಿ ರಾವಲ
ಸಳುಕಿ ಭೋಜನಗೈಸಿದಂ ತಾಂ
ಬಳಲಿಕೆಯ ಲೆಕ್ಕಿಸದೆ ಯೋಗಾಭಿಜ್ಞಪಾರಿಧಿಯ |
ತುಳುಕಿಸಾತ್ಮಿಕ ತತ್ವ ವೀಚೀ
ಕುಳವ ವಿರಚಿಸೆ ಸಂತ ತಾರೋ
ಜ್ವಳ ಸುಧಾಕರ ಮರಳಿ ನಕ್ಕನು ಹರಸೆ ಪರಮಾತ್ಮ ||೫೯||

|| ಇಂತು ಐದನೆಯ ಸಂಧಿ ||

# ಆರನೆಯ ಸಂಧಿ

**ಸೂಚನೆ—ಮಡಿವ ಬಗೆಯನು ತೋರೆಪ ಪೆಣನನು
ಪಿಡಿದು ಪರಿಕಿಸಿ ಭಂಗಿಯಂ ತ್ಯಜಿ
ಅಡವಿಯಲಿ ಕರಡಿಯನು ತಾಡಿಸಿ ಮಥುರೆಗೈತಂದ ||**

ಒರೆವೆನಾಲಿಸಿ ಮುಂದೆ ಯತಿಭೂ
ವರನು ನಡೆದಾ ದ್ರೋಣಸಾಗರ
ಪುರಕೆ ಘೋರನಿರಾಶೆ ಮೂಡಲು ಬಾಳೆ ಜಗತಿಯಲಿ |
ಇರುವುದಾದೊಡಮೇನು ಹಿಮವ
ದ್ಗಿರಿಯ ಮೇಲಿಂಧುಮುಕಿ ದೇಹವ
ತೊರೆಯಬೇಕೆಂದೆನಿಸೆ ನಡೆದನು ಹಿಮಗಿರಿವ್ರಜಕೆ ||೧||

ಮುಂದೆ ಹರಡಿದ ಗಿರಿಯ ಸಾಲ್ಗಳ
ಮುಂದಲೆಯ ಸಿಂಗರದ ಮಂಜಿನ
ಸುಂದರದ ಮಣಿಹಾರ ವರ್ಣದ ಹೊಳಹ ಹೆಚ್ಚಿಸುತ |
ಮಂದಕಾಂತಿಯ ಚೆಲ್ಲಿ ಗಗನದ
ಲಿಂದು ನಗುತಿರೆ ಸುತ್ತಮುತ್ತಣ
ಚೆಂದಗಳ ಕಣ್ಣೆತ್ತಿನೋಡದೆ ನಡೆದ ಯತಿಪಾಲ ||೨||

ಕಂಗಳನೆ ಕೋರೈಪ ಬೆಳ್ಳಿಯ
ಸಿಂಗರವ ಹಿಮವಂತ ತಳೆದನೊ
ರಂಗಮಂಚವೊ ಚೆಲ್ವದೇವಿಯ ನಾಟ್ಯಕೆನೆಮೆರೆವ |
ತುಂಗಗಿರಿಗಳನೇರುತಲಿ ಬೆಳ
ದಿಂಗಳಿನ ರಾತ್ರಿಯಲಿ ಜೀವನ
ಸಂಗರವ ಕೊನೆಗಾಣಿಸುವ ಬಗೆಯಿಂದ ಯತಿಬಂದ ||೩||

ಬಂದು ಯತಿವರ ತುಂಗಶಿಖರದಿ
ನಿಂದು ಜಗತಿಯ ದುಃಖದಿಂ ಮನ
ನೊಂದುಸಾಧಿಸೆ ಯೋಗ್ಯವಾದುದು ಗೋಚರಿಸದೆಂದು |
ಮಿಂದುಮಿರುಗುವ ಕೆಲದಗಿರಿಗಳ
ನೊಂದುಬಗೆಯಿಂ ನೋಡಿ ಕೊನೆಯೊಳ
ಗೊಂದುಸಲ ನಿಡುಸುಯ್ದು ಧುಮುಕಲು ಯತ್ನವಂಗೈದ ||೪||

ಹೇಡಿಯಂದದಿ ಬಿದ್ದು ನಚ್ಚಿನ
ನಾಡನೀನರನತುಳ ನಾಚಿಕೆ
ಗೀಡುಮಾಡುವನೆಂಬ ಸಂಕಟಸಹಿಸನೆಂಬಂತೆ |
ಮೋಡಗಳಲಡಗಿದನು ಚಂದಿರ
ಕೂಡೆ ನಸುತಮ ಹರಡಿ ಗಿರಿಗಳ
ಬೀಡು ಭೀಕರವಾಯ್ತು ಮಾಸಿದ ಮಂದಕಾಂತಿಯಲಿ ||೫||

ಅದರೆ ಹಿಮವತ್ಪರ್ವತಂ ಸಹ
ಸಿರವ ನಾಚಿಕೆಯಿಂದ ತಗ್ಗಿಪ
ತೆರವ ತುಂಗೋತ್ತುಂಗಪದವಿಯನೇರಲಿಹ ನೀನು ।
ಮರೆದು ಹೇಡಿಯ ತೆರದಿ ಕೆಳಗಡೆ
ಗುರುಳುವರೆ ತಡೆ ಪದವನೆನ್ನುವ
ಪರಿಯಲೆಂಬಂತಿಂದು ತಟ್ಟನೆ ಮತ್ತೆ ಹೊರವಂದ ॥೬॥

ಹೃದಯದಿಂದಾಕ್ಷಣವು ತನುತಾ
ಳಿದವ ಮಡಿವುದೆ ಸತ್ಯಮಾದೊಡೆ
ವಿದಿತ ವಿದ್ಯಾರ್ಜನವ ನೀಂಗೈದುಚ್ಚತರಮಾದ ।
ಪದಗಳಿಸಿ ಮಡಿಯೆಂಬ ಕಿರುದನಿ
ಯುದಿಸಿದುದು ಕೇಳದನು ಯತಿವರ
ನಿದುವೆ ಲೇಸೆಂದಿಳಿದು ಗಿರಿಗಳ ಹಿಂದಕೈತಂದ ॥೭॥

ಶಾಶ್ವತದ ಪದಕಾಮು ಯತಿ ಜಗ
ದೀಶ್ವರಂ ತರುವಾಯ ಗಢಮು
ಕ್ತೇಶ್ವರಕೆ ನಡೆತಂದಮೂಲ್ಯದ ಶಾಸ್ತ್ರಸಂಕುಲವ ।
ಈಶ್ವರೇಚ್ಛಾಜ್ಞಾನ ವಿದ್ಯೋ
ಗೀಶ್ವರರ ಪಂಡಿತರ ಪದಗಳಿ
ನಾಶ್ವಸಿಸಿ ಸಾತ್ವಿಕದ ಸೇವೆಗಳಿಂದ ರಂಜಿಸಿದ ॥೮॥

ಆ ತಪೋಧನನೊಂದುದಿನ ಗಂ
ಗಾತಟಕೆ ಬೆಳಗಿನಲಿ ಸುಳಿಯು
ತ್ತೈತರಲು ಪೂರ್ವಾಸನವ ಸಿಂಗರಿಸಿ ಕೆಂಪಿಸಲಿ |
ಆ ತರಣಿ ಮೂಡುತಿರೆ ಸೊಗಸಿಗೆ
ಸೋತು ಮನದೊಳೆ ನುತಿಸಿ ವಿಶ್ವವಿ
ಧಾತನಂ ಕುಳ್ಳಿದನು ಕಾಲಿಳಿಬಿಟ್ಟು ನೀರಿನಲಿ ||೯||

ಹಿಂದೆನೋಡಲು ರಜತಮುಕುಟದ
ಸುಂದರದ ಜಲಜಲಿಪ ಹಿಮಗಿರಿ
ವೃಂದ ರಂಜಿಸುತಿಹುದು ಕೆಲಬಲಗಳಲಿ ನಿಟ್ಟಿಸಲು |
ನಿಂದ ಮಂಜಿನಕಣದ ಮುತ್ತುಗ
ಳಿಂದೆಸೆವ ಪಸುರುಡೆಯ ನೆಲವೆ
ಣ್ಣಂದದಿಂ ಜನಮನವಕದಿವಳು ತುಂಬುಬೆಡಗಿಂದ ||೧೦||

ಕಾಲಬಳಿ ಹೊರಹೊರಳಿ ತಟನೀ
ಬಾಲೆ ಮಿಗೆ ತೊಳೆತೊಳೆದು ತೆರೆಗಳ
ಮಾಲೆಯಿಂ ಪೊಳೆಪೊಳೆವ ಮೀನ್ಗಳ ಹೂಗಳಿಂದವನ |
ಜೋಲು ಬಿಳ್ದಡಿಗಳನು ಪೂಜಿಸಿ
ಮೇಲಕೇಳುತ ಕೆಳಗುರುಳಿ ಯತಿ
ಪಾಲನಂ ಬೆಸಕೈಯುತಿರ್ದಳು ಪರಮಹರ್ಷದಲಿ ||೧೧||

ಪೊಳೆವ ಪೊಂಬಿಸಿಲಿನಲಿ ಮಿರುಗುವ
ಬಿಳಿಯ ಹಂಸಗಳತುಳ ಸೊಗಸಿಂ
ಕಳಕಳದ ಪರಿವಿನಲಿ ತೇಲುತ ತಟದಮೇಲ್ಬೈದಿ |
ತೊಳಪ ಕೋಮಳಗಮನದಿಂ ಸುಳಿ
ಸುಳಿದು ರೆಕ್ಕೆಯುನೊದರಿ ತುಂತು
ರ‍್ಗಳನೆರಚುತಿರೆ ಪ್ಪೆಮರೆದು ಯತಿಪಾಲ ಕುಳ್ಳಿದನು ||೧೨||

ಮಂದಮಂದ ಸಮೀರ ನರ್ತನ
ದಿಂದ ಕಮಲಾಂಗನೆಯುರಂ ಗೆಲ
ದೊಂದು ಬೆಡಗಿಂ ತಲೆಯತೂಗಿಸಿ ಕಾಣ್ಕೆಯೆಂದೆನುತ |
ತಂದು ಮಕರಂದದ ಸುಗಂಧವ
ಬಂದು ತನ್ನಡಿಗದ ಸಮರ್ಪಿಸಿ
ಸಂದು ಸುಳಿಯುತ್ತಿರಲು ಸಂತಸವಾಂತ ಯತಿಪಾಲ ||೧೩||

ಸೃಷ್ಟಿಕರ್ತನ ವಿಶ್ವರಚನೋ
ತ್ಕೃಷ್ಟ ಸೌಂದರ್ಯೋಚ್ಚ ದೃಶ್ಯಾ
ಕೃಷ್ಟಯತಿ ಪ್ರಕೃತಿಯ ಸೊಬಗಿನ ದಿವ್ಯರೂಪವನು |
ದೃಷ್ಟಿಸುತ ಮೈಮರೆದು ಮಿಗೆ ಸಂ
ತುಷ್ಟನಾಗಿರೆ ತಟನಿಯಲಿ ಪರಿ
ಪುಷ್ಟಕಾಯಮದೊಂದು ತೇಲುತ ಬಹುದನೀಕ್ಷಿಸಿದ ||೧೪||

ಪೆಣನ ಕಂಡಾಕ್ಷಣಮೆ ತಾಂ ಪಿಂ
ತಣದ ಕಾಲದಿ ಪರಿಸಿ ತಿಳಿಯಲು
ಹೆಣಗಿದೊಡಮುರಿವಿಸಲ್ ಬಾರದ ನಾಡಿಚಕ್ರಗಳ |
ಗಣದ ನೆಸಪ್ಪೆತಂದು ಸಂಶಯ
ಪೆಣೆಮು ತಟ್ಟನೆ ನೆಗೆದು ನದಿಯಲಿ
ದಣಿದು ತೀರಕೆ ತಂದನಾಶವವಂ ಯತೀಶ್ವರನು ||೧೫||

ತಂದು ಪೆಣನನು ನದಿಯ ತೀರದ
ಲೊಂದು ಮರದಡಿಗಿರಿಸಿ ಸಂಗಡ
ತಂದ ತೀಕ್ಷ್ಣಾಸ್ತ್ರವನು ಕರದಲಿಕೊಂಡು ತನ್ನೊಳಗೆ |
ಬಂದ ಸಂಶಯ ಹರಿಸಲು ದಯಾ
ನಂದ ಬೇಸರಗೊಳದೆ ಕೊಯ್ದನು
ನಿಂದು ದಹಿಸದೆ ಬೆಂಕಿಯೆಲ್ಲವ ಜ್ಞಾನಕೇಂಭೇದ ||೧೬||

ಹೃದಯವಂ ಹೊರದೆಗೆದು ಮೊದಲೊಳ
ಗದರನಂತರ ನಾಭಿ ಮಸ್ತಕ
ಮುದರ ಕಂಠಮೆ ಮೊದಲಹಂಗಂಗಳನು ಕೊಯ್ದೆಳೆದು |
ಅದನೊರೆದು ವರ್ಣನಕೆ ಹೋಲಿಕೆ
ಯುದಿಸದಿರೆ ಮೂರ್ಢೋಕ್ತಿಯೆನ್ನುತ
ನದಿಗೆಸೆದನಾ ಪುಸ್ತಕಂಗಳ ಪೆಣನ ಸಂಗಡಮೆ ||೧೭||

ತೆರಳಿ ಚಂಡಾಲಗಣಕಾ ಯತಿ
ವರ ಬಳಿಕ ಸಾಧುಗಳ ಕೂಟವ
ಬೆರೆದು ಕೆಸರಲಿ ಕೆಡೆದು ಮಾಸುವ ವಸ್ತ್ರವಾಂದವಲಿ |
ಇರುಳು ಹಗಲೆಂದೆನದೆ ಭಂಗಿಯ
ನರೆದು ಸೇವಿಸಿ ಮತ್ತಿನಿಂ ಮೈ
ಮರೆವ ದುರ್ಗಡತೆಯನು ಕಲಿತನು ನುಡಿಗೆ ಬೆರಗಾಗಿ ||೧೮||

ಒಂದುದಿನ ಯತಿರಾಜನೊರ್ವನ
ನೊಂದುಗೂಡಾ ನಗರದಿಂ ಬೇ
ರೊಂದುಕಡೆ ಪೋಗುತ್ತ ರಾತ್ರಿಯ ಕಳೆಯಲವನೊಡನೆ |
ಒಂದು ದೇಗುಲದಲ್ಲಿಳಿದು ಮುದ
ದಿಂದ ಭಂಗಿಯ ಕುಡಿದು ಮಲಗಿರ
ಲೊಂದುಕನಸಿನೊಳಗಜೆ ಶಿವಕೃತಂದರಾಕಡೆಗೆ ||೧೯||

ಗಿರಿತನುಜೆ ನಸುನಗುತ ಪ್ರಾಣೇ
ಶ್ವರನೆ ಕನ್ನಿಕೆಯೊರ್ವಳಂ ನೀ
ನರಸುತ ದಯಾನಂದನಿಗೆ ಕಟ್ಟುವರೆ ಚೆನ್ನಮನ |
ಅರರೆ ಭಂಗಿಯ ಮತ್ತಿನಲಿ ಮೈ
ಮರೆವಗೇತಕೆ ಮದುವೆಯೆನ್ನುತ
ಹರನು ಕರತಳಹೊಯ್ದುನಕ್ಕನು ಯತಿಯ ಕನಸಿನಲಿ ||೨೦||

ನಿದ್ದೆ ಹರಿದುದು ಯತಿಪನಾಕ್ಷಣ
ಮೆದ್ದು ಶೋಕಿಸುತೊಬ್ಬನೇ ಹೊರ
ಬಿದ್ದು ಕೈಸಾಲೆಯಲಿ ಕುಳಿತನು ಕವಿದು ಮೋಡಗಳು ।
ಬಿದ್ದುದಾಮಳೆ ಮಿಂಚು ಹೊಳೆಯಲು
ಕದ್ದು ಕುಳಿತಿಹ ಸುಸುಜನೊಬ್ಬನ
ನಿದ್ದ ನಂದಿಯ ಮೂರ್ತಿಯಡಿಯಲಿ ಕಂಡ ಕೌತುಕದಿ ॥೨೧॥

ಉದಿತ ಕೌತೂಹಲದಿ ಯತಿಯೇ
ನಿದೆನುತಾಕಡೆ ಕರವ ಚಾಂಚಲು
ಹುದುಗಿದವನೋಡಿದನು ನಂದಿಯ ಕೆಳಗಿವಂಕುಳಿತ ।
ಉದಯಕಾಲ ಸಮೀಪಿಸಿತು ಗಗ
ನದಲಿ ಹಬ್ಬಿದ ಮೋಡಗಳು ಕರ
ಗಿದುವು ಮಳೆ ನಿಲೆ ಮುದುಕಿಯೊರ್ವಳು ಬಂದಳಾಕಡೆಗೆ ॥೨೨॥

ನಂದಿಯನು ಸಮ್ಮಾನ ಭಾವನೆ
ಯಿಂದಲರ್ಚಿಸಿ ಹುದುಗಿದ ದಯಾ
ನಂದನನೆಯಭಿಮಾನದೇವತೆಯೆಂದು ಭಾವಿಸುತ ।
ತಂದು ಮೊಸರನು ಬೆಲ್ಲವನು ಹೇ
ನಂದಿದೇವ ಸಮರ್ಪಣಂ ನಿನ
ಗೆಂದೆನುತಲಾವೃದ್ಧೆ ಯತಿಪಗೆ ಬಾಗಿದಳು ನಯದಿ ॥೨೩॥

ಹಸಿವಿನಿಂ ಬೇಸತ್ತ ಯತಿವರ
ನಸುವು ಸಂಕೋಚಿಸದೆ ಬೆಲ್ಲವ
ಪೊಸರಿನೊಂದಿಗೆ ಕಲಸಿ ತಿಂದನು ಭಂಗಿಮುದವಿಳಿದು ।
ಹೊಸ ಹುರುಪು ಮೈಗೂಡಿದುದು ಸಂ
ತಸದಿ ಮತ್ತಾಂ ಪಾದಕವ ಸೇ
ರಿಸೆಸೆನುತ ಸಿಜ್ಜಯಿಸಿ ನಡೆದನು ನರ್ಮದಾತಟಕೆ ॥೨೪॥

ಆಲಿಸಿರಿ ಬಾಲಕರೆ ಯತಿಜನ
ಪಾಲನೀಪರಿ ನರ್ಮದಾನದಿ
ಮೂಲವರಸಲು ತೆಂಕಣದ ದೆಸೆವಿಡಿದು ಮುನ್ನಡೆದು ।
ಕಾಲನಿಡಲೆಡೆಗುಡದ ಭೂರುಹ
ಜಾಲಗಳ ಮುಳ್ಳುಗಳ ಬಿದರಿನ
ಕೋಲುಗಳ ಮಿಗೆ ಮೊನಚುಗಲ್ಗಳ ಕಾಡಿಗೈತಂದ ॥೨೫॥

ಹಗಲಿನಲಿ ರಾತ್ರಿಯನು ತೋರುತ
ಮಿಗೆ ತಿಮಿರವಂ ವೃಕ್ಷ ಸಂಕುಲ
ವೊಗೆಯುತಿರೆ ಪದವಿಟ್ಟಕಡೆಯಲಿ ಮುಳ್ಗಳೂಡುತಿರೆ ।
ಬಗೆಯುತಿರೆ ಖಂಡಗಳ ಕಲ್ಗಳು
ಖಗಮೃಗಾಕುಲ ಸುಳಿಸುಳಿದು ಬಗೆ
ಬಗೆಯ ದನಿಯೆಸಗುತಿರೆ ಯತಿವರ ಮೆಲ್ಲನೈತಂದ ॥೨೬॥

ಬಳೆದ ಕತ್ತಲ ಕಾನನದಿ ತಾಂ
ಸುಳಿವ ಸಮಯದಿ ಹಲವು ಗುಡಿಸಿ
ಲ್ಗಳನು ಕಂಡಾಯತಿಪಸೊಂದರಲ್ಲೈದಿಗೃಹಪತಿಯ |
ಬಳಿನುಡಿದು ಪಾಲ್ಕುಡಿದು ಸಲೆಜಂ
ಗುಳಿಯ ಮೃಗಗಳ ಮಧ್ಯನಡೆಯಲು
ಗುಳಿದಳೆದ ಹಲ ಪದಪಥಂಗಳ ಗೊಂದಲಕೆ ಬಂದ ||೨೭||

ಹಾದಿಯಾವುದ ನಡೆವೆನೆನ್ನುತ
ಲಾದಯಾನಂದಯತಿ ಯೋಚಿಸು
ತಾದುದಾಗಲಿಯೆಂದು ಪಥವೊಂದನುಸರಿಸಿ ನಡೆಯೆ |
ಹಾದು ದಾರಿಯದಾಳಿನೆತ್ತರ
ಮಾದ ಪುಲ್ಗಳ ನಡುವೆ ಕಣ್ಮರೆ
ಯಾದುದಾಗಲುಮಂಜದಾ ಯತಿರಾಜ ಮುಂದರಿದ ||೨೮||

ಮೊರೆವ ಹರಿಗಳ ಸುಳಿವ ಕರಿಗಳ
ಹರಿವ ಹಾವ್ಗಳ ಕರೆವ ಸಾವ್ಗಳ
ಬಿರಿದಬಾಯ್ಗಳ ಬೇಟೆನಾಯ್ಗಳ ಪಕ್ಷಿಕಕ್ಷಗಳ |
ಮೆರೆವ ನರಿಗಳ ವರಚಮರಿಗಳ
ಕಿರಲುದನಿಗಳ ರಕ್ತಪನಿಗಳ
ತರಿದ ಹೊಲಗಳ ನೆಗೆವ ಮೊಲಗಳ ಕಾಡಿನಲಿ ನಡೆದ ||೨೯||

ಕೆಲವುಕಡೆ ಸೊಂಟವನು ಬಾಗಿಸಿ
ಕೆಲವುಕಡೆ ನೆಲಕೂರಿ ಕೈಗಳ
ಕೆಲವುಕಡೆ ಹಾವಿನೊಲು ವಕ್ಷದಿ ತೆವಳಿ ಮೊಣಕಾಲ |
ಕೆಲವುಕಡೆಯೊತ್ತುತ್ತಮುಳ್ಗಳ
ಶಿಲೆಗಳುಪಟಳಗಳನು ಗಣಿಸದೆ
ಬೆಳೆವಪುಲ್ಗಳ ಪೊದರದಾಂಟಿದನಾ ಯತೀಶ್ವರನು ||೩೦||

ಒತ್ತಿಡಿದ ವಿಟಪಗಳ ಕೊಂಬೆಗ
ಳೆತ್ತಲುಂ ಭೀಕರದ ತೆರದಲಿ
ಕತ್ತಲೆಯನುಗಿದಿರಲು ಚಂದಿರತಾರಕೆಗಳಿರದ |
ಬತ್ತರದಮಾವಾಸ್ಯೆ ರಾತ್ರಿಯೊ
ಮುತ್ತಿಡಂಬಂತಿರಲು ಯತಿವರ
ಹತ್ತಿದಿಣ್ಣೆಯ ಧುಮುಕಿಹಳ್ಳವ ಮುಗ್ಗರಿಸಿ ನಡೆದ ||೩೧||

ತುಂಬಿಪಸರಿಸಿ ಬೆಳೆದ ಮರಗಳ
ಬಂಬಲಿನ ತಿಮಿರದಲಿ ನಡೆದಿರೆ
ಕೊಂಬೆಯೆರಡರ ಮಧ್ಯದೆಲೆಗಳ ಘನತೆನಸುಗುಸಿದು |
ಪೊಂಬೆಳಕ ರವಿಕಿರಣ ಬಿದ್ದಿರೆ
ಮುಂಬರಿವ ಕಲಕಲದ ತೆರೆಗಳ
ತಂಬೆಲರ ತೊರೆಯೊಂದಕಂಡನು ಯತಿಪ ತಗ್ಗಿನಲಿ ||೩೨||

ಆವುದೋ ಗಿರಿಯಿಂದ ಕೆಳಜಾ
ರೀವನಾಂತರದೊಳಗೆ ಮಾನವ
ರಾವರುಂ ಸುಳಿಯದಿಹ ಭೀಕರ ಖಗಮೃಗಾವಳಿಯ |
ಕಾವಲೊಳು ಸಲೆ ತಾನೆತಾನಾ
ಗೋವಿನರ್ತಿಸಿ ಹರಿದು ಕೊನೆಯೊಳ
ಗಾಪೆಡೆಯೊ ಕೊನೆಯಪ್ಪ ತೊರೆಯನು ಕಂಡುಬೆರಗಾದ ||೩೩||

ಬೆಡಗ ಮೆರೆಯಿಪ ಬಣ್ಣಬಣ್ಣದ
ಕುಡಿಯಕೊಕ್ಕಿನ ಚಿಕ್ಕಹಕ್ಕಿಗ
ಳೊಡೆದು ಮೌನವನಿಂಪುಗಾನವಗೈದು ಹಾರುತಲಿ |
ಗಿಡಗಳಲಿ ಕುಳ್ಳಿರುತ ರೆಕ್ಕೆಯ
ಬಡಿದು ತೊರೆಬಳಿವಂದು ಮೀನ್ಗಳ
ಪಿಡಿಯೆ ಹೊಂಚುವ ಸೊಬಗ ನಸುಬೆಳಕಿನಲಿ ಯತಿಕಂಡ ||೩೪||

ಹಲತರದ ವರ್ಣೋಪವರ್ಣದ
ಕಲಿದೆಲೆಗಳವನೀಜಗಳ ಕ
ಮ್ಮಲರಸಿಹಿಗಂಪುಗಳ ಮಂದಸಮೀರನರ್ತನದ |
ಕಲಕಲದ ತೆರೆನೊರೆಯ ಸುಳಿಗಳ
ಜಲದ ಬೆಡಗಿನ ನದಿಯ ಸೊಗಸಿಂ
ಗುಲಿದು ಸಂಕಟಮರೆದು ನೋಡುತ ನಿಂದ ಯತಿಪಾಲ ||೩೫||

ತೊರೆಯ ಸೊಬಗನು ನೋಡುತಾಯತಿ
ವರನು ಸಂತಸದಿಂದ ತನ್ನನೆ
ಮರೆದು ನಿಂದಿರೆ ಕೆಲಬಲಂಗಳ ಭೂಜರಾಜಿಗಳ |
ಸರಸರನೆ ತೂಗಿಸುತ ವೇಗದಿ
ಮುರಿದುಕೆಡಹುತ ಕೊಂಬೆಗಳ ಮಿಗೆ
ಬಿರುಸಿನಿಂ ಬೀಸಿಡಸು ಮಾರುತ ಹೊಳೆಯ ಕೆರಳಿಸುತ ||೩೬||

ಕೆರಳಿದನಿಲನಕತದಿ ಝುರ್ರನೆ
ಮೊರೆದು ಕಂಪಿಸಿ ಮುರಿದುಬೀಳುವ
ಮರಗಳಂ ನಿಟ್ಟಿಸಲು ವದನವತಿರುಹಿ ಯತಿಪಾಲ |
ಸರಸರನೆ ಹುಲ್ಮೆಳೆಯ ಮುರಿಯುತ
ದುರದುರನೆ ಕಂಗಳೆದುನೋಡುತ
ಮೊರೆದು ಕರಡಿಯದೊಂದುತನ್ನೆಡೆ ಧಾವಿಪುದಕಂಡ ||೩೭||

ಕರಿಗರಡಿ ಕೂದಲನು ಕೆದರುತ
ಮೊರೆದುಗರ್ಜಿಸುತಿರದೆ ನೋಡುತ
ಕೆರಳಿಮುಂದೆಯೆ ನಿಂದು ಮುಂಗಾಲ್ಗಳನು ಮೇಲೆತ್ತಿ |
ತೆರೆದುಬಾಯನು ತನ್ನದೇಹವ
ಹರಿಯೆ ಹಾಯ್ಸುವದ ಕಂಡು ಯತಿಭೂ
ವರನು ಬೆಚ್ಚಿದ ದಿಕ್ಕುತೋರದೆ ನಿಂದು ಚಿಂತಿಸಿದ ||೩೮||

ನಿಂದಿರಲು ತಾನಿಂದು ಸುಮ್ಮನೆ
ಕೊಂದೆಸೆಯದಿರದೀಕರಡಿಯೆನು
ತಂದು ನಿರ್ಜನವನದಿ ಕಾಯ್ವೆನು ತನ್ನತಾನೆಂದು |
ಒಂದುದಂಡವನೆತ್ತಿ ಮಿಗೆ ಬಿರು
ಸಿಂದ ಕರಡಿಯ ಮೂಗಪೊಡೆವಂ
ತೊಂದುಸಲ ಬೀಸಿದನು ನಿರ್ಭಯನಾಗಿ ಯತಿಪಾಲ ||೩೯||

ತಾನೆ ಗಂಡೆಂದೆಣಿಸಿ ಬಲವಸ
ಮಾನವಂದಾಕರಡಿ ಕೊಲುವಭಿ
ಮಾನದಿಂದ್ವೈತರಲು ತನಗಿಂ ಮಿಗಿಲುಗಂಡೆನಿಪ |
ಆನುತಾತ್ಮನ ಸಾಹಸಕೆ ದು
ಮ್ಮಾನದಿಂ ಬಾಗಿತೆನೆ ಬೆದರುತ
ಕಾನನದಲಡಗಿದುದು ಹಿಂಗಾಲಿಂದ ಧಾವಿಸುತ ||೪೦||

ಮತ್ತೆ ಭೀಕರವನಮದೊಂದರ
ಸುತ್ತಿನಲಿ ಸಿಲುಕುತ್ತ ಯತಿವರ
ನೊತ್ತಿಡಿದ ಮುಳ್ಗಿಡದ ಪೊದೆಗಳ ಕೋರೆಗಲ್ಲುಗಳ |
ಬಿತ್ತರದ ಗಿರಿನಿಕರ ಶಿಖರದ
ಗುತ್ತಿಗಳ ನೀರವದ ನಿರ್ಜನ
ದೊತ್ತಡದ ಕಾನನದಿ ನಡೆದಿರೆ ದಿನಪ ಮುಳುಗಿದನು ||೪೧||

ನಡುವಗಲಿನಲಿ ಘೋರತಿಮಿರಂ
ಬಡೆದಡವಿ ಸೂರ್ಯಾಸ್ತಮಾದೊಡ
ನಡಸೆ ಸಲೆ ವಿಕಟಾಂಧಕಾರಗಳೆತ್ತಲುಂ ಬಿಡದೆ |
ಕಡುಭಯಾನಕಮಾಯ್ತು ಧೈರ್ಯಂ
ಗೆಡದೆ ಯತಿವರ ತದತಡವಿ ಮು
ನ್ನಡೆಯೆ ದೇಹಾಂಗಗಳನೊಡೆದುವು ಕಲ್ಲುಮುಳ್ಳುಗಳು ||೪೨||

ಚರಣಮುಳ್ಳುಗಳಿಂದ ಕೊಂಬೆಯ
ಸರಿಪಯತ್ನದಿ ಕರತಳಂಗಳು
ತರಿವಶಿಲೆಗಳ ಕತದಿ ಮಸ್ತಕಬಾಹುಜಂಘೆಗಳು |
ಕರೆದಿರಲು ಶೋಣಿತವ ಹರಿಕರಿ
ಕರಡಿ ಹುಲಿ ಚಿರತೆಗಳು ಪಾವ್ಗಳು
ಹರಿವ ಭೀಕರವನದಿ ತಡುವುತ ತಮದಿ ಯತಿನಡೆದ ||೪೩||

ಘೋರಕಾಂತಾರವನು ದಾಂಟುತ
ಪಾರಸಾಹಸದಿಂದಲಾ ಯತಿ
ವೀರನೈತರೆ ಹೊರಗೆ ಸ್ವಾಗತಿಸೊಂದು ಬೆಡಗಿಂದ |
ಕಾರುಗತ್ತಲ ರಾತ್ರಿಯಲಿ ನಸು
ದೂರ ಹಣತೆಗಳುರಿಯುತಿರೆ ಬಳಿ
ಸಾರಿ ಸಂತಸದಿಂದ ಕಂಡನು ಹಲಕುಟೀರಗಳ ||೪೪||

ಬಳಿಯೆ ಹರಿದಿಹ ಹೊಳೆಯತಟದಲಿ
ಬೆಳೆದ ಭೂಜದಕೆಳಗೆ ಯತಿವರ
ನಿಳಿದು ದಣಿವಾರಿಸಲು ನಿದ್ರಿಸಿ ದಿನಪಮೂಡುತಿರೆ |
ಕಳೆದು ಕಂಗಳ ಕೆಲದಹೊಳೆಯೊಳ
ಗಿಳಿದು ಮೈಗಾಯಗಳನೆತ್ತರ
ತೊಳೆದು ಮಿಂದುಸ್ತುತಿಸೆ ಕುಳಿತನುವಿಭುಪಶಾಂತಿಯಲ ||೪೫||

ತ್ವಷ್ಟಭಕ್ತಾಭೀಷ್ಟಸುಗುಣೋ
ತ್ಕೃಷ್ಟಯೋಗಾದಿಷ್ಟಜ್ಞಾನ್ಯಾ
ಕೃಷ್ಟಶುಭಜನಪುಷ್ಟವೇದಪಶಿಷ್ಟಪರಿತುಷ್ಟ |
ಇಷ್ಟಸಂಹೃತಕಷ್ಟಮುನಿನಿ
ರ್ದಿಷ್ಟ ಸರ್ವದ್ರಷ್ಟಹೃದಯಾ
ವಿಷ್ಟನಾಶಿಸನಿಷ್ಟಭಾವಪನೆಂದು ನುತಿಸಿದನು ||೪೬||

ಮುಗಿಸಿಸಂಧ್ಯಾದಿಗಳನೇಳಲು
ಹೊಗರು ನೇತ್ರದ್ವಯಗಳಲಿಮಿಗೆ
ಸೊಗಸುತಿರಲಾನಂದ ಬಾಷ್ಪಗಳಾಕುಟೀರಗಳ |
ಮಿಗುವ ವಿನಯದ ಮುಗ್ಧಜನಗಳು
ಬಗೆದು ದರ್ಶನಕೆಂದು ನೆರೆದಿರೆ
ಸೊಗದ ಧರ್ಮವನರುಹಿ ಹರಸಿದನವರ ಯತಿಪಾಲ ||೪೭||

ಸಂತಗೆರಗುತಲೊರ್ವಸ್ಪೃಧ್ವನ
ನಂತರದಿ ಪಾಲ್ತಿಂಮು ಕುಡೆ ಮಿಗೆ
ಸಂತಸದಿ ತಾನದನು ಸೇವಿಸಿವಂದಿಸೆಲ್ಲರನು |
ಚಿಂತಣದ ನದಿಮೂಲವರಸುವ
ಸಿಂತಬಯಕೆಯ ಸಾಧಿಸಲು ಯತಿ
ಸಂತೆರಳಿ ಮುನ್ನಡೆದ ಸಿಮ್ಮಳ ಸಮ್ಮದಾತಟದಿ ||೪೮||

ಮೂರು ವರ್ಷದವರೆಗೆ ಗಿರಿಕಾಂ
ತಾರಗುಹೆಗಳಲಲೆದು ಗುರುಯೋ
ಗೀರಮುಣರಂ ಸಾವಗೆಲ್ಲುವ ಮಾರ್ಗಬಲ್ಲವರ |
ಘೋರತೆಯಿನರಸುತ್ತ ಮೂವ
ತ್ತಾರುವರ್ಷದನಾಗೆ ಮಥುರಾ
ಪೌರವಿರಜಾನಂದದಂಡಿಯ ಯಶವನಾಲಿಸಿದ ||೪೯||

ದಂಡಿ ವಿರಜಾನಂದ ವಿದ್ಯಾ
ಖಂಡ ಜಲಧಿಯನುಬ್ಬಿಸುವ ಬಗೆ
ಗೊಂಡು ಬಳಿಕಿಂತಮಳ ಸತ್ಯದ ವೀಚಿಗಳ ರಚಿಸೆ |
ಮಂಡಳಿಪ ತೇಜದಲಿ ಮಥುರಾ
ಮಂಡಳಾಕಾಶದಲಿ ಕಾಣಿಸಿ
ಕೊಂಡನನಘಾಂಬುಧಿ ಸುಧಾಕರ ಹರಸೆ ಪರಮಾತ್ಮ ||೫೦||

|| ಇಂತು ಆರನೆಯ ಸಂಧಿ ||



# ಏಳನೆಯ ಸಂಧಿ

ಸೂಚನೆ—ಬಂದು ಮಥುರಾಪುರದಲಿ ದಯಾ
ನಂದ ಸೇವೆಯ ಸಲಿಸಿ ವಿರಜಾ
ನಂದ ದಂಡಿಪನಿಂದ ಕಲಿತನು ಸತ್ಯವಿದ್ಯೆಗಳ ||

ಮುಂದೆ ತರಳಕೆ ಸ್ವಾಮಿ ವಿರಜಾ
ನಂದ ದಂಡಿಯ ಚರಿತ ಕೇಳಿರಿ
ಹಿಂದೆ ಪಂಚನದ ಪ್ರದೇಶದ ವ್ಯಾಸ ನದಿ ತಟದ |
ಸಂದ ಗಂಗಾಪುರದಿ ವಿಜ್ಞ
ವೃಂದ ವಂದ್ಯನದೊರ್ವ ದ್ವಿಜನಾ
ನಂದದಿಂ ನಾರಾಯಣಾಖ್ಯನು ವಾಸಿಸುತಲಿರ್ದ ||೧||

ಇರಲಿರಲು ತದ್ವಿಪ್ರ ಸತಿಯಳು
ದರದಲಾದರು ಪುತ್ರರಿರ್ವರು
ಕಿರಿಯವನಿಗೈದಾರು ವರ್ಷಗಳಾಗೆ ಸಿಡುಬೆರಗಿ |
ತರಳತನದಲೆ ಬೆಳಕನರಿಯದ
ಕುರುಡನಾದನು ಜನನಿಜನಕರು
ಪೊರೆದರೆನಿತೋ ಪ್ರೇಮದಿಂದಾ ನೇತ್ರಹೀನನನು ||೨||

ತರಳನಿಗೆ ಹನ್ನೊಂದು ವರ್ಷಗ
ಳುರುಳೆ ನಿಷ್ಠುರ ಮುಗನ ಮಡಿಲ
ಸ್ಲಿರಿದು ಕುರುಡನ ಹೆತ್ತರಿರ್ವರು ಕಾಲವಶದಿಂದ |
ತೆರಳಿದರು ಪರಲೋಕಕಾತನ
ಸಿರಿಯ ಸೋದರ ಪೀಡಿಸಿದ ಹಲ
ತೆರದಿ ದೌಷ್ಟ್ಯದಿ ಕಣ್ಣುಕಾಣಿಸದೆಳೆಯ ಬಾಲಕನ ||೩||

ಇಂತು ಬಾಧಿಸಲಗ್ರಜಂ ಗೃಹ
ವಂ ತೊರೆದು ತದ್ಬಾಲ ಪುರಹಲ
ವಾ ತಿರುಗಿ ಬಳಲುತ್ತ ತಾಂ ಹೃಷಿಕೇಶಕೈತಂದು |
ಪಿಂತಣದ ಕಷ್ಟಗಳ ಮರೆಯುತ
ಸಂತಸದಿ ಗಾಯತ್ರಿ ಜಪದಲಿ
ಸಿಂತು ವರ್ಷವನೊಂದ ಕಳೆದೈತಂದ ಕನಖಲಕೆ ||೪||

ಬಂದು ತತ್ಪುರವರಕೆ ಪೂರ್ಣಾ
ನಂದ ಯತಿಯಡಿಗಳಲಿ ಕುಳಿತನು
ಬಂದ ಷಡ್ಲಿಂಗಾದಿ ವ್ಯಾಕರಣಂಗಳನು ಕೇಳಿ |
ಮುಂದೆ ವರ ಸನ್ಯಾಸ ದೀಕ್ಷೆಯ
ನುಂ ಧರಿಸಿ ವಿಮಲಾತ್ಮ ವಿರಜಾ
ನಂದ ದಂಡೀಶ್ವರನೆನಿಸಿ ರಂಜಿಸಿದ ನೇಮದಲಿ ||೫||

ಹೊಂದಿ ಸನ್ಯಾಸವನು ವಿರಜಾ
ನಂದ ಕಾಶೀಪುರಿಗೆ ತಾ ನಡೆ
ತಂದು ವ್ಯಾಕರಣಾದಿ ಶಾಸ್ತ್ರಂಗಳಲಿ ಪೂರ್ಣತೆಯ |
ಹೊಂದಿ ಪ್ರಜ್ಞಾಚಕ್ಷುವೆನ್ನಿಸಿ
ಮಂದಿಯೆಲ್ಲರನತುಳ ಸೋಜಿಗ
ದಿಂದ ತಲೆದೂಗಿಸುತ ಮೆರೆದನು ದಿವ್ಯತೇಜದಲಿ ||೬||

ಅಕ್ಷವಿರದೊಡಮಾತನಂತ
ಶ್ಚಕ್ಷುವಂ ತೆರೆಯುತ್ತ ಪ್ರಜ್ಞಾ
ಚಕ್ಷುವೆನ್ನಿಸಿ ಯೋಗಿಯೆನಿಸಾ ಸ್ಮರಣಶಕ್ತಿಯನೆ |
ಅಕ್ಷಯಷುಗೆಂದೆನಿಸಿ ವಿದ್ಯಾ
ದಕ್ಷನೆನ್ನಿಸಿ ತಪದಿ ತದ್ದಂ
ಡಿಕ್ಷಿತಿಪ ಕೃಶಕಾಯದೊಳಗಂ ಕಾಂತಿಯಾಂತೆಸೆದ ||೭||

ಪೊಳೆವ ಕಾಂತಿಯ ವಿಮಳದೇಹದ
ತಳೆದ ವರಕೌಪೀನದೊಪ್ಪುವ
ತುಳಸಿ ಮಾಲೆಯ ಬಲಕರದ ನೀಳ್ದಂಡದೆಡಕರದಿ |
ತಳೆದ ವಿರಜಕಮಂಡಲಿನ ಕೌಂ
ಕುಳಿನ ಕೃಷ್ಣಾಜಿನದ ದಂಡಿಪ
ಹೊಳೆದನಿಪ್ಪತ್ತೆರಡು ವರ್ಷದನಾಗಿ ತಿರುತಿರುಗಿ ||೮||

ದಂಡಿಯಂಗಾಂಗದಲಿ ಹೊಳೆದಿಹ
ಖಂಡ ಕಾಂತಿಯನೀಕ್ಷಿಸಳವರ
ಮಂಡಳೇಶ್ವರ ವೀರವಿಕ್ರಮಸಿಂಹನೊಂದುದಿನ |
ದಂಡಿ ಯತಿಪರೆ ನಮ್ಮಬಳಿ ನೆಲೆ
ಗೊಂಡು ಬೋಧಿಪುದೆನಲು ದಂಡಿಪ
ಮಂಡಳಿಪ ನಗೆಯಿಂದ ನಡೆದನು ರಾಜಗುರುವೆನಿಸಿ ||೯||

ಇಂತು ಹಲದಿನ ಕಳೆಯೆ ರಾಜನ
ದೆಂತೊ ಕಾಲಕೆ ಬಾರದಾದನು
ಸಂತನಾತನ ನಡೆಗೆ ಬೇಸರಗೊಂಡು ಭರದಿಂದ |
ಮುಂತೆರಳಿ ಭರತಪುರದೊಳಗಂ
ನಿಂತು ಹಲದಿನ ಬಳಿಕ ಮಥುರೆಗೆ
ಸಂತಸದಿ ನಡೆತಂದು ವಿದ್ಯಾಶಾಲೆಯನು ತೆರೆದ ||೧೦||

ಎದ್ದು ಬ್ರಾಹ್ಮಮುಹೂರ್ತದಲಿ ಶುಚಿ
ಪೊದ್ದಿ ಬೆಳಕುದಿಪನಕ ಧ್ಯಾನದೊ
ಳಿದ್ದು ದಿನಮಣಿ ನೆತ್ತಿಗೇರುವತನಕ ಶಿಷ್ಯರಿಗೆ |
ಸಿದ್ಧಿಸುತ ವಿದ್ಯೆಗಳ ಪಾಲನು
ಮೆದ್ದು ನಸು ವಿಶ್ರಮಿಸಿ ತಾ ಮ
ತ್ತೆದ್ದು ಸಂಜೆಯವರೆಗೆ ಬೋಧಿಪ ದಂಡಿಯತಿರಾಯ ||೧೧||

ಗೂಢ ವಿದ್ಯಾಜ್ಞಾನ ತರ್ಕ
ಪ್ರೌಢಿಮೆಯ ಯಶದಿಗ್ದಿಗಂತಕೆ
ನಾಡೆ ದಂಡಿಯ ವಯದ ಸಂಗಮೆ ವರ್ಧಿಸಾವರಿಸೆ |
ಓಡಿ ಬಹರಾ ಕಾಶಿ ನಗರಿಯಾ
ಬೀಡಿನಾ ಪಂಡಿತರು ಸಹ ತವೆ
ಮಾಡಿ ಸೇವೆಯ ಹರಿಸಿಕೊಳುವರು ತಮ್ಮ ಸಂಶಯವ ||೧೨||

ಒಂದುಸಲ ಎಡ್ವರ್ಡ ಮಥುರೆಗೆ
ಬಂದು ಸನಿಯಕೆ ಪೌರ ವಿಬುಧ
ವೃಂದವಂ ಬರಮಾಡೆ ಶಿಷ್ಯರ ಕೂಡೆ ದಂಡೀಶ |
ಅಂದದಿಂದವನೆಡೆಗೆ ನಡೆದನು
ಮುಂದಿ ವಿರಜಾನಂದರಿವರೆನು
ತಂದು ಭೂಪಗೆ ಪೇಳಲಾತನು ಯತಿಯವಂದಿಸಿದ ||೧೩||

ಉಚ್ಚರಿಸಲೆಡ್ವರ್ಡ ಶಬ್ದ ಸ
ಮುಚ್ಚಯವ ತಪ್ಪಾಗಿ ಜನಗಳು
ಬೆಚ್ಚುತಿರೆ ದಂಡೀಶನಾರೀತಂಗೆ ಬೋಧಿಸುವ |
ಕೆಚ್ಚ ತೋರಿದನಕಟ ಶಬ್ದವ
ನುಚ್ಚರಿಸಲುಂ ಬಾರದಾಯ್ತಿವ
ಗಚ್ಚರಿಯಿದೆಂದೊರೆದನತಿ ನಿರ್ಭೀಕಭಾವದಲಿ ||೧೪||

ದಂಡಿಪನ ದುರ್ದಮ್ಯಧೈರ್ಯವ
ಕಂಡು ಭಾಪೆನುತಂದು ಹುಸಿನಗೆ
ಮಂಡಳಿಸಲಿಡ್ವರ್ಡ ನುಡಿದಿನ್ನೊಂದುಸಲ ಮಣಿದು |
ಮಂಡಳಿಯ ಬೀಳ್ಕೊಟ್ಟ ವಿಬುಧರ
ಖಂಡ ಸಾಹಸನೀತ ಭೀತಿಯು
ಕಂಡವನು ತಾನಲ್ಲವೆಂದರು ಮಿಗುವ ಸೋಜಿಗದಿ ||೧೫||

ಉದ್ಧರಿಸುತೀ ತೆರದಿ ಸತ್ಯವ
ಶುದ್ಧನೆಂಬತ್ತೊಂದು ವರ್ಷದ
ವೃದ್ಧನಾಗಿರಲೊಂದುದಿನ ಮಧ್ಯಾಹ್ನಕಾಲದಲಿ |
ಇದ್ದ ಕುಟಿಯಾ ದ್ವಾರದಿಂ ತಾ
ಸದ್ದು ಮೊಳಗಿತು ಬಾಗಿಲಿನ ಹೊರ
ಗಿದ್ದದಾವುದೊ ವ್ಯಕ್ತಿ ತಟ್ಟಿದುದನು ಮೆಲಮೆಲನೆ ||೧೬||

ದ್ವಾರವಂ ತೆರೆಯಿಸದೆ ನಡುವಗ
ಲಾರು ನಮ್ಮಾಗುಡಿಸಿಲಿನ ಬಳಿ
ಸಾರಿ ತೊಂದರೆಮಾಳ್ಪರಕ್ಕಟ ಕಲಿಪಕಾರ್ಯದಲಿ |
ನೇರದಿಂ ನಾವ್ಕೇಳುವಂದದಿ
ಸಾರಿ ನಾಮವನೆನುತಲಾ ದಂ
ಡೀರಮಣ ಗುಡುಗಿದನು ಕುಳಿತಲ್ಲಿಂದಲೇ ಭರದಿ ||೧೭||

ವಂದಿಸಿದೆ ಗುರು ದೇವರೆ ದಯಾ
ನಂದ ಸರಸತಿಯೆಂಬರೆನ್ನನು
ಬಂದೆನೀ ಕಡೆ ಸತ್ಯ ವಿದ್ಯಾ ಭಿಕ್ಷಯಾಚನಕೆ ।
ತಂದೆ ಗಿರಿಗಿರಿ ವನವನವನಲೆ
ದಿಂದುವರೆಗಂ ತವ್ಮ ಪಾದಕೆ
ಬಂದೆನೆಂದುದಿಸಿದುದು ಮೂರ್ದನಿ ಬಾಗಿಲೆಡೆಯಿಂದ ॥೧೮॥

ತೆರೆಪುದಿಲ್ಲಾ ದ್ವಾರ ನೀ ವ್ಯಾ
ಕರಣ ಶಾಸ್ತ್ರವನೋದಿಹೆಯ ನವು
ಗರುಹೆನುತ ದಂಡೀಶ ಪುತ್ರಂ ಕೇಳಲಾ ವ್ಯಕ್ತಿ ।
ಪರಮ ಕರುಣಾಕರರೆ ನಾಂ ವ್ಯಾ
ಕರಣದೊಳ್ಸ್ವರಸ್ವತಾದಿಯ
ನರಿದು ಪಠಿಸಿಹೆನೆಂದು ನುಡಿದುದು ನಮ್ರವಾಣಿಯಲಿ ॥೧೯॥

ಇಂತು ಹೊರಗಣ ಪಥಿಕನೆನುತಿ
ರ್ದಂತೆಯೇ ದ್ವಾರವದು ತೆರೆದುದು
ಪಿಂತಣಿಂ ಚಿತ್ತದಲಿ ನೆಲಸಿದ ನಿತ್ಯ ಪದವಿಯನು ।
ಸಂತಸದಿ ಪುಗೆ ತೆಗೆದ ಕದವೆಂ
ಬಂತೆ ಸಪ್ಪಳಮಾಗದಂದದಿ
ಸಂತ ವಿರಜಾನಂದನೆಡೆ ನಡೆತಂದುದಾ ವ್ಯಕ್ತಿ ॥೨೦॥

ಪುಟಿಕೆ ಹಚ್ಚಿದ ಚಿನ್ನದೊಲ್ಪು
ಸ್ಫುಟಿತ ವರ್ಣದ ತುಂಬುಯೌವನ
ಪಟಲ ತೇಜದ ಪೊಳೆವ ವಿಸ್ತೃತ ಲೋಚನದ್ವಯದ |
ಕಟಿಯ ಸೂತ್ರಕೆ ಬಿಗಿದ ಕಾವಿಯ
ಪಟವ ಕೌಪೀನದ ವಿನೂತನ
ವಟುವದೋ ಕುಟಿಯೊಳಗೆ ಮೆಲ್ಲನೆ ಮೆಲ್ಲನೈತಂವ ||೨೧||

ಅರರೆ ಮಿಂಚಿನ ಕಾಂತಿ ನೇತ್ರದಿ
ಹುರುಪ ಕನ್ನಡಿಯಂತಿಹುದು ಪಣೆ
ಯೆರಗುತಿಪ ತೋಳುಗಳು ಮುಂಡಿಗೆ ಪೂರ್ಣದೇಹದಲಿ |
ಹರಿಯುತಿದೆ ಸಪ್ಸ್ರಶ್ಮ ಚಸ್ಯದ
ಹುರುಗು ಶಿಷ್ಯರ ಕೂಟ ತಾಳ್ದು
ಚ್ಚರಿಯಲಿರಲಾ ಯುವಕ ಮಣಿದನು ದಂಡಿ ಭೂಪತಿಗೆ ||೨೨||

ಗುರುವೆ ಗುರ್ಜರ ನಾನು ಯೌವನ
ಭರದೊಳೇ ಶಾಶ್ವತದ ಪದವಿಯ
ಪರಮ ಕಾಮನೆಯಿಂದಲೆಲ್ಲವ ಬಿಟ್ಟು ಗುರುಜನರ |
ಅರಸರಸಿ ತಮ್ಮಡಿಗೆ ಜೀವನ
ಪೆರೆಯೆ ಬಂದಿಹೆ ತಾವೆ ಗತಿಯು
ದ್ಧರಿಸಿರೆನ್ನುತಲಾತನುರುಳಿದ ದಂಡಿಯಡಿಗಳಲಿ ||೨೩||

ಇಂತು ನಯದಿಂ ಮಣಿದವನ ಸಿರ
ವಂ ತಡಪಿ ಕರದಿಂದ ತಾನ
ತ್ಯಂತ ಮಧುರ ಪ್ರೇಮದಿಂದಾ ದಂಡಿ ಭೂಕಾಂತ |
ಹಂತ ದ್ವಾರಕೆಯಿಂದಲಾ ಕೃ
ಷ್ಣಂ ತಿಪುಗಿ ಮಥುರೆಯಲಿ ನಡೆತಂ
ದಂತೆ ಬಂದ್ಯೆ ವತ್ಸ ಸುಖಿಸೆಂದೊರೆದ ನಯದಿಂದ ||೨೪||

ಕಿರಣಗಳನಾ ದಿನಪನೆಲ್ಲೆಡೆ
ಗೆರಚುವಂ ದಿಟಮಾದೊಡೇಂ ಕೊಳ
ಕಿರದ ಕನ್ನಡಿ ಮಾತ್ರ ಕಾಂತಿಯನಾಂತು ಪಳಪಳನೆ |
ಮಿರುಗುವುದು ಕಗ್ಗಲ್ಲಿಗೆತ್ತಣ
ಕಿರಣವಕ್ಕಟ ಚಿತ್ತ ನಿರ್ಮಳ
ಮಿರಲು ನಿನ್ನೊಳು ಸತ್ಯ ಹೊಳೆವುದು ವತ್ಸ ಕೇಳೆಂದ ||೨೫||

ಆಲಿಸು ದಯಾನಂದ ಯತಿ ನೀಂ
ಪಾಲಿಸಿದೊಡೆಮ್ಮೊಂದು ಮಾತಸು
ಸೋಲಕಾಣದ ಸತ್ಯ ವಿದ್ಯೆಯ ದಿವ್ಯಕಾಂತಿಗಳ |
ಜಾಲದಿಂ ನಿನ್ನುರವ ಬೆಳಗುವೆ
ವೈ ಲಘುವೆ ತವಪಾದ ಯುಗ್ಮವ
ನೋಲಗಿಸುವರು ಸಕಳ ವಿದ್ವಜ್ಜನರು ಕೇಳೆಂದ ||೨೬||

ಪತ್ಸ ಕೇಳ್ಭೂತಳದಿ ಮತಮತ
ಮತ್ಸರಗ್ರಸ್ತಾಜ್ಞ ನರಕುಲ
ಕುತ್ಸಿತವ ಶಾಸ್ತ್ರಗಳ ರಚಿಸಿಹುದುಳಿದು ವೇದಗಳ ।
ಮುತ್ಸುವಾಕ್ಯವ ಕೇಳು ಸ್ವಾರ್ಥದ
ಉತ್ಸಪಿಪ ನರರಚಿತ ಶಾಸ್ತ್ರದಿ
ಸತ್ಸಮಾಗಮವಾಗದೆಂದುಂ ವಾಸ್ತವದಲೆಂದ ॥೨೭॥

ಒಂದೆ ಸಾರಸ್ವತವ ರಚಿಸಿದ
ನೊಂದು ವಾದಂಗೈವಕಾಲದಿ
ಸಂದ ಮುಪ್ಪಿನಕತದಿ ಮುಂಬಲ್ಬಂಬಲುದುರಿರಲು ।
ಚಂದದಿಂದುಚ್ಚರಿಸಲಾಗದೆ
ಬಂದ ಪುಂಸುಪ ಪುಂಕ್ಷುವೆಂದನು
ಮಂದಿ ಮಧ್ಯದಿ ತದನುಭೂತ್ಯಾಚಾರ್ಯ ಭರದಿಂದ ॥೨೮॥

ನೆರೆದ ಬುಧರನುಭೂತಿಯೆಂದುದ
ತೆರೆದು ಖಂಡಿಸಿ ತಪ್ಪೆನಲ್ ದಿಟ
ವರಿದು ತಾನದ ತಿದ್ದಿಕೊಳ್ಳದಶುದ್ಧ ಶಬ್ದವನೇ ।
ಸರಿಯೆನಿಸಲುದ್ಗ್ರಂಥವೊಂದನು
ಬರೆದನಿವರಿಂದಲೆ ಯತಿಯೆ ಹುಲು
ನರರ ಕುಹಕವನರಿಯಲಾದಪುದೆಂದನಾ ದಂಡಿ ॥೨೯॥

ನಿನಗೆ ಸತ್ಯವನರಿವ ಕಾಮನೆ
ಮನದಲಿರೆ ನರಕೃತಿಗಳೆಲ್ಲವ
ಹೊನಲಿನೊಳಗೀಕ್ಷಣವೆ ಮುಳುಗಿಸಿ ಸರ್ವದಾಮುಂದೆ |
ಜನಕೆ ಬೋಧಿಪ ಕಾಲದಲಿ ಋಷಿ
ಮುನಿಗಳಿತ್ತಿಹ ಸರಳ ಶೈಲಿಯ
ನನುಸರಿಪ ಮಾತೆನಗೆ ಸಲಿಸೆಂದೊರೆದನಾ ದಂಡಿ ||೩೦||

ಗುರುವಿನಾಜ್ಞೆಯ ಪೂರಯಿಸಲದು
ವರೆಗೆ ಮೆಚ್ಚುಗೆಯಿಂದ ಜೊತೆಯೊಳೆ
ಧರಿಸಿ ತಿರುಗಿದ ಪುಸ್ತಕಂಗಳ ಹೊರೆಯ ಮುಳುಗಿಸಲು |
ಪುರದ ಕೆಲದಲೆ ಹರಿವ ಕಲಕಲ
ಮೆರೆದ ಬೊಬ್ಬುಳಿ ಸುಳಿಯ ತೆರೆಬೆ
ಳ್ನೊರೆಯ ಯಮುನಾ ನದಿಯ ತಟಕೈತಂದನಾ ಯತಿಪ ||೩೧||

ತಳೆದ ಗುರ್ವಾಜ್ಞೆಯಲಿ ಗ್ರಂಥಂ
ಗಳನು ನದಿಯೊಳಗೆಸೆಯಲದು ಜಲ
ತಳಕೆ ಪೋದುದು ಯತಿಯೆ ನಿನ್ನೆದೆಕೂಡ ದಿನದಿನಕೆ |
ಬೆಳೆಯಲಿಂತೆನುವೊಲ್ತರಂಗದ
ಬಳೆಗಳಂ ಸೃಜಿಸುತ್ತ ಮರುಚಣ
ದೊಳಗೆ ಕಲಕಲಮೆಸಗಿ ಹರಿದಳು ಯಮುನೆ ಮೊದಲಂತೆ ||

ಆ ದಯಾನಂದಂ ಬಳಿಕ ಗುರು
ಪಾದದೆಡೆಗೈತಂದು ತಾಪೆನ
ಗೋದಿಸಿರಿ ಸಾನುಳಿದ ಚಿಂತೆಯ ತೀರ್ಪೆನೆಂದೆನಲು |
ಆ ದಯಾಕರ ದಂಡಿಯೊಪ್ಪಿದ
ನಾದುದುತ್ಸವಮುಂದು ಮಂಗಳ
ನಾವದೊಂದಿಗೆ ಶಿಷ್ಯ ಕೂಟದಿ ಸೇರೆ ಯತಿಪಾಲ ||೩೩||

ಮುಂದಕೊರ್ವ ಸುಭಕ್ತನೆಡೆಗೈ
ತಂದು ದಿನವುಂಭುಂಜಿಸುತ ನಲಿ
ವಿಂದ ಯತಿ ಪಿಶ್ರಾಮಘಾಟಿನ ಕೆಲದ ಶ್ರೀ ಪತಿಯ |
ಮಂದಿರದಿ ವಾಸಿಸುತ ವಿರಜಾ
ನಂದ ಪದಯುಗಕಮಲರಜಮಕ
ರಂದಪಾನಾಸಕ್ತ ಷಟ್ಪದನೆನಿಸಿ ರಂಜಿಸಿದ ||೩೪||

ದಿನಕೆರಡುಸಲ ಪೂಜ್ಯ ದಂಡೀ
ಜನಪ ಯಮುನಾ ಜಳದಿ ಪುಷ್ಕಳ
ವೆನಲು ಮೀಯುವ ರೂಢಿಯಿಟ್ಟಿರಲಾ ದಯಾನಂದ |
ಎನಿತೊ ಮುನ್ನಮೆ ತನ್ನ ಗುರುವಿನ
ಮನೆಗೆ ನಡೆತಂದೈದೆ ಪೂಸತಹ
ಹೊನಲ ನೀರನು ಹೊತ್ತು ತಂದಪನಮಿತ ಭಕ್ತಿಯಲಿ ||೩೫||

ಕಡಗಿ ಸಿಡಿಯುವ ಬಿಸಿಲಿನೊಳಗಂ
ಬಿಡದೆ ಸುರಿಯುವ ಮಳೆಯೊಳಂತನು
ಸಡೆತುಕೊಳುವತಿ ಕುಳಿರಿನೊಳಗಂ ಕ್ರಮವ ಭಂಗಿಸದೆ ।
ಇಡಿದ ಬೆಮರಿನ ಪನಿಗಳಂ ತೊ
ಟ್ಟಿಡುವ ನೀರ್ಕ್ಕೋಡಿಯನು ಚಳಿಯಿಂ
ದೊಡೆದಡಿಗಳಂ ಕೂಡ ಗಣಿಸದೆ ತರ್ಪ ನೀರ್ಕ್ಕೊಡನ ॥೩೬॥

ಕುಂಪಣದ ಚಿನ್ನದೊಲುಕಾಂತಿಯು
ನೊಂದಿ ಮಿರುಗುವ ಕೊಂಚವುಂಕಳೆ
ಗುಂದದಿಹ ಸದ್ಬ್ರಹ್ಮಚರ್ಯದ ವಜ್ರಸದೃಶದ ।
ಸಂದ ಮೂವತ್ತಾರು ವರ್ಷದ
ಸುಂದರಾಕೃತಿಯೊಂದಿಪ ದಯಾ
ನಂದ ನೀರ್ತರೆ ಜನಗಳಚ್ಚರಿವಡೆದು ಸಿಟ್ಟಿಪರು ॥೩೭॥

ಒಂದು ದಿನವುಂಬಿಡದೆ ಯತಿವರ
ನೊಂದುವರೆ ವರ್ಷಗಳ ವರೆಗಂ
ಬಂದು ಯಮುನೆಗೆ ಬಿಸಿಲು ಮಳೆ ಚಳಿಯೆನ್ನದೀ ತೆರದಿ ।
ತಂದೊಡಂ ನೀರ್ಕ್ಕೊಡನ ಹೆಂಗಳ
ಸಂದಣಿಪ ಘಟ್ಟದಲೆ ನೇತ್ರಗ
ಳಿಂದ ನಿಟ್ಟಿಸಲಿಲ್ಲ ನಾರಿಯ ಮುಖಸರೋಜವನು ॥೩೮॥

ಸದನದಲಿ ಮಠಗಳಲಿ ಯಮುನಾ
ನದಿಯ ತೀರದಿ ತೋಟದಲಿ ಸು
ಹೃದರು ನೆರೆವಲಿ ಭೋಜನಾಲಯಗಳಲಿ ಬೀದಿಯಲಿ ।
ಮುದದ ಭಂಗಿಯ ಸಾಧುಗಳ ಕೂ
ಟದಲಿ ದೇಗುಲಗಳಲಿ ಯತಿಪನ
ವದನಕಾಂತಿಯ ಸುಸ್ವಭಾವದ ಮಾತೆ ಕೇಳಿಪುದು ॥೩೯॥

ಬರಿಯ ಸೇವಾಭಾವಮೊಂದಿರೆ
ಮೆರೆದಪುದೆ ಕಾಂಚನದ ಮಿರುಮಿರು
ಮಿರುಪ ಹೂವೊಳು ಸಿಹಿಯ ಕಂಪೊಗೆದಂತೆ ಪೇಳ್ದದನು ।
ಭರಮೆ ಧರಿಸುವ ತೀಕ್ಷ್ಣಬುದ್ಧಿಯ
ದೊರೆಯೆನಿಸಿ ಯತಿಪಾಲಗೆಲಿದನು
ಗುರುವರನ ಚಿತ್ತವನು ದಂಡೀಶಾಯ ಭಾಪೆಂದ ॥೪೦॥

ಒಂದು ದಿನಮಿಂತಿರಲು ಪಾಠದಿ
ಬಂದುದು ವ್ಯಾಕರಣ ಸೂತ್ರಮ
ದೊಂದು ಕಲಿತದರಪ್ರಯೋಗದ ಸಿದ್ಧಿಯನು ತೆರಳೆ ।
ಎಂದುಮಾಗದ ತೆರದಲಿ ದಯಾ
ನಂದಗಾದಿನಮೇಕೊ ವಿಸ್ಮೃತಿ
ಸಂದು ತತ್ಸೂತ್ರ ಪ್ರಯೋಗದ ಸಿದ್ಧಿಯಂ ಮರೆದ ॥೪೧॥

ಮೂರು ದಿನಗಳವರೆಗೆ ಯತ್ನಿಸಿ
ತೀರದಿರೆ ಮರೆವಾತ ಗುರುಪಾ
ದಾರವಿಂದಕೆ ಮಣಿದು ಹಲಸಲ ನನಗೆ ಕರುಣೆಯನು |
ತೋರಿರ್ಪೆ ಗುರುದೇವ ಸಿದ್ಧಿಯು
ದಾರತನದಿಂ ಕಲಿಸಿರೆನೆ ಮಿತಿ
ಮೀರೆ ಮುನಿಸಾ ದಂಡಿ ವಿರಜಾಂವನಿಂತೆಂದ ||೪೨||

ಒಮ್ಮೆ ಪೇಳ್ವುದ ನಾವು ಮತ್ತೆ
ನ್ನೊಮ್ಮೆ ಬೋಧಿಸರಲ್ಲ ಹಿಂದಿನ
ದಮ್ಮರೆದ ಸೀನದನು ನಮ್ಮೊಳಗೊಪ್ಪಿಸುವತನಕ |
ನೆಮ್ಮ ಪೊಸತನು ಕಲಿಸೆವೈಸು
ತ್ತುಮ್ಮರೆವು ತೀರದಿರೆ ಯಮುನೆಯ
ಲೊಮ್ಮೆಹಾರಿಕೊ ಮುಖವತೋರಿಸಬೇಡ ನಡೆಯೆಂದ ||೪೩||

ಎಂದ ದಂಡಿಗೆ ವಂದಿಸಿ ವಯಾ
ನಂದ ಗುರುವೆಂದಂತೆ ನೆನಪಿಗೆ
ಬಂದಿರೊಳಿತಲ್ಲದಿರೆ ಸಂಜೆಗೆ ನದಿಗೆ ಬೀಳುವೆನು |
ಎಂದು ಕಂಗಳ ಮುಚ್ಚಿ ಬಾಹ್ಯವ
ನಂದು ಮರಿತಿರಲಾರೊ ಬೋಧಿಸು
ವಂದದಿಂ ನೆನಪಾಯ್ತು ಸೂತ್ರದ ಸಿದ್ಧಿಯನುವಿಂದ ||೪೪||

ಅಕ್ಷದೆರೆದಾಕ್ಷಣವೆ ಯತಿವರ
ಶಿಕ್ಷಕನ ಬಳಿಗೈದಿ ಸಿದ್ಧಿಯ
ನಕ್ಷರಂ ಕೆಡದಂತೆ ಬಣ್ಣಿಸೆ ನೆನೆದ ರೀತಿಯನು |
ದಕ್ಷತನದಿಂದರುಹಲಾದಂ
ಡಿಕ್ಷಿತಿಪ ರೋಮಾಂಚ ಮಿಗುತಿರೆ
ವಕ್ಷದಿಂ ತಾನಪ್ಪಿಕೊಂಡನು ವತ್ಸ ಭಾಪೆನುತ ||೪೫||

ಒಂದುದಿನ ಬೆಳಗಿನಲಿ ನದಿಯಲಿ
ಮಿಂದು ಯತಿವರ ವರ ಸಮಾಧಿಯ
ನೊಂದಿ ಪದ್ಮಾಸನದಿ ಕುಳ್ಳಿರಲುದಯಗಿರಿ ಶಿರದಿ |
ನಿಂದಿಣಕಿ ನಿಟ್ಟಿಸುವ ದಿನಪನ
ಬಂದ ಪಡಿಯಚ್ಚೆಂಬ ಬೆಡಗಿನ
ಸುಂದರಾಕೃತಿ ಕಂಗೆ ಕಟ್ಟಿತು ನೆರೆದ ಮಂದಿಗಳ ||೪೬||

ಭಕ್ತಿಯಲಿ ಮೈಮರೆದು ಸತ್ಯಾ
ಸಕ್ತ ಕುಳ್ಳಿರೆ ದಿವ್ಯ ರೂಪದ
ಶಕ್ತಿಯಿಂದಾಕೃಷ್ಟೆಯಾಗುತಲೊರ್ವಲಲಿತಾಂಗಿ |
ಮುಕ್ತಿ ಕಾಮನೆಯಿಂದ ನುತಿಯಸ
ದುಕ್ತಿ ವಿಸರವನುಚ್ಚರಿಸಿ ನಯ
ಯುಕ್ತೆ ಯತಿಪದಕೆರಗಿ ಮಣಿದಳು ಮಿಂದು ಯಮುನೆಯಲಿ ||

ಪ್ಯೆಮರೆತು ಭಕ್ತಿಯಲಿ ಪದದೆಡೆ
ಭೂಮಿಗೊರಗುತ ಮಣಿದ ತದ್ಭ್ಯಪ
ತೀ ಮಣಿಯ ನೆನೆದಿರ್ದ ಸೀರೆಯ ತಂಪಿನಿಂ ತಿಳಿಮ |
ಕಾಮಿನೀಜನಸಮನಗೆ ತಾಯ್ಗ್ಗೆಣೆ
ಹಾ! ಮಮಕತಳೆಮಾತೆಯೆಂದು ಮ
ಹಾಮಹಿಮನೋಡಿದನು ನೋಡದೆ ನಾರಿಯಾನನವ ||೪೮||

ಎಂದುಮಬಲೆಯ ತನುವ ಮುಟ್ಟಿದ
ನಂದುಪಾಸಸಗ್ಯೆಪ ಸಮಯದಿ
ಸಂದನಾರೀಸ್ಪರ್ಶದಿಂ ಬೇಸರಿಸಿ ಚಿತ್ತದಲಿ |
ನೊಂದು ಗೋವರ್ಧನದ ತಾಣಕೆ
ಬಂದು ಯತ್ಯುಪವಾಸದಲಿ ನೆಲೆ
ನಿಂದು ಕಳೆದನು ಮೂರುದಿನಗಳನಾತ್ಮಚಿಂತನದಿ ||೪೯||

ಹಿಂದಿರುಗೆ ಗುರುಕೇಳಲು ದಯಾ
ನಂದ ಸಂಗತಿ ತಿಳಿಪಿದಂ ನಲಿ
ವಿಂದ ವಿರಜಾನಂದನಾಲಂಗಿಸುತ ಶಿಷ್ಯನನು |
ಮಂದಿಯೆನಿಬರೊ ಕಲಿತರೆನ್ನೊಳ
ಗಿಂದುವರೆಗಂ ಕಾಣೆವಾದರೆ
ನಿಂದವರ ಸದ್ವ್ರತದಿ ನಿನ್ನಂದದಲಿ ಕೇಳೆಂದ ||೫೦||

ಕಳಕಳಿವ ಬೆಳಕಿಂದಲೆಲ್ಲವ
ಬೆಳಗಿಸುವ ರವಿದೇವ ದಹಿಸುವ
ಕಳೆಗಳಂ ತಳೆದಂತೆ ವಿಮಳ ಜ್ಞಾನದಾದ್ಯುತಿಯ |
ಇಳೆಗೆ ಕರುಣಿಸ ದಂಡಿಯಲಿ ಜಳ
ಜಳಸೆ ರಾಜವಲುರಿಯುತಿರ್ದುದು
ಬಳೆವ ಮುಂಗೋಪಾಗ್ನಿ ಶಿಷ್ಯರ ದೋಷಗಳ ದಹಿಸೆ ||೫೧||

ಅಕ್ಕರಿಯೆ ಶಿಷ್ಯನಲಿ ನಿಂತೊಡ
ಮುಕ್ಕಸದೆ ಹೊರಗದನು ದಂಡಿಪ
ತಕ್ಕುದೋ ಸಲ್ಲದುದೊ ತನಗಿದೆನುತ್ತ ಚಿಂತಿಸದೆ |
ದುಕ್ಕಯತಿಗಹುದೆನದೆ ಕಡುಮುಳಿ
ಸುಕ್ಕಿವರೆ ಬೈದವನು ದಂಡದಿ
ಕುಕ್ಕುವನು ಸನ್ಯಾಸಿಯೊಡಲಿಗೆ ವರಸ ಪಾಠನದಿ ||೫೨||

ಒಂದುದಿನ ಕಡು ಮುಳಿದು ವಿರಜಾ
ನಂದ ಕೋಲಿಂ ಹೊಡೆಯಲತಿ ಬಿರು
ಸಿಂದ ಬೆನ್ನೊಳು ಮನದಿ ಮಿಡುಕದೆ ಯತಿ ದಯಾನಂದ |
ತಂದೆ ತಮ್ಮೀ ಕೋಮಳದ ಕರ
ನೊಂದಪುದು ತಾಡಿಸುವಿರೇ ಕ
ಲ್ಲಂದದೀ ತನು ಕುಗ್ಗದೆನ್ನುತ ಬಿನ್ನಪಂಗೈದ ||೫೩||

ವರಯತಿಪನಿಂತೆಂದೊಡಂ ಗುರು
ವರರೆ ನಮ್ಮವೊಲೀ ದಯಾನಂ
ದರನು ದಂಡಿಸೆ ಗೃಹಿಗಳಿವರಲ್ಲವಲೆ ಯತಿಜನರು |
ಪರಮ ಗೌರವಕರ್ಹರೆನುತಂ
ದೊರೆದ ನಯನಸುಖಾಖ್ಯನದಕಾ
ಪರಮಗುರು ನಗುನಗುತಲೊಳಿತೆಂದರುಹಿದಂ ಕೊನೆಗೆ ||೫೪||

ತೀರೆ ಪಠನಾಭ್ಯಾಸ ಪರಮೋ
ದಾರಯತಿಪಂ ನಯನ ಸುಖನೇ
ವ್ವೈರವೆಮ್ಮೊಳಗುಂಟೆ ದಂಡಿಗೆ ನಮ್ಮಹಿತಗಳನೇ |
ಕೋರಿಪೊಡೆದಪ ಮಡಿಕೆಗಾಕುಂ
ಬಾರತಟ್ಟೆಯೆ ರೂಪವೀಯನೆ
ದೂರಿ ನೀನೇಕವನ ನುಡಿಸಿದೆಯೆಂದು ಬೆಸಗೊಂಡ ||೫೫||

ಮುಂದೆ ಮತ್ತೊಂದುದಿನ ವಿರಜಾ
ನಂದ ಸಂಬಂಧಿಕನದೊರ್ವನು
ಬಂದು ಮಥುರೆಗೆ ದಂಡಿ ಭೂಮೀಶ್ವರನದರ್ಶನವ |
ಪೊಂದಲಾಶಿಸಿ ಗುರುವಿನಾಣತಿ
ಯಿಂದ ಶಿಷ್ಯರು ಬಿಡದಿರೆ ದಯಾ
ನಂದನಡಿಗೆರಗಿದನು ಸಮಯವಕಾದು ನದಿತಟದಿ ||೫೬||

ಮಂದಹಾಸದಿ ಯತಿಪ ಹರಸಲು
ಬಂಧು ಪೂಜ್ಯರ ದಂಡಿವಿರಜಾ
ನಂದ ಪದದರ್ಶನವ ಮಾಡಿಸಿರೆನಲು ಯತಿರಾಜ |
ಇಂದು ಶಿಷ್ಯರನುಳಿದು ಬೇರರು
ಬಂಧೊಡೊಳಬಿಡಬೇಡಿರೆನ್ನುವ
ದೊಂದು ಗುರ್ವಾಜ್ಞೆಯನು ಭಂಗಿಸಲಾರೆ ಕ್ಷಮಿಸಂದ ||೫೭||

ಎಂದು ಯತಿವರನೆಂದೊಡಂ ಬಿಡ
ದಂದು ನಂಟನು ನನ್ನ ಸಲುವಾ
ಗೊಂದುಸಲ ಗುರುಕೋಪ ಸೈರಿಸಿರೆಂದು ಮರಮರಳಿ |
ಅಂದು ಬೇಡಲು ಕೋಮಳ ದಯಾ
ನಂದನೆದೆ ಕರಗಿದುದು ನನ್ನೊಡ
ವಂದು ಮೌನದೆ ನೋಡಿರೆನ್ನುತಲೊಯ್ದು ಮಠದೆಡೆಗೆ ||೫೮||

ಮುಂದು ಪಾವನನಾಗಿ ವಿರಜಾ
ನಂದ ವಿಸ್ತೃತಮಾದ ಕುಟಿಯೊಳ
ಗೊಂದು ಗೋಡೆಯ ನೆಮ್ಮಿ ಜಂಕೆಯಚರ್ಮವನುಹಾಸಿ |
ಸುಂದರದಪದ್ಮಾಸನದಿ ಕುಳಿ
ತೊಂದೆ ಚಿತ್ತದಿನಾತ್ಮಮನನಾ
ನಂದದಲಿ ಮುಳುಗಿಹುದಕಂಡನು ಪುಳಕ ಮಿಗೆ ಬಂಧು ||೬೦||

ಬರಿಯಕೌಪೀನಾಂಬರಂ ನೆರೆ
ಬಿರಿದು ಕಂಡಪುದಸ್ಥಿಪಂಜರ
ಸೊರಗಿದಂಗೋಪಾಂಗಮಾದೊಡಮೆಸೆದ ಕಾಂತಿಯಲಿ |
ವಿರಜ ವಿರಜಾನಂದನೆಂಬ
ತ್ತೆರಡು ವರ್ಷದ ವೃದ್ಧನಾದೊಡ
ಮುರೆ ವಿರಾಜಿಸುತಿರ್ದ ತ್ಯಾಗದ ಬೊಂಬೆಯೆಂಬಂತೆ ||೬೦||

ಬೆಂದನಿತೆ ಸಿಹಿಗಂಪ ಬೀರುವ
ಚಂದನದ ಬೆಡಗಿಸಲಿ ವಿರಜಾ
ನಂದದೇವನುನೊಂದ ಜರ್ಜರಕ್ಷೀಣ ಕಾಯದೊಳೆ |
ಸುಂದರದ ಸಾತ್ವಿಕದ ಕಾಂತಿಗ
ಳಿಂದ ಪೊಳೆಪೊಳೆಯುತಿರೆನಂಟನು
ನಿಂದು ನಿಟ್ಟಿಸಿಯತಿಯ ಸಂಜ್ಞೆಯಲಂದು ಹೊರವಂದ ||೬೧||

ದಂಡಿದೇವನ ದರ್ಶನೋತ್ಸವ
ಗೊಂಡು ನಂಟನು ಯತಿವರನನೊಡ
ಗೊಂಡು ಬರುತಿರೆ ಕುಟಿಯ ಬಾಗಿಲಲೊರ್ವಸಹಪಾಠಿ |
ಕಂಡು ಯತಿಬೇಡೆಂದೊಡಂ ಮನ
ಗಂಡರಿಯದದ ಗುರುವಿನಡಿಯಲಿ
ಮುಂಡಿಸಿದನಾ ದರ್ಶನೋತ್ಸುಕ ನರನ ವಾರ್ತೆಯನು ||೬೨||

ಇಂದದಾವನು ತಮ್ಮದರ್ಶನ
ದಿಂದ ನಿಷ್ಕಳನಾದ ಯತಿಯೊಡ
ನೆಂದವಂ ಬೆಸಗೊಳಲು ಕರೆಯಿಸಿ ಯತಿಯುಪಂಡೀಶ |
ನಿಂದಿಸವನಂ ಕುರುಡರಾಪಹೆ
ವೆಂದು ನಮ್ಮಯ ಸುಡಿಗೆ ಭಂಗವ
ತಂದೆಯದರಿಂ ಸಮ್ಮ ಹತ್ತಿರ ಬರಲಿ ಬೇಡೆಂದ ||೬೩||

ನುಡಿದವಚನವಕೇಳಿ ಗಡಗಡ
ನಡುಗಿ ಗದ್ಗದಕೊರಳ ಸೆರೆಗಳ
ನಿಡಿದಿರಲು ಕಂಬನಿಯ ಜಳದಿಂ ತೊಳೆದುಗುರುಪದವ |
ಕೆಡೆದು ದೇವರೆ ನಂಟಿಸಾಗ್ರಹ
ಬಿಡಿಸಲಾರದೆ ತಂದೆಸಿದು ತ
ಮ್ಮಡಿಯ ಹಂಗಿಸೆಗೈದುಪಲ್ಲಿಂದಳಲಿಪನು ಯತಿಪ ||೬೪||

ಎನಿತೊಪರಿಯಿಂ ಬೇಡಿ ತದ್ಯತಿ
ಜನಪಮನ್ನಿಸಿರೆಂದೊಡಂ ಗುರು
ಮುನಿಸಬಿಡದಿರೆ ಹಲದಿನಂಗಳ ಕಳೆದು ಶೋಕದಲಿ |
ಕೊನೆಗೆ ನಯನಸುಖಾದಿ ಮಿತ್ರಾ
ಸುನಯ ಜಳದಿಂ ತನ್ನಗುರುವಿನ
ಕನಲಬೆಂಕಿಯ ತವಿಸಿ ಮತ್ತಾಶ್ರಯವನಾರ್ಜಿಸಿದ ||೬೫||

ಇರಲಿರಲು ಮತ್ತೊಂದು ದಿನಯತಿ
ಪರಸುತನ್ನಯ ಪೂಜ್ಯಗುರುವರ
ನಿರುವ ತೋಟ್ಟಯು ಗುಡಿಸಿಕೂಡಿಸಿ ಕಸವನೊಂದುಕಡೆ |
ಹೊರಗವಂ ಕೊಂಡೊಯ್ಯಲೋಸುಗ
ಮೊರವನೊಂದನು ತರಲು ನಡೆದನು
ಪೊರಕೆಯಂ ಸಹ ರಾಶಿಯೊಂದಿಗೆ ಬಿಟ್ಟುಭರದಿಂದ ||೬೬||

ಅಂದನಿತರೊಳಗತ್ತ ಪಿರಜಾ
ನಂದ ಗೋಡೆಯುನೆಗಪಿ ತಾನಡೆ
ತಂದು ಸೋಂಕಲು ಪಾದ ರಾಸಿಗೆ ಕನಲಿ ಯತಿವರನ |
ಬಂದ ಕೋಪದ ಭರದಲಾಲಸಿ
ಯೊಂದು ನಿಂದಿಸಿ ಬಳಿಗೆ ಬರಬೇ
ಡೆಂದು ನೂಂಕಲು ನಯನಸುಖನೆಡೆ ನಡೆದನಾಯತಿಪ ||೬೭||

ಪ್ರಖರಕೋಪಕೆ ನೊಂದೆ ನನ್ನಯ
ಸಖರೆ ಹಲದಿನ ಮಾತ್ರವಿರ್ದಪು
ದಖಿಳ ವಿದ್ಯಾಧ್ಯಯನ ತೀರಲು ಪೋಪಪೂರ್ವದಲಿ |
ಮುಖವ ತೋರಿಸದೆಂತು ದಂಡಿಗೆ
ಸುಖವ ತಳೆವೆನೊ ಪೂಜ್ಯಗುರುಪದ
ನಖದಬೆಳಕಿಂ ಬೆಳಗಬಯಸೆನು ಸುತಿಯನಾನೆಂದ ||೬೮||

ಎಂದ ನುಡಿಗಳ ಕೇಳುತಾ ಸಖ
ನಂದು ಬೇಗನೆ ನಡೆದು ವಿರಜಾ
ನಂದನಡಿಗಳಿಗೆರಗಿ ನಿರ್ದೋಷದಲಿ ಯತಿವರರು |
ನೊಂದಿಹರು ತಾವವರ ಮನ್ನಿಪು
ದೆಂದೆನಲು ದಂಡೀಶ ಗದ್ಗದ
ದಿಂದ ಮುನಿನೀನಾ ಮಹಾತ್ಮನಲಿತ್ತು ಬರಲೆಂದ ||೧೯||

ಕೆರಳಿ ಹಲಸಲ ನೂಂಕಿದೊಡಮಾ
ಗುರುಪದವೆನಿತೋಬಾರಿ ನಮ್ರಲಿ
ಪರಿದ ಶಿಷ್ಯರ ಮಧ್ಯೆ ಸನ್ನಾಶಯವನೊಳಿತಾಗಿ |
ಅರಿತವ ದಯಾನಂದನೊಬ್ಬನೆ
ಸರಿಕಹಾ ಸಾವೀತನನೆ ಸಂ
ಬಿರುವೆವೀತನ ವಿದ್ಯೆಫಲಿಸುವುದೆಂದು ಪೇಳ್ದಿಹನು ||೨೦||

ಆ ದಯಾನಂದನಲಿ ರಂಜಿಪ
ಪಾವಶಕ್ತಿಗೆ ಮೋಹಗೊಳ್ಳುತ
ಲೇಧರೆಯಲೀ ಧರ್ಮವಿಷಯವ ಕುರಿತು ನಿನ್ನೊಡನೆ |
ವಾದಿಸುವರಾರಕಟ ತರ್ಕವಿ
ವಾಪದಲಿ ನೀ ಕಾಲಜಿಹ್ವನೆ
ಯಾದೆ ವತ್ಸನೆ! ಸುಖಿಸೆನುತ ಪೇಳ್ದಿಹನು ದಂಡೀಶ ||೨೧||

ದಿಕ್ಕುತೋರದೆ ಮರುನುಡಿಯೊಗುರು
ಮಿಕ್ಕುಮರಲಾನಂದ ಬಾಷ್ಪಗ
ಳಕ್ಕರೆಯಸೂಸುತ್ತ ವತ್ಸನೆ ಕಲಿಯಲೀ ಪರಿಗೆ |
ಪೊಕ್ಕವರದೆನಿತೊ ಜನಮಾದೊಡೆ
ಸಿಕ್ಕದಾಯ್ತೆನಗಿನಿತು ಸಂತಸ
ಮಿಕ್ಕವರಸಂಗದೊಳಗೆನುತಾಲಂಗಿಪನು ಯತಿಯ ||೨೨||

ಗುರುವಿನಡಿಯಲಿ ಕುಳಿತು ಯತಿವರ
ನೆರಡುಪರಿವರ್ಷಗಳ ಪರಿಗಂ
ಭರದಿವರವೇದಾಂತಸೂತ್ರಮಹರ್ಷಿಪಾಣಿನಿಯ |
ವಿರಚಿತಾಷ್ಟಾಧ್ಯಾಯಿಗಳನೊಡ
ವೆರಸುತಮಹಾಭಾಷ್ಯಮಲ್ಲದೆ
ಪರಮಗೂಢದ ಶಾಸ್ತ್ರಗಳ ಕತಿಪಯವನೋದಿದನು ||೨೩||

ಸ್ವಗುರುಭಾಸ್ಕರಕೋಪ ಕಿರಣದಿ
ನುಗುವಬಿಸುಪಂ ತಳೆದುತನ್ನ ಶ
ಮಿಗುವಕರುಣೆಯ ತಂಪನೀಯುತಲಿಂತು ನರಕುಲಕೆ |
ಸೊಗಯಿಸುತತಿಳಿವೆಳಕಸುಹೃ
ದ್ಗಗನದಲಿ ಸನ್ಯಾಸಿ ಜಳಧಿಯ
ಸೊಗಸುಧಾಕರ ಮೆರೆಯುತಿರ್ದನು ಹರಸೆ ಪರಮಾತ್ಮ ||೨೪||

|| ಇಂತು ಏಳನೆಯ ಸಂಧಿ ||



# ಎಂಟನೆಯ ಸಂಧಿ

**ಸೂಚನೆ—ವೇದಧರ್ಮವನುದ್ಧರಿಸಿಜನ**
**ಭೇದವೆಸಗದೆ ಸರ್ವಹಿತನಂ**
**ಸಾಧಿಸುವ ಮಾತಿತ್ತು ಗುರುವಿಗೆ ಯತಿಪ ಬೋಧಿಸಿದ ॥**

ತರಳರೇ ಸರ್ವೋಚ್ಚಪದವಿಯು
ಗುರುಜನರು ಶಾಸ್ತ್ರಗಳ ಜ್ಞಾನಂ
ಬೆರಸು ಗುಹ್ಯಾಧ್ಯಾತ್ಮ ತತ್ವದ ರತ್ನಸಂಕುಲವ ।
ಧರಿಸಿಹರು ತಮ್ಮೆದೆಯಲುತ್ತಮ
ತರದ ಶಿಷ್ಯರು ಸಿಕ್ಕಿದೊಡೆಹವ
ವರಿತು ಕರುಣಿಪರೆಲ್ಲವಂ ಧರ್ಮೋನ್ನತಿಯ ಬಗೆದು ॥೧॥

ಯೋಗವಿದ್ಯಾಜಲಧಿ ಪಾರಗ
ನಾಗಿ ವಿರಜಾನಂದನೊಳವೊಳ
ವೋಗಿಸಂಚಯಿಸಿರ್ದ ದುರ್ಲಭ ತತ್ವರತ್ನಗಳ ।
ಆಗತಾಂತೇವಾಸಿ ಭೌತಿಕ
ಭೋಗರಾಗವಿಹೀನ ಭವಭಯ
ರೋಗಸಂಹೃತಿಕಾಮಯತಿವರಗಿತ್ತಮುಮುತೆಯಲಿ ॥೨॥

ಉಳಿದಶಿಷ್ಯರನೆಲ್ಲ ಸದನಕೆ
ಕಳುಹಿ ತನ್ನೊಳನನ್ಯಭಾವದ
ತಳೆದಿಹ ದಯಾನಂದನಂತನ್ನೆಡೆಗೆ ಬರಮಾಡಿ |
ತಿಳಿಪುವನು ಹಗಲಿರುಳಿದೆನ್ನದೆ
ತೊಳಪ ನಿರ್ಮಳದಾತ್ಮ ತತ್ವಂ
ಗಳನು ಪ್ರೀತಿಪದೊಂದನುಂ ದಂಡೀಧರಾಧೀಶ ||೩||

ಈಪರಿ ದಯಾನಂದ ಸರಸತಿ
ಯಾ ಪವಿತ್ರಾತ್ಮಕನ ಪದಗಳ
ಲಾಪದಗ್ರಸ್ತರಿಗಿದಾಶ್ರಯಮೆನಿಪ ವಿದ್ಯೆಗಳ |
ಸ್ವೈಪಿನಿಂಗ್ರಹಿಸುತ್ತೆ ದೇಶಜ
ನೋಪಕಾರಂಗಳನೆಸಪ ಮೊದ
ಲೀ ಪುನೀತಾವನಿಯ ಖಂಡವ ನೋಡೆ ಯೋಚಿಸಿದ ||೪||

ಇಂತು ಯೋಚಿಸಿ ಮನದಿ ಯತಿವರ
ಸಂತ ವಿರಜಾನಂದನಾಣತಿ
ಯಂ ತಳೆವ ಬಗೆಯಿಂದಲಾರ್ಯರಿಗೇನನಿತ್ತಪೆನೋ |
ಎಂತು ಗುರುದಕ್ಷಿಣೆಯ ಸಲ್ಲಿಪೆ
ನೆಂತವರ ಸಲ್ವರಕೆಗೊಂಡಪೆ
ನೆಂತುಕಂಡಪೆನೆಂದು ಹಲಚಣ ನಿಂತುಚಿಂತಿಸಿದ ||೫||

ಎಂದುಮರ್ಘ್ಯವ ಬಯಸ ವಿರಜಾ
ನಂದನೆಂಬುದನರಿತೊಡಂ ತಾಂ
ಹಿಂದಣಾರ್ಯ್ಯರ ಪದ್ಧತಿಯ ನೆನೆದಾ ದಯಾನಂದ |
ಒಂದುಪಾತ್ರದಿ ದೇವಕುಸುಮವ
ತಂದು ಭಯಭಕ್ತಿಯಲಿ ಮರಕ್ಕೈ
ತಂದು ಮೆಲ್ಲನೆ ಗುರುವಿನಡಿದಾವರೆಯ ಬಳಿಸಂದ ||೬||

ಎಳೆಯರವಿಯದೆ ಮೂಡಲಲಿಕೆಂ
ಗಳೆಯ ಗರಿಗಳ ಬೀಸಿಕಡಿಯುವ
ಕುಳಿರನಡಗಿಸಿ ಪೊಂಬೆಳಕ ಪಸರಿಸಿರೆ ಗುಡಿಸಿಲಿನ |
ಇಳಿವಮೆಟ್ಟಲಮೇಲೆ ನಿಜಕರ
ಗಳನು ಸೊಂಟದಮೇಲಿಡುತ ಮೊಗ
ದೊಳಿರೆ ಶಾಂತಿಯಕಾಂತಿ ನಿಂದಿಹ ಗುರುಪದಕೆ ಬಂದ ||೭||

ಅಂಗಳದಿ ನಿಲಗೊಂಡ ಗುರುವಿನ
ಮಂಗಳದ ಪದಗಳಲಿ ಮಣಿದುಲ
ವಂಗವ ಸಮರ್ಪಿಸುತ ಗದ್ಗದಮುಕ್ಕಿನುಡಿಗಳನು
ನುಂಗುತಿರೆ ಗುರುದೇವ ದಯೆಮಳೆ
ಯಂಗರೆದು ವಿದ್ಯೆಗಳ ಹುಲುಮನು
ಜಂಗೆನಗೆ ಕಲಿಸಿದಿರಿ ಕೊಟ್ಟಪೆನೇನೆನುತ ಮಣಿದ ||೮||

ಪಂಡಿಯತಿಧರಣೀಂದ್ರ ಬುಧಭೂ
ಮಂಡಲೇಶ್ವರ ಮೂಢಜನಪಾ
ಖಂಡ ಖಡ್ಗಾಖಂಡಕೀರ್ತಿಯಗಂಡ ಗುರುದೇವ |
ಚಂಡ ಪ್ರಜ್ಞಾಚಕ್ಷು ಭಾರತ
ಖಂಡಪಾ ವ್ಯಾಕರಣ ಭಾಸ್ಕರ
ಮಂಡಿಸಿಪೆತಮ್ಮಡಿಗ ಶಿರವೆಂದೆರಗಿದನು ಯತಿಪ ||೯||

ದೇವತಾಪೆನ್ನೊಳಗೆ ಧರಿಸಿದ
ತೀವ ಮಮತೆಗೆ ಹುಲುಮನುಜನಾ
ನೀವುದಾದೊಡಮೇನು ಕೊಡುವೆನೆ ಧನದ ರಾಶಿಗಳ |
ಸಾವಗೆಲುವರೆ ಬಿಸುಟುಸರ್ವವ
ಕೋವಣದ ಯತಿಯಾದೆ ಭಕ್ತಿಯ
ಹೂವನಲ್ಲದೆ ಬೇರೆಕೊಡಲೇನಿಹುದರಿಯೆನೆಂದ ||೧೦||

ಹೇ ಮಹಾತ್ಮರೆ ನನ್ನಕಾಯದ
ರೋಮರೋಮದಿ ತಮ್ಮಡಿಯಕರು
ಣಾಮಹಿಮೆಯಾಸ್ಮೃತಿಯೆಮೊಳಗುವುದೀ ಋಣವನಾನು |
ಈ ಮನುಜತನು ಕೆಡುವ ಮುನ್ನಮೆ
ಸ್ವಾಮಿಯಡಿಯಲಿ ತೀರ್ಚಲಪ್ಪುದೊ
ಕಾಮನೆಯಿದಳವಡದೊ ಗೊತ್ತಿಲ್ಲೆಂದನಾಯತಿಪ ||೧೧||

ಯೌವನದ ಸುಬ್ರಹ್ಮಚರ್ಯದ
ತೀವ ಕಾಂತಿಯ ವಿಮಳರೂಪದ
ಕೋವುತಿರ್ಪೆಳೆವಿಸಿಲ ಬಿಂಬಿಸಿ ಪಳಪಳನೆ ಮಿರುಪ |
ಆ ವಿನೂತನ ಭವ್ಯ ಕಾಯದ
ಕೋವಣದ ಯತಿವರ್‍ಯನಂಸಿರ
ದೋವಿ ಹಸ್ತವನಿಟ್ಟು ವಿರಜಾನಂದ ಪರಸಿದನು ||೧೨||

ಪ್ರೀತಿಯಿಂ ನಸುಬಾಗಿಕರಗಳಿ
ನಾತನಂ ಪಿಡಿದೆತ್ತಿ ನೇವರಿ
ಸಾತಲೆಯ ಬರಸೆಳೆದು ತನ್ನೆದೆಗಪ್ಪಿ ದಂಡೀಶ |
ಹೇ ತಪೋಧನ ನಿನ್ನನಾ ಪರ
ಮಾತುಮನು ಸರ್ವತ್ರ ಸಲಹಲಿ
ಚೇತನಾಗೆಂದೊರೆದ ಹರಿದಿರೆ ಸಂತಸದ ಬಾಷ್ಪ ||೧೩||

ಮಗನೆ ನಿನ್ನೀಕಾಣ್ಕೆಯಾದರೆ
ಸೊಗಸದೆಮಗಾವ್ಬಯಪೇವದಕಿಂ
ಮಿಗಿಲೆನಿಪ ದಕ್ಷಿಣೆಯ ನಿನಗದಕೊಡುವ ಚಿತ್ತಮಿರೆ |
ನಗುನಗುತ ಕೊಡಬಲ್ಲೆ ಸಂಶಯ
ಬಗೆಯದೀವುದೆ ಧರ್ಮವೆನ್ನುತ
ಮಿಗುವ ಗದ್ಗದದಿಂದ ವಿರಜಾನಂದ ಬಣ್ಣಿಸಿದ ||೧೪||

ಆದರಿಸು ಮದ್ವಚನಗಳನು ತ
ಪೋಧನನೆ ಪಾಸ್ತವದಿ ನಿನ್ನೊಳ
ಗೈದೆ ಮೆರೆದಿಹುದೆನ್ನ ಕಾಮಿತಪೆಂದು ಗುರುವೆನಲು |
ಹೇ ದಯಾಕರ ಸತ್ಯಮಿಂತಿಹು
ದಾದರೊಳ್ಳಿತು ಪೇಳಿ ಸೇವಕ
ನಾದುದಾಗಲಿ ಗೈವನದನೆಂದನು ದಯಾನಂದ ||೧೫||

ಕಂದ ಸತ್ಯಜ್ಞಾನಸಂಪದ
ಮೊಂದನೀಧರಿಸಿರ್ಪೆ ನೀನದ
ನಿಂದು ಹರಡುತ ನಮ್ಮದೇಶದ ಸುಖವಸಾಧಿಸುತ |
ನೊಂದು ಬಳಲುವ ದೀನಹೀನರ
ಸಂದಣಿಯ ಕಣ್ಣೀರನೊರಸುವ
ದೊಂದು ಗುರುದಕ್ಷಿಣೆಯ ಸಲಿಸೆನಗೆಂದನಾ ದಂಡಿ ||೧೬||

ವೇದಧರ್ಮವನುದ್ಧರಿಸೆ ನೀಂ
ವೈದಿಕಾರ್ಷಕೃತಿಗಳನೆ ಪು
ನ್ನೋದಿಸುವ ಶಿಕ್ಷಾಪ್ರಣಾಳಿಯು ಮರಳಿಮೇಲೆತ್ತಿ |
ಈದಳಿತ ಭುವಿಪತಿತದೇಶದ
ಹೋದಬಾಳಿನ ಬೆಳಕಬೆಳಗುವ
ಗಾಧ ಗುರುದಕ್ಷಿಣೆಯೆ ಬೇಕೆನಗೆಂದನಾದಂಡಿ ||೧೭||

ಹಸಿದವರಚೀತ್ಕಾರ ರುಗ್ಣರ
ಮಸೆದ ಹಾಹಾಕಾರದೈನ್ಯದಿ
ಕುಸಿದ ನರರುದ್ಗಾರ ಮಳೆಬಿಸಿಲಿನಲಿನೊಂದವರ |
ವ್ಯಸನಪಾರಾವಾರ ಕಂಗಳಿ
ಗೆಸೆಯೆ ತಾಂ ನೀರಾಗಿಪ್ರವಹಿಸು
ವಸಮಕೋಮಳ ಹೃದಯದಪ್ಪಣೆಯೆನಗೆಬೇಕೆಂದ ||೧೮||

ಮರೆಯುವೆನ್ನಯ ಬಾಳಿನೊಂದೇ
ಗುರಿಯ ನೀ ಸಾಧಿಸುವೆಯೆಂಬೀ
ಭರವಸೆಯುತಳೆದಿರ್ಪೆ ನಿನಗೋದಿಸಿದ ಮೇಲೆನಗೆ |
ವರದ ಚಿಂತೆಯನುಳಿದಿಹದಕಡೆ
ನಿರುಕಿಸುವ ಗುರುಭಾರತಪ್ಪಿತು
ಮೆರೆಸು ವೈದಿಕಧರ್ಮವಂ ಹೋಗೆಂದನಾದಂಡಿ ||೧೯||

ಕಂದ ಸರ್ವವನುಳಿದ ಭಿಕ್ಷುಕ
ನೆಂದು ಕರೆದೊಡಮಖಿಳಭೂತಳ
ಕಿಂದು ನೀನೇಸ್ವಾಮಿ ಹಾರ್ದಿಕ ಚಕ್ರವರ್ತಿಕಣಾ |
ಎಂದುಮೂರದಿಹಕ್ಕರೆಯ ಬಲ
ದಿಂದ ಜಗತಿಯನೆಲ್ಲವ ದಯಾ
ನಂದ ನೀನಾಳೆಂದು ವಿರಜಾನಂದ ಬೋಧಿಸಿದ ||೨೦||

ಕಾಡುಸಟಿಯನು ದಿಟಕೆ ತಸುವೀ
ಡಾಡು ಮರವೆಯ ಹರಿಸು ತಿಳಿವಿನ
ಬೀಡನಾಗಿಸು ಭರತಭೂಮಿಯ ಮತಮತಾಂತರವ |
ತೀಡಿದಗ್ನಿಯ ವೇದಜಳಮಂ
ನೀಡಿ ನಂದಿಸು ಜಗವ ಸಗ್ಗವ
ಮಾಡು ನಡೆಪೋಗೆಂದು ವಿರಜಾನಂದ ಬೋಧಿಸಿದ ||೨೧||

ಜ್ಞಾನಿಗಳ ಮುಗುವಾಗು ನೀನ
ಜ್ಞಾನಿಗಳ ಗುರುವಾಗು ಸದ್ಧ
ರ್ಮ್ಮಾನುರತರಿಗೆ ಮಿತ್ರನಾಗಘಕುಲಕೆ ಸಿಡಿಲಾಗು |
ದೀನರಿಗೆ ಗತಿಯಾಗು ರೋಗಾ
ಧೀನರೌಷಧವಾಗು ಬರಿ
ವ್ಯಾನಕಂಟಕನಾಗು ವತ್ಸನೆ ಹೋಗುಹೋಗೆಂದ ||೨೨||

ಭೂವರರದೆನಿತೊಜನ ನನ್ನಡಿ
ಗೀವ ಧನಗಳನಲ್ಲಿ ವರ್ಜಿಸು
ತೋವಿ ಹರುಕಲ ಕುಟಯುಸೇರಿದ ಪುಚ್ಛನಾದೆನಗೆ |
ಯೌವನದಿ ದಿಟವರಿಯೆ ಮನೆಗಳೆ
ದೀವಿಧದಿ ತಿರಿದುಂಬ ನಿನ್ನಿಂ
ದಾವ ಬೇರೆಯಕಾಣ್ಕೆ ಸಲುವುದೊಮಗನೆ ಹೇಳೆಂದ ||೨೩||

ಹೆಚ್ಚು ಹೇಳುವುದೇನು ದೇವರ
ನೆಚ್ಚುಗೆಯ ಬಿಡಬೇಡ ಸತ್ಯವ
ಮುಚ್ಚಿಡುವ ನಡೆಬೇಡ ಪಾಪವ ಸತತ ಖಂಡಿಸುವ ।
ಕೆಚ್ಚ ವರ್ಜಿಸಬೇಡ ಗೆಲ್ಲುವ
ಕಿಚ್ಚ ಸಾರಿಸಬೇಡ ನಡೆನಡೆ
ಸಚ್ಚರಿತ್ರನೆ ಸಫಲನಾಗೆಂದೊರೆದನಾದಂಡಿ ॥೨೪॥

ತರುಣಯತಿಪನೆ ಕೊನೆಗೆ ನಾಪ್ಪಿನ
ಗೊರೆವ ನುಡಿಯಿದ ಮರೆಯಲಾಗದು
ನರರಚಿತಮುಹ ಶಾಸ್ತ್ರನಿಕರದಿ ಪೂರ್ಣತುಂಬಿಹುದು ।
ಪರಮದೇವನ ಮೇಣು ಋಷಿಮುನಿ
ವರರ ನಿಂದೆಯದಾರ್ಷರಚನೆಯು
ಲಿರದು ಸತ್ಯವನರಿಯಲೊರೆಗಲ್ಲಿದುವೆ ಕೇಳೆಂದ ॥೨೫॥

ಈಸುದಿನ ನಾಪ್ಸ್ಯೈದ ತಪಗಳಿ
ಗೀಸುದಿನ ವಿಭುಫಲವನಿತ್ತನು
ಜೈಸು ನಡೆಯ್ಯೈಕಂದ ಘೋರಾಜ್ಞಾನತಿಮಿರವನು ।
ಘಾಸಿವಡಿಸುತ ತಿಳಿವಬೆಳಕಿಂ
ಸಾಸಿರದ ಯತ್ನದಲಿ ನೀ ಸ
ನ್ಯಾಸಿಯೆಂಬೀಹೆಸರನುಳಿಸಿಕೊ ಹೋಗುಹೋಗೆಂದ ॥೨೬॥

ಆ ವಿಭುವ ಬೇಡುವೆವು ನಿನ್ನೀ
ಜೀವನವ ಸಾರ್ಥಕ್ಯಕೋಸುಗ
ಸಾವದೆಲ್ಲಿಯದಕಟ ವೇದದ ಬೆಳಕಿನಲಿ ಸಲಿವ |
ಜೀವರಿಗೆ ಹೇ ವತ್ಸ ನಿಸ್ಸ್ವಮು
ಭಾವದಿಂ ಹಲವಿಧ ಮತಂಗಳ
ನೋವ ಕಳೆದುದ್ಧರಿಸು ಸರ್ವರನೆಂದನಾ ದಂಡಿ ||೨೭||

ಆ ವಿನೂತನಯತಿಪ ನಿಜಗುರು
ದೇವನೆಂದುದನೆಲ್ಲವಾಲಿಸಿ
ಸೇವಕಂ ಪ್ರಾಣಗಳ ಸಹಪಣವಿಟ್ಟು ತಮ್ಮಡಿಯ |
ಈ ವರಾಜ್ಞೆಯ ಚಾಚುಬಿಡದಂ
ತಾವಪರಿ ಪಾಲಿಸುವನೆಂಬುದ
ದೇವನೊಲಿದರೆ ತಾವೆಕಂಡಪಿರೆಂದ ಶಿರಬಾಗಿ ||೨೮||

ಇಂತು ವಿನಯದಿ ನುಡಿದುಯತಿಭೂ
ಪಂತಲೆಯಮತ್ತಿರಿಸಿ ಮೌನದಿ
ನಿಂತ ಗುರುಪದಗಳಲಿ ನಲ್ವರಕೆಗಳತಲಕೊಂಡು |
ಅಂತೆ ಸಹಪಾಠಿಗಳ ವಂದಿಸಿ
ಚಿಂತಿಸೆಲ್ಲರ ಸಖ್ಯವನು ಬಲ
ವಂತದಿಂದೆಂಬಂತೆ ನಡೆದನು ಮೆಲನೆಬೀದಿಯಲಿ ||೨೯||

ನಂಬಿಕೆಯ ನಿಜಶಿಷ್ಯನಡಿಸನಿ
ಯಂಬಿಡುತ ನಡೆದಿರಲು ಮಿಡಿಯುತ
ಕಂಬನಿಯ ಗದ್ಗದದಿ ಗುರುಕೆಲವವಗೆ ನಾವಿವರ |
ನಂಬಿಕೊಂಡಿಹೆವಿವರು ನಿಜಗುರಿ
ಯಂಬಿಡದೆ ಮುಟ್ಟುವುದನೀಕ್ಷಿಪ
ಪಂಬಲದು ತೀರುವುದೊ ತೀರದೊ ಕಾಣೆವಾವೆಂದ ||೩೦||

ಸುತನ ಮೋಹವನರಿಯುವ ಗುರು
ಕ್ಷಿತಿಪ ವಿರಜಾನಂದನಿಗೆ ಸ
ನ್ಮತಿ ದಯಾನಂದನೆಯೆ ಮಗನಂತಿರಲು ಮಮತೆಯಲಿ |
ಜೊತೆಗೆರಡುವರೆವರ್ಷವಾಸಿಸಿ
ಯತಿಪ ತೆರಳುತ್ತಿರಲು ನಿಜಮನ
ಕತುಳ ಕಳವಳವಾಯ್ತುದೇನನೊ ಕಳೆದುಕೊಂಡಂತೆ ||೩೧||

ಯತಿಪನೀಪರಿ ನಯದಿ ದಂಡೀ
ಕ್ಷಿತಿಪನಿಂ ಬೀಳ್ಕೊಂಡು ಪಯಣದ
ಗತಿಯಲಾಗ್ರೆಗೆ ಬಂದು ವರ್ಷದ್ವಯವನಾ ಪುರದೆ |
ವಿತರಿಸುತ ಸತ್ಯವನು ತಾಕಳೆ
ದತುಳ ಸಾಹಸದಿಂದ ವಿಗ್ರಹ
ತತಿಯ ಪೂಜೆಯ ತೆಗಳಿ ನಡೆದಂ ಗ್ವಾಲಿಯರ ಪುರಕೆ ||೩೨||

ಗ್ವಾಲಿಯರ ಭೂಪಾಲ ವೈಭವ
ಜಾಲದಿಂ ಬಹು ವಿಜ್ಞ ಪಂಡಿತ
ಓಲಗದಿ ಭಾಗವತ ಸಪ್ತಾಹವನು ಕೈಗೊಂಡು |
ಈ ಲಸತ್ಕೃತಿ ಫಲವನಾ ಯತಿ
ಪಾಲನೊಳ್ಕೇಳಿಸಲು ಮಾಯಾ
ಜಾಲಪಿದಕೇಂ ಫಲವೊ ಬರಿದೇಕ್ಲೇಶವಹುದೆಂದ ||೩೩||

ಗ್ವಾಲಿಯರದಿಂ ನಡೆದು ಯತಿಭೂ
ಪಾಲ ಸಂಚರಿಸುತ್ತ ಧರ್ಮದ
ಪಾಲನದ ದಿವ್ಯೋಪದೇಶವ ಹಲವುಕಡೆ ಕೊಡುತ |
ಸೋಲದನ್ಯರ ಸಟೆನುಡಿಯಸಂ
ಚಾಲನಕೆ ಜಯಪುರಕೆ ನಡೆತಂ
ದಾಲಸನ್ನಗರಸ್ಥವಾಟಿಕೆಯೊಂದರಲಿ ನಿಂದ ||೩೪||

ವಿಗ್ರಹಾರ್ಚನ ಭಾಗವತಗಳ
ನುಗ್ರತರದಿಂ ಖಂಡಿಸುತ್ತಸ
ಮಗ್ರ ಸಾಮಾಜಿಕ ಕುರೀತಿಗಳಂ ವಿದಾರಿಸುತ |
ಅಗ್ರಧರ್ಮಜ್ಞಾನವಂ ಸತ
ತ ಗ್ರಹಿಸೆ ಬೋಧಿಸಲು ಬುಧರು
ವ್ಯಗ್ರರಾದರು ಕಂಪಿಸುತ್ತಿರೆ ತಮ್ಮ ಪಂಥಗಳು ||೩೫||

ಆ ಮುನಿಯಯಶಕೇಳಿ ಜಯಪುರ
ಭೂಮಿಪಂ ಕಳುಹಿಸಲು ಕನ್ನೀ
ರಾಮ ವಿನಯದಿ ಬೇಡಿ ಯತಿಪನ ಸಮ್ಮತಿಯುಗಳಿಸಿ |
ರಾಮಸಿಂಹನರೇಶ್ವರನ ಬಳಿ
ಗಾಮಹಾಜ್ಞಾನಿಯನು ಗೌರವ
ಧಾಮನಂ ವಾಹನದಿ ಬಿಜಯಂಗೈಸಿದನು ಪುರಕೆ ||೩೬||

ರಾಜರಾಜೇಶ್ವರನ ದೇಗುಲ
ಕಾಜಗದ್ಗುರು ಬಂದುರಂಜಿಸೆ
ರಾಜನಂ ಕರೆತರಲು ಬಕ್ಷೀರಾಮನುಜ್ಜುಗಿಸೆ |
ಸಾಜದಲಿ ಮೂರ್ತಿಗಳನಾಯತಿ
ರಾಜ ನಮಿಸದೆ ನೇರದಿಂದ ವಿ
ರಾಜಿಪುದ ನೆರೆನೋಡಿ ಬುಧರಿಂತೆಂದರಾತಂಗೆ ||೩೭||

ಶೈವವೈಷ್ಣವವೆನ್ನದೀ ಯತಿ
ದೇವಮೂರ್ತಿಗಳೆಲ್ಲವಂ ತೃಣ
ಭಾವದಿಂದಪಮಾನಗೈದಪನಿವನಸಂಗಾತ |
ಭೂವರಂ ನುಡಿದಲ್ಲಿ ನಮ್ಮೀ
ದೇವಪೂಜೆಯೆ ಮುಗಿವುದೆನೆ ನರ
ದೇವ ಬಾರದ ನೆಪವ ಬಕ್ಷೀರಾಮ ವಿರಚಿಸಿದ ||೩೮||

ಮುಂದೆ ಪುಷ್ಕರಕ್ಕೈದಿ ಬ್ರಹ್ಮನ
ಮಂದಿರದಿ ನೆಲೆನಿಂದು ವಾದಿಸೆ
ಬಂದ ವೆಂಕಟಶಾಸ್ತ್ರಿಯಂ ಸೋಲಿಸುತ ಭಾಗವತ |
ಎಂದುಮಾವ್ಯಾಸೋಕ್ತಮಲ್ಲಿದ
ಹಿಂದೆ ರಚಿಸಿದ ಬೋಪದೇವಕ
ನೆಂದು ದೋಷಂಗಳನು ತೋರಿಸಿ ತೆರೆದು ಖಂಡಿಸಿದ ||೩೯||

ಬಂದ ಪೂಜಕ ಗಣಕೆ ಸತ್ಯವ
ನೆಂದು ಮುಚ್ಚಿಡಬೇಡಿ ಸತ್ಯವ
ನೆಂದೊಡಂ ಪ್ರಾರಬ್ಧ ಭೋಜನ ನಿಮ್ಮಬೆಂಬಿಡದು |
ಸುಂದರದ ಶುಭಪೀಠ ಕಾರಣ
ದಿಂದ ವಿಭು ಶಿವನೆನಿಪ ಮಾನಿಸೆ
ನಿಂದು ಬೆಟ್ಟದ ಮಗಳ ಗಂಡನನೆಂದನಾ ಯತಿಪ ||೪೦||

ಸೋಜಿಗವನಾಲಿಸಿರಿ ಪ್ರೀತಿಯ
ಭಾಜನರೆ ಮುನ್ನಡೆದು ತದ್ಯತಿ
ರಾಜನಜಮೀರವನು ಸೇರುತ ಸರ್ವ ಮೂರ್ತಿಗಳ |
ಪೂಜನವ ಖಂಡಿಸುತ ಚೇತನ
ಪೂಜೆಯಂ ಬೋಧಿಸುತ ವಾದಿಪ
ಗೋಜಿನವರೆಮ್ಮೆಡೆಗೆ ಬಂದಪುದೆಂದು ಘೋಷಿಸಿದ ||೪೧||

ವಾದಿಸಲು ಪಂಡಿತರು ಬಾರದೆ
ಪೋದೊಡಂ ಸಹ ಶೂಲ್ಬ್ರೆಡಂ ಸ
ದ್ವಾದಿ ರಾಬಿನಸನ್ನನುಂಗ್ರೇಯೆಂಬನುಂ ಬಂದು |
ವೇದಜೀವೇಶ್ವರರ ವಿಷಯದ
ಲಾದ ನಿಜಶಂಕೆಗಳ ಯತಿಪನ
ಪಾದವಲಿ ಪರಿಹರಿಸಿಕೊಂಡಪು ಮೂರುದಿನಗಳಲಿ ||೪೨||

ಒಂದು ದಿನ ಯತಿಪಾಲ ವಾಪದಿ
ನಿಂದ ಸಮಯದಿ ಕ್ರೈಸ್ತ ಪಂಥದ
ಕುಂದ ಖಂಡಿಸೆ ಶೂಲ್ಬ್ರೆಡಂ ಕಡಿಯುತ್ತಲವುಡುಗಳ |
ಮುಂದಕಿಂತೇ ನುಡಿಯುತಿರ್ದ್ದೊಡ
ದೊಂದುದಿನ ಸೆರೆಮನೆಗೆ ಪೋದಪ
ರೆಂಪು ಸನ್ಯಾಸೀನೃಪಾಲನ ಮುಳಿಪು ಹಂಗಿಸಿದ ||೪೩||

ಪಾದರಿಯನುಡಿಕೇಳಿ ತುಟಿಯಲಿ
ಹಾಮು ಹುಸಿನಗೆ ಹೊಳೆಯೆಸನ್ನುತ
ಪಾಪಯತಿವರ ಸತ್ಯಕೋಸುಗವಾಗಿ ಸೆರೆಮನೆಗೆ |
ಹೋದೊಡದರಲಿ ಲಜ್ಜೆಗಾಸ್ಪದ
ಮಾದುದೇನ್ನೈ ನಾನು ಧರ್ಮದ
ಹಾದಿಯೊಳು ನಡೆವಲ್ಲಿ ನಿರ್ಭಯನಪ್ಪೆಕೇಳೆಂದ ||೪೪||

ಎದರು ಪಕ್ಷದ ಮಾನವರು ನ
ನ್ನೆದೆಯ ಭಾವವನರಿಯದೀತೆರ
ದೊದವಿಸಿದೊಡಂ ಕಷ್ಟಗಳನಾನಿನಿತು ಶೋಕಿಸೆನು ।
ಇದುವೆಯಲ್ಲದೆ ಚಿಂತಿಸೆಂಸ್ವ
ಹೃದಯದೊಳಗಾ ಜನರನಿಷ್ಟವ
ಬದಿಗಿರಿಸಿ ಭಯಗಿಯುವ ನುಡಿಗಳನೆಂದನಾ ಯತಿಪ ||೪೫||

ಈದೊರೆಯ ಬೆದರಿಕೆಗೆ ಸತ್ಯವ
ಪಾದರಿಯೆ ಬಿಡಲಾರೆನೆಂದುಂ
ಮೇದಿನಿಯ ಸಿರಿಯೇನು ನಿಮ್ಮಯ ಭಕ್ತಿ ಭಾಜನನ ।
ಆ ದಯಾನಿಧಿಯೇಸುದೇವನ
ನಾದೊಡಂ ಶೂಲದಲಿ ಬಹು ವಿಧ
ವೇದನೆಗೆ ಸಿಲುಕಿಸಿಯೆ ಕೊಂದಪು ನಿಮ್ಮ ಜನರೆಂದ ||೪೬||

ಭರತವರ್ಷದ ರಾಜ್ಯ ಸೂತ್ರವ
ಕರದಿ ಹಿಡಿಯುವ ಶಾಸಕನ ಸೆರ
ವಿರುತ ರಾಜಸ್ಥಾನದಲ್ಲಿನ ರಾಜಮಂಡಲವ ।
ನಿರುಕಿಪಾ ಪ್ರತಿನಿಧಿಯು ಬ್ರೂಕನು
ಮೆರೆವ ಕಾವಿಯ ತಳೆದವರಕಂ
ಡುರಿದು ಬೀಳುತಲಿರ್ದನಾದಿನಗಳಲಿ ತತ್ಪುರದಿ ||೪೭||

ಒಂದುದಿನ ಸಂಜೆಹುಲಿ ಭಕ್ತರ
ಸಂದಣಿಯ ಮಧ್ಯದಲಿ ತೋಟದ
ಲೊಂದು ಭವ್ಯಾಸನದಿ ಕುಳಿತಾಯತಿಪ ಬೋಧಿಸಿರೆ |
ಒಂದುಬಗೆ ಠೀವಿಯಲಿ ಬ್ರೂಕನು
ಬಂದನಾಯೆಡೆ ಭಕ್ತರಂಜುತ
ಹಿಂದೆಸರಿಯುರಿ ತಮಗೆ ಮುನಿದಪನೆಂದರಾಮುನಿಯ ||೪೮||

ಅಂಜಿಕೆಯ ನುಡಿಗಳಿವನಾಲಿಸಿ
ಮಂಜುಳದನಗೆ ಸೂಸಿ ವದನದಿ
ಹಿಂಜರಿವುದುಳಿದಾಸನವ ಮುಂದೊತ್ತಿನೇರದಲಿ |
ಅಂಜಿದರಿಗಭಯಗಳ ನೀಡುತ
ಸಂಜೆಗೆಂಪಿನ ಬೆಡಗನೀಕ್ಷಿಸು
ತಂ ಜಗದ್ಗುರು ರಂಜಿಸಿದ ನಿರ್ಭೀಕಭಾವದಲಿ ||೪೯||

ಕಾವಿವಸ್ತ್ರಕೆ ಮುನಿವ ಬ್ರೂಕನ
ಠೀವತೇಜೋಮಂಡಳದ ಯತಿ
ಭೂವರಾನನಕಂಡು ವಿದ್ಯಾಪ್ರೌಢಿಮಾನ್ವಿತದ |
ಭಾವ ಮಧುರೋಕ್ತಿಗಳನಾಲಿಸಿ
ದೇವ ನಮಿಸಿದೆನೆಂದು ಬಾಗಲು
ಠೀವಹುಸಿನಗೆಯಿಂದ ಮರುವಂದಿಸಿದನಾಯತಿಪ ||೫೦||

ಮುಂದಿಬ್ರೂಕನ ಗರ್ವವರ್ಜನ
ದಿಂದ ಸೋಜಿಗ ಗೊಂಡಿರಲ್ಕೆಲ
ದೊಂದು ಪೀಠದೊಳವನ ಕುಳ್ಳಿರಿಸುತ್ತ ಯತಿರಾಜ ।
ಒಂದು ಹಸುವಿಂದಪ್ಪ ಲಾಭವ
ಕೊಂದು ಸಾಧಿಸಲಾಗದಾದುದ
ರಿಂದ ಗೋವಧನಿಲಿಸಬೇಕೆಂದವಗೆ ಬೋಧಿಸಿದ ॥೫೧॥

ಕಳೆಯೆ ಹಲದಿನಮಿಂತು ಯತಿಭೂ
ವಳಯದರಸನ ಪಾದ ಪದ್ಮಂ
ಗಳ ಸುದರ್ಶನಕೆಂದು ನಾಗಾದ್ರಿಯ ವಿಪಿನದಿಂದ ।
ಕಳಕಳಿಪತೇಜಗಳ ಯೌವನ
ಮೊಳೆತ ತಪಸಿಗಳಿರ್ವರ್ಕೈತಂ
ದುಳಿದೆವಭಿಮಾನವನು ನಾವೆಂದರು ವಿವಾದದಲಿ ॥೫೨॥

ಒಳ್ಳಿತೆನ್ನುತ ಯತಿಪನೆಳನಗೆ
ಬಳ್ಳಿಬಳುಕಿಸಿ ಶಿಷ್ಯನೊಬ್ಬನ
ಸುಳ್ಳುನೆಪದಿಂದವರಕೆಣಕಲು ಸನ್ನೆಗಳನೆಸಗೆ ।
ತಳ್ಳಿ ಬಾಗಿಲಬಳಿಯಲಿರ್ವರ
ಕಳ್ಳ ಜಗಳವತೆಗೆದು ನಿಜಬಲ
ಮುಳ್ಳನಕ ಗುದ್ದಿದನು ಶಿಷ್ಯನು ಮೇಲ್ಮುನಿಸಬಿಗಿದು ॥೫೩॥

ಗುದ್ದೆ ಶಿಷ್ಯನು ತವಸಿಗರು ಸಿಡಿ
ದೆದ್ದು ಬಿಗಿದರು ಜಡಿಯೆನೆಲದಲಿ
ಬಿದ್ದುರುಳಿ ಬೈದಾಡಿದರು ಕೋಳಾಹಳಂ ಮಿಗಲು ।
ಗದ್ದಲಕೆ ಹೊರಪಂದು ಯತಿಪತ
ಬಿದ್ದವರಮೇಲೆತ್ತಿ ಗಡ ತುಂ
ಬಿದ್ದ ಕೊಡ ತುಳುಕಿತಲ ! ಎಂದನು ಮಧುರ ನಗೆಯಿಂದ ॥೫೪॥

ಆಗರೆಗೆ ಬಳಿಕೈದಿಸೇರಿರ
ಲಾಗ ಹಲನೃಪವೃಂದ ವಿರಚಿಸಿ
ಭಾಗವತಖಂಡನದ ಪುಸ್ತಕವೊಂದ ಯತಿರಾಜ ।
ಬೇಗ ವಿತರಿಸಿ ಭಕ್ತಿಮಿಗಲನು
ರಾಗದಿಂ ದಂಡೀಶ ವಿದ್ಯಾ
ಸಾಗರನ ದರ್ಶನವ ಕಾಮಿಸಿ ಮಘುರೆಗೈತಂದ ॥೫೫॥

ತೊಳತೊಳಪ ಸದ್ಬ್ರಹ್ಮಚರ್ಯದ
ಕಳೆಯ ಸುಳಿಸುಳಿದಲೆವ ಮುಕ್ತಾ
ಫಳದಮಾಲೆಯ ಬೆಲೆಯಶಾಲ್ಗಳ ಕಾಲುಚೀಲಗಳ ।
ಮಿಳಿತ ಕಾಷಾಯಾಂಬರದ ಥಳ
ಥಳಿಪ ಪಲ್ಬಂಬಲಿನ ಕುಡಿನಗೆ
ವೆಳಕ ಶಿಷ್ಯನು ಗುರುವಿನಡಿದಾವರೆಯ ವಂದಿಸಿದ ॥೫೬॥

ಭಾವಮುನ್ನತವಾಗಿ ನಿಜಗುರು
ದೇವಗೊಪ್ಪಿಸೆ ತಂದ ಸುತದೇ
ಶೀವಿಮಳ ವಸ್ತ್ರಗಳ ಚಿನ್ನದ ಮುದ್ರೆಗಳತೆಗೆದು ।
ನೇವರಿಸಿ ದಂಡೀನೃಪತಿಯಡಿ
ದಾವರೆಗೆ ಬಿನ್ನವಿಸಿ ನೆರೆ ವಿನ
ಯಾವನತ ಯತಿರಾಜ ನಿಂದನು ಬಾಗಿಮಸ್ತಕವ ॥೫೭॥

ವಣಿದೆನಾರ್ಯನೆ ತಮ್ಮಡಿಯ ರಜ
ಕಣನು ಕರುಣಿಪುದೆಂದು ಪಟಿಕದ
ಮಣಿಯ ಮಾಲೆಯ ಜೆಳಗಿಜೀಡುವ ವಿನಯವಿತ್ತದಸ ।
ಪಣೆಯ ಸವರುತಲೆತ್ತಿ ದಂಡೀ
ಧಣಿಯು ಹರ್ಷದ ಬಾಷ್ಪಜಲಸಂ
ದಣಿಸಿ ತೊಟ್ಟಡೆ ತಬ್ಬಿಕೊಂಡನು ತನ್ನಶಿಷ್ಯನನು ॥೫೮॥

ಮಗನೆ ಬಂದೆಯ ವೇದಧರ್ಮಾ
ಧ್ವಗನೆ ಬಂದೆಯ ಸತ್ಯನಿಷ್ಠಾ
ನಗನೆ ಬಂದೆಯ ದಳಿತದೇಶದ ದೀನದುಃಖಿತರ ।
ಸೊಗನೆ ಬಂದೆಯ ನಮ್ಮಬಾಳಿನ
ಬಗೆಯ ತಂದೆಯ ವತ್ಸ ಬಾಯೆನು
ತುಗುವ ಗದ್ಗದದಿಂದಲಪ್ಪಿದ ಶಿಷ್ಯನನು ದಂಡಿ ॥೫೯॥

ಹೇ ವಿನೂತನ ಯತಿಯೆ ನಿನ್ನೆದೆ
ಗಾವು ನಾಂಟದ ತಿಳಿವಗಿಡನಿದೆ
ಹೂವ ಬಿಡುತಿದೆ ನಮ್ಮ ಕಾಮಿತಮಪ್ಪ ಫಲರಾಶಿ |
ತೀವಿ ಮರೆವಂದದಲಿ ದೇವರ
ದೇವ ಕರುಣಾಂಬುಗಳ ಕರೆಯಲಿ
ಜೀವನದಿ ಸಾಫಲ್ಯಮಾಗಲೆನುತ್ತ ಹರಸಿದನು ||೬೦||

ದಂಡಿಯುಡಿಯಲಿ ಭಾಗವತಪಂ
ಖಂಡಿಸಲು ತಾ ಬರೆದ ಕೃತಿಯನು
ಮಂಡಿಸಲು ಯತಿರಾಜ ಗುರುವದಕೇಳಿ ನಸುನಗುತ |
ಭಂಡತನಗಳ ಮೂಲಸಹಿತಮೆ
ತುಂಡರಿಸೆ ನೀನರ್ಹ ವೇದದ
ಖಂಡಸತ್ಯವ ಪಸರಿಸೆನ್ನುತ ಬೆನ್ನತಟ್ಟಿದನು ||೬೧||

ನಿಂತುಪಲದಿನ ಗುರುಸಮೀಪದೆ
ಸಂತವಿಸಿ ಹಲ ಸಂಶಯಂಗಳ
ನಂತರಂಗದ ವತ್ಸ ಸನ್ಯಾಸೀದಯಾನಂದ |
ಪಿಂತಣದ ಶಪಥವನು ತೀರಿಪ
ಚಿಂತೆಯಿಂ ಪಯಣವನುಕೊಳುವರೆ
ಸಂತನಡಿದಾವರೆಗೆ ಮಣಿದನು ವಿನಯಭಾವದಲಿ ||೬೨||

ಬಾಗಿ ಪದಗಳಿಗೆರಗಿ ಭಾವೋ
ದ್ವೇಗದಿಂ ಕಣ್ಣೀರ ಕರೆಯುತ
ಪೋಗಲಾಣತಿ ಬೇಡುತಿಹ ನಿಜಶಿಷ್ಯನಂ ಹರಸಿ |
ಆಗುರುವು ಸುಂದರಿತವೊಲ್ಸಂ
ಯೋಗಮೆಂತಹುದಂತೆಯಹುದುವಿ
ಯೋಗವುಂ ತತ್ವಜ್ಞರದಕಳರಿಂದ ಪ್ಯೆವಡವಿ ||೬೩||

ದಂಡಿಯಾಶೀರ್ವಾದಗಳ ತಾ
ಕೊಂಡು ವಿಾರತಕ್ಕೈದಿ ಯತಿಭೂ
ಮಂಡಳಾಧಿಪ ನೆಲಸೆ ಗಂಗಾರಾಮನೊಂದುದಿನ |
ತಂಡದಲಿನಡೆತಂದು ಶಂಕೆಯ
ಮಂಡಿಸುತ ಗುರುವರರಿ ಕಾಮನ
ಖಂಡನೆಂದಪರವನ ಗೆಲ್ಲುವ ಮಾರ್ಗವೇನೆಂದ ||೬೪||

ಉದಿತಸಂಶಯ ನಿಂತುಬೆಸಗೊಳೆ
ಮುದದಿ ಮುನಿವರ ಮಗನೆ ಮದನನ
ಮದವಮುರಿಯುವ ಮಾರ್ಗಪುರುಷುಪೆ ಮನನಮಾಡಿವಸು |
ಪದುಳದಿಂದೇಕಾಂತದಲಿ ನಿಜ
ಸದನಗೈವುದು ನರ್ತನಾದಿಯ
ಬದುಕ ನೋಡದೆ ತನ್ನ ತಾರಮಿಸುವುದು ಕೇಳೆಂದ ||೬೫||

ಎನಿತೆನಿತು ಕಾಮನನು ತಣಿಯಿಸೆ
ಮನುಜ ಭೌತಿಕಜಗದಿ ಯತ್ನಿಪ
ನನಿತನಿಕೆ ತಾ ಬಲಿವ ಮನ್ಮಥನದರ ಕತದಿಂದ |
ಮನದಲಿಷನಂ ಚಿಂತಿಪುದು ಸಹ
ಕೊನೆಗೆ ಪತನದ ಕಾರಣವು ನೆರೆ
ವಿಷಯಕೊಗ್ಗನು ದನುಕೆ ಬಗ್ಗುವ ಮಾರ ಕೇಳೆಂದ ||೬೬||

ಇಂತಿರೆ ಹರಿದ್ವಾರ ನಗರದಿ
ನಿಂತು ಕುಂಭೋತ್ಸವದಿ ಸೇರಿದ ಮ
ಹಂತ ಪಂಡಿತ ಗುರು ಪುರೋಹಿತರೆದೆಯ ದೇಶದಲಿ |
ಎಂತೊ ಸತ್ಯಜ್ಯೋತ್ಸ್ನೆ ಹರಡುವ
ಚಿಂತನದಿ ಮುನ್ನಡೆದು ತೊಳಗಿದ
ಸಂತ ವನಧಿ ಸುಧಾಕರಂ ತವೆಹರಸೆ ಪರಮಾತ್ಮ |೬೭||

|| ಇಂತು ಎಂಟನೆಯ ಸಂಧಿ ||



# ಒಂಬತ್ತನೆಯ ಸಂಧಿ

ಸೂಚನೆ—ದಂಡ ತಪ್ಪಿಸಿ ವಿಷವನಿತ್ತಗೆ
ಖಂಡಿಸುತ ದುರ್ನೀತಿ ಕುಲವನ
ಖಂಡ ತೇಜಂ ಪ್ಪಂದ್ವ ಸ್ವೈರಿಸಿ ತಿರುಗಿದಂತಟದಿ ॥

ಕೇಳಿರೀಪರಿ ಮುನ್ನಡೆದು ಮುನಿ
ಮೌಳಿ ಗಂಗಾತಟದಿ ತನ್ನಯ
ಪಾಳಯವ ತಾನಾ ಹರಿದ್ವಾರದಲಿ ವಿರಚಿಸಲು ।
ಮೇಳವಿಪ ಭಕ್ತಾವಳಿಯ ಸ
ಮ್ಮೇಳನದಿ ನಡೆತಂದು ತದ್ಘಟ
ಮೇಳಕೋಸುಗ ನೆರೆದ ಜನಸಮುದಾಯವನು ಕಂಡ ॥೧॥

ಕೂಜಿಸಿರೆ ಶುಕಪಿಕ ವಿಹಂಗಮ
ರಾಜಿಸಿದ ಮರಗಳಲಿ ನಗುವ ಸ
ರೋಜಗಳ ಸಿಹಿಗಂಪ ನದಿಯಿಂ ತಂದು ಬಂದವರ ।
ಪೂಜಿಸಿರೆ ಮೆಲ್ಲಲೆವ ಮಾರುತ
ಸಾಜದಿಂ ತುಂತುರಿನ ಹನಿಯುವಿ
ಭಾಜಿಸುತ ರಂಜಿಸಿದ ತಟನಿಯತಟದಿ ಯತಿನಿಂದ ॥೨॥

ಎತ್ತ ನೋಡಿದೊಡತ್ತ ಮೋದೋ
ನ್ಮತ್ತ ಮಾನವರೊತ್ತಡಂ ಕಂ
ಗತ್ತಿಪಪುತಿರೆ ಹೊತ್ತು ಬಗೆಬಗೆ ಬಿತ್ತರದ ಬೆಡಗ |
ಸುತ್ತಲುಂ ಮನವಿತ್ತು ಮೋಹದಿ
ಮುತ್ತುಪಸರಿಂ ವಿತ್ತ ಸೆಳೆಯುತ
ಬತ್ತಿಪರ ಯತಿಪ್ರೋತ್ತಮಂಗಂಗಾತಟದಿ ಕಂಡ ||೩||

ಸೋಗಿಸಿಂ ಸನ್ಯಾಸ ಧರ್ಮಿಗ
ಳಾಗಿ ಮುಂದಿಗೆ ಸರ್ವಕಾಮ
ತ್ಯಾಗಮರ್ಣಿಸಿ ವಿಧವಿಧಾಂಬರ ಸಿಂಗರಂಗಳಲಿ |
ಆಗಮಿಸಿ ಗಜವೇರಿ ಬಿರುದಿನ
ಕೂಗಿನಲಿ ದಿವ್ಯಾನ್ನ ಭೋಜನ
ಭಾಗಲುಬ್ಧಮಪಂತರೆನಿಬರೊ ಸುಳಿದರಾ ತಟದಿ ||೪||

ಕಂಡೆಡೆಯೊಳುಚ್ಛಿಷ್ಟದೆಲೆಗಳ
ಕೊಂಡಲೆಯುತಿರೆ ಪವನ ಮಕ್ಷಿಕ
ತಂಡ ಝೇಂಕರಿಸುತಿರಲೆಲ್ಲೆಡೆ ಗುರುಪದವಿಗಳನು |
ನುಂಡಿಸಪು ಕತೆಯೋದುತಿರೆ ಜನ
ಮಂಡಳಕೆ ಸ್ವಸ್ವಾರ್ಥ ಕಾಮದ
ಪಂಡಿತರೆ ಗೋಚರಿಸೆ ಯತಿವರ ಬೇಸರಂಬಡೆದ ||೫||

ಶಂಕರಾನಂದಾದಿ ನಿಜಪದ
ಕಿಂಕರರನೊಡಗೊಂಡು ಗಜಬಜ
ದಿಂಕಲಿತ ತಟದಿಂದ ನಸುದೂರದಲಿ ವಿರಚಿಸಿದ |
ಸೊಂಕಿರದ ಪರಪರ್ಣಕುಟಿಯನ
ಲಂಕರಿಸಿ ಯತಿರಾಜನತಿನಿ
ಶ್ರಂಕೆಯಿಂ ಪಾಖಂಡ ಖಂಡಿನಿ ಬಾವುಟವತೆರೆದ ||೬||

ಬಳಿಗೆಬಂದವರ ಕರೆದುವಿಗ್ರಹ
ಗಳನು ಪೂಜಿಸಬೇಡಿ ತಿಥಿಗಳ
ನಳಿದರಿಗೆ ಗೈಯದಿರಿ ನಂಬಿಕೆಯಂ ಪುರಾಣದಲಿ |
ತಳೆಯದಿರಿ ವಿಭುವವತರಿಸತಾ
ನಿಳೆಗೆ ಹಬ್ಬದಿ ನದಿಯ ಜಳದಲಿ
ಮುಳುಗಿದೊಡೆ ಕೃತಪಾಪ ತೀರದೆನುತ್ತ ಘೋಷಿಸಿದ ||೭||

ದಂಡಿಶಿಷ್ಯನಖಂಡವಾಣಿಯು
ಚಂಡಮಾರುತ ಜಡಿಯೆ ಕ್ಷುಬ್ಧಂ
ಗೊಂಡು ಪೌರಾಣಿಕ ಮತೋದಧಿ ಕಡಗಿಮೊರೆಯುತಿರೆ |
ತಂಡತಂಡದ ಗುರುಮಹಂತರ
ಪಂಡಿತರ ನೌಕೆಗಳು ತತ್ತರ
ಗೊಂಡು ಧರ್ಮವು ಮುಳುಗಿತೆಂದರುಮುಗ್ಧಮಾನವರು ||೮||

ಕುಂಭ ತೀರಿತು ಯತಿಪ ಬಾಹ್ಯಾ
ಡಂಬರವ ಖಂಡಿಸಲು ವೇದ
ಸ್ತಂಭದಿಂ ಧೃತಮಾದ ಸಾತ್ವಿಕ ಧರ್ಮಮಂಡಿಸಲು |
ತುಂಬಿದಾ ಕೂಟದಲಿ ಯತ್ನಿಸಿ
ಬೆಂಬಿಡರು ಹಿಂದುಗಳು ಹೊರಗಣ
ಡಂಭಗಳನೆಂಬುದನು ಕಂಡತಿನೊಂದ ಚಿತ್ತದಲಿ ||೯||

ಅನಿತು ಲಕ್ಷಂಗಳಲಿ ಸತ್ಯವ
ನೆನೆದು ವೇದೋದ್ಧಾರಕೋಸುಗ
ತನಗೆನೆರವಹನೊರ್ವನುಂ ಸಮ ಕಾಣದಿರೆ ಯತಿಪ |
ಘನ ನಿರಾಶೆಯಲೊರ್ವನೇ ವರಿ
ಜನರ ವರ್ಜಿಸಿ ಮೌನದಿಂ ಮುಂ
ಜಿನ ಕಿರೀಟವ ತಳೆದ ಹಿಮವದ್ಗಿರಿಯಕಡೆ ನಡೆದ ||೧೦||

ಹಿಂದೆ ಮುಂದೆಡಬಲಕೆ ಗಗನವ
ನಂದದಿಂ ಚುಂಬಿಸುವ ಹಿಮಮುಕು
ಟಂದಳೆದ ಗಿರಿನಿಕರ ಕೆಳಗಡೆ ತಗ್ಗಿನಲಿ ನೋಡೆ |
ಅಂದು ನೆಲವೆಣ್ಣುಟ್ಟ ಹಸುರಿನ
ದೊಂದು ಸೀರೆಯ ರಜತ ರೇಖೆಗ
ಳೆಂದೆನಿಪ ತಿಳಿಜಲದ ಹೊಳೆಗಳು ಹರಿದು ಮಿಂಚುತಿವೆ ||೧೧||

ಅಲ್ಲಿ ಕೆಳಗಡೆ ರವಿಯ ಕಿರಣಗ
ಳಲ್ಲಿ ಮಿಂಚುತ ಕಂಗೊಳಿಸುತಿದೆ
ಫುಲ್ಲವಣೆಯಿಂ ಸರಸಿಯೊಂದದರಂಚಿನಲಿ ಬೆಳೆದ |
ಪಲ್ಲವಿತ ಪುಷ್ಪಿತದ ಮರಗಿಡ
ದಲ್ಲಿ ಬಕಶುಕಪಿಕ ಮರಾಳಗ
ಳುಲ್ಲಸದ ಪಲ್ಲವಿಯ ಹಾಡುತ ಹಾರಿ ನಲಿಯುತಿವೆ ||೧೨||

ಮತ್ತೆ ನೋಡಲು ಗಂಗೆ ಗಿರಿಗಳ
ನೆತ್ತಿಯಿಂ ಕೆಳಗುರುಳಿ ಸೇವೆಯ
ಮತ್ತಿನಿಂ ಭಾರತದ ದೆಸೆಪಿಡಿದೋಡುತಿಹಳಲ್ಲಿ |
ಹೊತ್ತು ಸರಸಿಯ ಕಮಲಸಂಕುಲ
ಪಿತ್ತ ಪಿಹಿಗಂಪುಗಳ ಮಾರುತ
ಮತ್ತನಾಗಲೆದಿಹನು ದೆಸೆದೆಸೆಗಂದು ಮೆಲಮೆಲನೆ ||೧೩||

ಎಲ್ಲವಿದೆ ಮೊದಲಂತೆಯಾದರ
ದೆಲ್ಲಿಪೋದುದು ನಮ್ಮ ಋಷಿಗಳ
ಸೊಲ್ಲು ಸತ್ಯಂ ಮಾತ್ರ ಕಾಣಿಸದಾಯ್ತು ದೇಶದಲಿ |
ಎಲ್ಲಿ ಚೇತನಪೂಜೆ ವೇದಗ
ಳೆಲ್ಲಿ ಸಮತಾ ಪ್ರೇಮಭಾವಗ
ಳೆಲ್ಲೆನುತ ಗಿರಿಗಡರಿ ನಿಂತಿಹ ಯತಿಪ ಚಿಂತಿಸಿದ ||೧೪||

ಬೂದಿಬಳೆದಿಹರುಂಟು ಕಾವಿಯ
ಸಾಧುಸನ್ಯಾಸಿಗಳು ಬೆಡಗಿನ
ಬೋಧಕರುಹಲರುಂಟು ನೀಳದ ಜಟೆಯಲಂಕೃತಿಯ |
ಸಾಧಕರುಹಲರುಂಟು ಶಾಸ್ತ್ರವ
ನೋದುವರು ಸಹವುಂಟು ಕಾಣಿಸ
ರಾದರೀಕಡೆ ಜನತೆಗೋಸುಗ ನೋಯ್ವ ಮಾನವರು ||೧೫||

ಉನ್ನತಾಸನವೇರಿ ಧರ್ಮದ
ಸನ್ನುತಿಯ ಘೋಷಿಸುವ ಸೌಖ್ಯದ
ಮನ್ನಣೆಯ ಚಿತ್ತದ ಮಹಂತರುಬುಧರು ಹಲರುಂಟು |
ಮುನ್ನಿನಾ ವೇಷವನು ಭೂಷಣ
ವನ್ನುಮೆರೆಸುವರುಂಟು ದೀನರ
ಬನ್ನಹರಿಸುವ ಬಗೆಯ ಗುರುಜನರತ್ತ ಕಾಣಿಸರು ||೧೬||

ಇನಿತುಲಕ್ಷದಿ ನೆರೆದ ಧಾರ್ಮಿಕ
ಜನರಲೊಬ್ಬನು ಕೂಡ ವಿಭುವಿನ
ನೆನಹಿನೊಂದಿಗೆ ದೀನಭಕ್ತಿಯ ತೋರುವವನಿಲ್ಲ |
ಎನಿತೊ ಹುಡುಕಿದೆನಕಟ! ಸತ್ಯವ
ನನುವಿನಿಂ ಪಸರಿಸಲು ನೆರವಹ
ಮನುಜನೊಬ್ಬನ ಕಾಣೆನೆನ್ನುತ ಯತಿಪ ಮನನೊಂದ ||೧೭||

ಚಿಂತಿಸೀಪರಿ ಮಾನವರ ಕುಲ
ವಂತಿರುಗಿ ಸತ್ಪಥಕೆ ತರುವೆನೆ
ಪಿಂತಣದ ಸಾಂಗೈದ ತಪಕಳಪುಲ್ಲವದರಿಂದ ।
ನಿಂತು ನಾಸವಧೂತದಶೆಯೊಳ
ಗಂತರಂಗದ ತಪದ ವರ್ಧನ
ದಿಂ ತಳೆವೆ ಹೊಸ ಶಕ್ತಿಯೆನ್ನುತ ನಿಶ್ಚಯಂಗೈದ ||೧೮||

ವಸ್ತ್ರಚಯಪರಿ ತನಗೆ ಸಲ್ಲದು
ವಿಸ್ತರದ ಸನ್ಯಾಸ ಸಿರ್ಮಗವು
ಮಸ್ತಕನೆ ಸರ್ವೋಪಕಾರದ ದಿವ್ಯಯಜ್ಞದಲಿ ।
ನಿಸ್ತರಿಪನವರಿಂದ ನಾನು ಸ
ಮಸ್ತವಂ ವರ್ಜಿಸುವೆನೆಂದಾ
ನ್ಯಸ್ತಕಾಮನು ಚಿಂತಿಸಿಳಿದೈತಂದ ಗಿರಿಯಿಂದ ||೧೯||

ದಿವ್ಯಕಾಷಾಯಾಂಬರವ ಸ
ತ್ಯವ್ಯಸನಿ ಕಿತ್ತೊಗೆದು ಗಂಗೆಗೆ
ಭವ್ಯ ದೇಹವನೊಂದೆ ಕೌಪೀನದಲಿ ಸಿಂಗರಿಸಿ ।
ದಿವ್ಯ ದಂಡೀದೇವಪದದೆಡೆ
ನವ್ಯಗ್ರಂಥಂಗಳನು ಕಳುಹಿಸಿ
ಸುವ್ಯವಸ್ಥಿತನಾಗಿ ಹಲದಿನ ನಿಂತ ಮೌನದಲಿ ||೨೦||

ಒಂದುದಿನ ಬುಧನೊಬ್ಬ ಕುಟಿಯೆಡೆ
ಬಂದು ಮರಕಿಂತದರ ಫಲ ಹೆ
ಚ್ಚೆಂದೊರೆದು ಭಾಗವತ ವೇದಕೆ ಮಿಗಿಲೆನುತ ಪೇಳೆ |
ನಿಂದ ಮೌನವ ತೊಡೆದು ಯತಿವರ
ನಂದನನು ಖಂಡಿಸಿದನುದ್ವೆಗ
ದಿಂದ ಮೌನಕ್ಕಿಂತ ಸತ್ಯವು ಶ್ರೇಷ್ಠವೆಂದನುತ ||೨೧||

ಮೌನವಂ ತ್ಯಜಿಸಿಂತು ನಮ್ಯತ
ಪೋಸಿಥಿಯು ಸುರಸದಿಯ ತಟವಲೆ
ನಾಸು ತಿರುಗುತ ಹಲವುಪರ್ಷದ ತನಕ ವೇದಗಳ |
ಜ್ಞಾನವಂ ನೀಡುತ್ತ ವಿದ್ಯಾ
ದಾನ ಮಾಡುತ ಸೇವೆಸಲ್ಲಿಪ
ದೀನನರಕುಲಕೆನುತ ಗಷಮುಕ್ತೇಶ್ವರಕೆ ಬಂದ ||೨೨||

ಸಾಮಿಯಂಬಾದತ್ತನೆಂಬವ
ನಾಮಹಾಮುನಿಯೊಡನೆ ವಿಗ್ರಹ
ವ್ಯವಯೊರೆಯಲನೂಪಶಹರೊಳು ಮುನಿಪ ಕೈಲಾಸ |
ಸೋಮಧರನಾವಾಸ ವಿಷ್ಣುವಿ
ನಾಮನೆಯೊ ವೈಕುಂಠವಿಂತಿರೆ
ಸ್ವಾಮಿ! ವಿಗ್ರಹಪೂಜೆ ದೇಗುಲದೊಳಗದೇಕೆಂದ ||೨೩||

ಅದುವೆ ನಗರದಿ ವಾಸಿಸಿದ ಸೈ
ಯದಮುಹಮ್ಮದನೆಂಬ ಸಜ್ಜನ
ವಿದನು ನಾಡಿನ ಖಂಡಕೊಡೆಯಂ ಯತಿಯ ಭಕ್ತಿಯಲಿ |
ಮುದವನಾಂತವ ಸತತ ಮುನಿಯಿಂ
ದುವನೆ ಧರಿಪನು ಫಾರಸೀನುಡಿ
ಗುದಿತದಿನಸಮಾಣೆಯೆನಿಸಿ ಪ್ರೊಳೆದಂ ಧರ್ಮನಿಷ್ಠೆಯಲಿ ||೨೪||

ಅಂದು ವಿಗ್ರಹಪೂಜೆ ದಶರಥ
ನಂದನನ ಲೀಲೋತ್ಸವಂ ಚೆ
ಲ್ವಿಂದ ನಡೆಸಿದ ಭಾಗವತಸಪ್ತಾಹ ವೊದಲೆನಿಪ |
ನಿಂದ ಮತಸೀತಿಗಳನು ದಯಾ
ನಂದ ಖಂಡಿಸೆ ಮುಗ್ಧವಿಬುಧ
ವೃಂದಮುನಿಪದಕೆರಡಬಗೆದುಸು ತುಚ್ಛಯುಕ್ತಿಯಲಿ ||೨೫||

ಒಂದುದಿನ ಮುನಿಪಾಲ ಕುಳ್ಳಿರೆ
ಬಂದುಪಾರ್ವನದೊರ್ವ ಭಕ್ತಿಯ
ನಂದಗೊಳಿಸಡಿಗೆರಗಿ ವಿರಚಿಸಿ ವಿನಯವೈಖರಿಯ |
ತಂದ ವೀಳೆಯದೆಲೆಯಸುತ್ತನು
ಮುಂದಿರಿಸಿ ಗುರುದೇವರಿದಕೊಳಿ
ರೆಂದು ಬೇಡಲು ಸಹಜಮಾಗಿಯೆ ಯತಿಪನದ ಕೊಂಡ ||೨೬||

ತಿಂದೊಡನೆ ಯತಿಪಂಗೆ ವಿಷವಿಹು
ದೆಂದು ತಿಳಿದುದು ತಂದಪಾರ್ಶ್ವಸ
ನಿಂದಿಸದೆ ಸುಖಿಸೆಂದು ಹರಸುತ ದೇವನದಿಗಿಳಿದು ।
ನಿಂದು ನ್ಯೋಳೀಬಸ್ತಿಗಳ ಗೈ
ದಂದು ವಿಷಹೊರವಡಿಸಿ ಭಕ್ತ
ವೃಂದಕೀವಿಷಯೋಗವಾರ್ತೆಯಬಣ್ಣಿಸದೆ ಕುಳಿತ ॥೨೭॥

ಪರಮಹಂಸಗೆ ವಿಷವನಿತ್ತಿಹ
ದುರುಳನಾನಡೆಯೆಂತೊ ನಿಜಕಿವಿ
ದೆರೆಯನುಗೆ ಸ್ವೈಯದ ಮಹಮ್ಮದ ಸಿಡಿದು ಕಿಡಿವೋಗಿ ।
ಭರದಿಹಿಡಿಸಾ ಮುಗ್ಧವಿಪ್ರನ
ಸೆರೆಗಿಡಿಸಿ ಕಟ್ಟುಗ್ರದಂಡವ
ತೆರೆಸಿ ಶಾಂತಿಯವೊಗವೆಸೂಸಲು ಗುರುಪದಕೆ ಬಂದ ॥೨೮॥

ಆದರೇನಾಶ್ಚರ್ಯ! ವಂದಿತ
ಪಾದನನುದಿನದಂತೆ ಮಣಿದರೆ
ಮೈದಡವಿನಸುನಗೆಯ ಚೆಲ್ಲುತ ಸಂತವಿಸಲಿಲ್ಲ ।
ಬೋಧನಂಗುಡಲಿಲ್ಲ ಮೌನವ
ಸಾಧಿಸಾಮುನಿಪಾಲ ಕುಳ್ಳಿರ
ಲಾದುದೇನಕಟೆಂದು ಸ್ವೈಯದನಿಂದು ಚಿಂತಿಸಿದ ॥೨೯॥

ನಿಂದು ನಸುಹೊತ್ತಿಂತು ನಮ್ರತೆ
ಯಿಂದ ಸ್ವಯದ ಬಳಿಕ ಪೂಜ್ಯರಿ
ಗಿಂದು ನಮ್ಮಲಿ ಕೋಪವೇತಕೊ ಪೇಳಿರೆಂದಡಿಗೆ |
ವಂದಿಸಲು ಕರಣಾಂಬುಧಿ ದಯಾ
ನಂದನತಿಶಯಶೋಕದಿಂ ಮನ
ನೊಂದು ಗದ್ಗದಮುಕ್ಕಲೀಪರಿ ನುಡಿದನಾತಂಗೆ ||೩೦||

ನಮ್ಮ ಕಾರಣದಿಂದಲೊಬ್ಬನು
ನಿಮ್ಮ ಸೆರೆಯೊಳಗಿರ್ಪನೆಂಬುದ
ನೊಮ್ಮೆದಲಿ ಕೇಳಿಹೆವು ಬದ್ಧರ ಬಿಡಿಪ ಬಗೆಯಿಂದ |
ತಮ್ಮ ! ನಾವೀಮುಹಿಗೆ ಬಂದೆವು
ನೆಮ್ಮುಯಾರನುಪಾವು ಬಂಧಿಪ
ಹೆಮ್ಮೆಯಿಂದೀ ಜಗಕೆ ಬಂದವರಲ್ಲ ಕೇಳೆಂದ ||೩೧||

ಉದಿತಗದ್ಗದದಿಂದಲಿನಿತನೆ
ಸದಯ ಯತಿವರಪೇಳಿ ನೆರೆ ಮೌ
ನದಲಿ ಕುಳಿತನು ಮಂದಿ ದೈವೀಪುರುಷನಿವನೆಂದು |
ಮುದದ ಬಾಷ್ಪವ ಕರೆದರಾ ಸೈ
ಯದನು ರೋಮಾಂಚದಲಿ ವಂದಿಸಿ
ಪದದಿ ಮುನಿಯೆಂದಂತೆ ಬಿಡಿಸಿದ ಬದ್ಧಬ್ರಾಹ್ಮಣನ ||೩೨||

ಸಲ್ಲಲಿತ ಧರ್ಮವನು ಯತಿ ಭೂ
ವಲ್ಲಭಂ ಸಲ್ಲಿಸಿರೆ ಹೀರಾ
ವಲ್ಲಭಂ ದಾರ್ಶನಿಕವೀರನು ವೇದವಿದ್ವರನು ।
ಅಲ್ಲಿಗೈತಂದೆರಡು ಸಾಸಿರ
ರುಲ್ಲಸದಿ ಸೇರ್ದಿರಲು ಯತಿವರ
ರಲ್ಲಿ ವಾದಿಪೆನೆಂದು ಕುಳಿತನು ಕರ್ಣವಾಸದಲಿ ||೩೩||

ವೀರ ಪಂಡಿತಬಳಿಕ ನಾನೀ
ಮೂರುತಿಗಳಂ ಯತಿವರರ ಕೈ
ಯಾರ ಪೂಜೆಯ ಮಾಡಿಸಿಯೆ ಮೇಲೇಳ್ವೆನೆಂದೆನುತ ।
ಪೇರಿಸುತ ಮೂರ್ತಿಗಳ ವಾದಿಸು
ತಾರನೆಯದಿನ ಸೋಲನೊಪ್ಪುತ
ಪಾರವಿದ್ಯರು ಯತಿಗಳೆಂಪವನೆಸದ ಗಂಗೆಯಲಿ |.೩೪||

ಮೆರೆವ ಗಂಗಾ ತೀರದಲಿ ಯತಿ
ವರನು ಸಂಚರಿಪಲ್ಲಿ ಪುಷ್ಯಂ
ಬರಲು ಶೀತಳಪವನ ಸಂತತಸುಯ್ದು ಬೀಸಿದನು ।
ಮಿರುಗುತಿರ್ದುದು ಹುಲ್ಲುಗಳ ಮೇ
ಲ್ಸುರಿದ ಹಿಮಕಣರಾಜಿ ಹೊಲಗಳ
ಸ್ಥಿರವಮಂಜಿನಪರದೆ ಕವಿದುದು ಕಂಗೆ ಕಾಂಬನಕ ||೩೫||

ಕೆಲಬಲಂಗಳ ಹಳ್ಳಗಳ ತಿಳಿ
ಸಲಿಲಪೆತ್ತುದು ಪಶುವಿಹಂಗಮ
ಚಲಿಸೆ ತತ್ತರಿಸಿದುದು ಮಾಘದಿ ಕೊರೆವ ಕುಳಿರಿನಿತು ।
ಬಲಿದೊಡಂ ಕೌಪೀನಮಾತ್ರಪ
ನೊಲಿದು ಧರಿಸುತ ಯತಿಪ ತಂಪನು
ಮಲೆತಮುಳಲಿನ ತಟನಿತಟದಲಿ ಕಳೆದ ರಾತ್ರಿಗಳ ॥೩೬॥

ಸಟೆದು ತನ್ನಂಗಗಳು ಪಲ್ಕಟ
ಕಟಪ ಚಳಿಯಲಿ ರಾತ್ರಿಯಲಿ ನದಿ
ತಟದ ಮುಳಲೊಳ್ಧ್ಯಾನದಲಿ ಕುಳ್ಳಿರ್ದ ಯತಿವರನ ।
ಸ್ಫುಟಿತಮೂರ್ತಿಯ ಕಂಡವರ್ತು
ಪ್ಪಟದ ಬಟ್ಟೆಯ ಹೊದಿಪರದ ಪ
ರ್‍ಯಟನಶೀಲನು ದೂರಕೆಸೆವಂ ಧ್ಯಾನತೀರ್‍ದೊಡನೆ ॥೩೭॥

ಒಂದುದಿನವಾ ಮಾಘಮಾಸದಿ
ಸಂದ ಪ್ರಾತಃಕಾಲಮುದುವರೆ
ಗಂ ದಿನಪ ಮೂಡಿಲ್ಲ ಕಂಗಳ ನೋಟವನೆ ತಡೆದು ।
ನಿಂದಿಹುದು ಹಿಮರಾಸಿ ಸುಯ್ಯನೆ
ಸಂದು ಸುಳಿವತಿಶೀತಮಾರುತ
ನೊಂದೆಸಮ ಚಚ್ಚಿದನು ಗಂಗಾನದಿಯ ತೀರದಲಿ ॥೩೮॥

ಎಂದಿನೊಲಿ ಕೌಪೀನಮೊಂದನೆ
ಚಂದದಿಂದಳವಡಿಸಿ ಜಗದಾ
ನಂದ ಯತಿವರ ನಿಶ್ಚಳತೆಯಿಂ ಕುಳಿತು ರಂಜಿಸಿರೆ |
ಮಂದಿ ತುಪ್ಪಟದರಿವೆಗಳ ಧರಿ
ಸಂದು ಯತಿಭೂಪರನ ದರ್ಶನ
ಕೆಂದು ಬಂದಾಬೆಡಗನೀಕ್ಷಿಸಿ ವಂದಿಸಿದರಡಿಗೆ ||೩೯||

ದಂತಗಳು ಕಟಕಟಸುತಿರೆ ಮಾ
ತುಂ ತೊಡಳೆ ಗೋಪಾಲಸಿಂಹನು
ಸಂತವರ! ಬೆಚ್ಚನೆಯ ವಸ್ತ್ರವನೆನಿತನೋ ಧರಿಸಿ |
ನಿಂತೊಡಂ ನಮ್ಮಂಗ ಕಾಷ್ಠಗ
ಳಂತೆ ಸಟೆಯುತ್ತಿಹುದು ದೇವರ
ದೆಂತು ಕೋವಣ ಧರಿಸಿ ನಿಶ್ಚಳರಹಿರಿಗಡಮೆಂದ ||೪೦||

ಎನಲು ಯತಿವರ ಬ್ರಹ್ಮಚರ್ಯಂ
ವಿನುತಯೋಗಾಭ್ಯಾಸವೆರಡುಂ
ಮನುಜನೊಳಗೀದ್ವಂದ್ವಸಹನದ ಶಕ್ತಿತಹುದೆನಲು |
ನನಗಿದರಮೇಲೆಂತು ಭರವಸೆ
ಜನಿಪುದೋ ಯತಿದೇವ ಕರುಣಿಸಿ
ರೆನುತಲಾಗೋಪಾಲಸಿಂಹನು ಮರಳಿ ಬೆಸಗೊಂಡ ||೪೧||

ಭಕ್ತನಿಂತೆಂದೊಡನೆ ನಸುನಗು
ತುಕ್ತಸತ್ಯವ ತೋರಿಸಲ್ಕು
ವ್ಯಕ್ತನಾಗುತ ಹೆಬ್ಬೆರಳುಗಳ ಮುಂಡಿಗಳಮೇಲೆ |
ಶಕ್ತಿಯಿಂದೊತ್ತಲದೆ ಕಾಮುಪಿ
ರಕ್ತನಂಗಾಂಗಗಳು ತತ್ಕ್ಷಣ
ರಕ್ತವರ್ಣಕೆ ತಿರುಗಿ ಹರಿದುದು ಜೆಮುರ ಕೋಡಿಗಳು ||೪೨||

ಒಂದುದಿನ ನಡುರಾತ್ರಿ ತುಂಬಿದ
ಚೆಂದಿರಂ ಬೆಳದಿಂಗಳಿನ ಹಾ
ಸಂ ದಡದಿ ಬಿತ್ತರಿಸಿ ತಟನಿಯು ಬಿಳಿಮಳಲ ನೆಲವ |
ಅಂದಗೊಳಿಸಿಪ ಮರುತ ಮರಗಳ
ಸಂದಿನಲಿ ತೂರುತ್ತ ಹೂಗಳ
ಗಂಧವಂ ವಿತರಿಸುತ ಸುಳಿದಿಪ ತಾನೆತಾನಾಗಿ ||೪೩||

ನೀಲನಭದಲ್ಲಲ್ಲಿ ಹತ್ತಿಯು
ಹೋಲುತಿಹ ತಿಳಿಬಿಳಿಯ ಮೋಡದ
ಮಾಲೆತೇಲುತ್ತಲಿದೆ ಮಿಣುಕುತ್ತಲಿವೆ ತಾರೆಗಳು |
ಮೇಲೆ ನೊರೆಯಿರೆ ಕುಣಿಯುಲಲೆಗಳ
ಜಾಲ ಕಲಕಲನಿನದಗಾಯುನ
ಲೋಲೆ ಗಂಗಾಬಾಲೆ ಹರಿದಳು ಲೀಲೆಗಳನೆಸಗಿ ||೪೪||

ಒಲಿದು ಗಂಗಾಬಾಲೆ ನಿಟ್ಟಿಸೆ
ಜಲಧರಂಗಳಲಡಗುವಂ ಶಶಿ
ಚೆಲುವ ತಟನೀಹೃದಯದಲಿ ನಿಜಭವ್ಯರೂಪವನು ।
ನಲಿದು ಶಶಿಧರ ನೋಡೆ ಬಲುಮುನಿ
ಸಲಿಯನುಗಿವಳು ಗಂಗೆ ಪ್ರಣಯದ
ಕಲಹವಿದ ನಿಟ್ಟಿಸುತ ನಗುವುವು ಮಿಣುಕಿ ತಾರೆಗಳು ॥೪೫॥

ಈ ಯುಗಳ ಕಲಹದ ರಹಸ್ಯವ
ವಾಯು ತಿಳಿಯದೆ ಶಶಿಯ ಕವಿದಾ
ತೋಯದಂಗಳ ತೂರ್ಪೆನೆನುತ್ತ ಬೀಸೆ ಬಿರುಸಿಂದ ।
ಹಾಯಿವಳು ಮುನಿಸಲಿಯ ಗಂಗೆಯು
ನೋಯುತನಿಲಂ ಹುದುಗೆ ರಜನೀ
ರಾಯನೆಳೆದನು ಮುಖದಮೇಲಕೆ ಮರಳಿ ಮೇಘವನು ॥೪೬॥

ನೀರವತೆ ಹರಡಿಹುದು ಕೊರೆಯುವ
ನೀರ ಘಾತಕೆ ಕುಸಿದು ದೊಪ್ಪನೆ
ಜಾರಿ ಬೀಳುವ ಕೂಲಪಾತ ನಿನಾದವೊಂದುಳಿಮು ।
ಬೇರೆ ಸಪ್ಪುಳವಿಲ್ಲ ಯತಿ ಗಂ
ಭೀರಭಾವದಿ ತಿಳಿಯಬೆಳಕಿನ
ತೀರದಲಿ ವುಟವಿಟ್ಟ ಚಿನ್ನದ ಬೊಂಬೆಯಂತೆಸೆದ ॥೪೭॥

ಈ ತೆರದಿ ನಶುರಾತ್ರಿಯಲಿ ತಟ
ನೀತಟದ ಬೆಳದಿಂಗಳಿಗೆ ಮನ
ಸೋತು ಸುತ್ತಣ ಸೊಬಗಸಂಪದ ಸಂಕುಲದ ಸಹಿತ |
ತಾ ತಿರೆಯ ಮನಕದಿವ ರಚನೆಯ
ನಾ ತಪೋಧನ ನಿಟ್ಟಿಸುತ ಪರ
ಮಾತುಮನ ನೆನೆಯುತ್ತ ಭಕ್ತ್ಯುತ್ಸವದಿ ವ್ಯೆಮರೆವ ||೪೮||

ಅಂದು ರಾತ್ರಿಯೆ ಜೇಜೆಗೋಸುಗ
ವೆಂದು ತನ್ನಯ ಮಿತ್ರನೊಬ್ಬನ
ನೊಂದುಗೂಡಿ ಬದಾಯು ಜಿಲ್ಲಾಧೀರ ತೀರದಲಿ |
ಸಂದುಸುಳಿಯುತ್ತಿರಲು ತುಂಬಿದ
ಚಂದಿರನ ತಿಳಿಬೆಳಕ ಹಾಲೊಳು
ಮಿಂದು ಮೆರೆಯುವ ಭವ್ಯಕಾಯ ಯತೀಶ ಕಾಣಿಸಿದ ||೪೯||

ವಿಜನ ತಟನೀ ತಟದಿ ಮಧ್ಯದ
ರಜನಿಯಲಿ ಬೆಳದಿಂಗಳಿಂ ಸಂ
ಭ್ರಜಿಪ ಮಳಲಿನಮೇಲೆ ದ್ಯುತಿಮತ್ಸ್ವರ್ಣದಾ ಪ್ರತಿಮೆ |
ರಜತಪೀಠದಮೇಲೆ ಮೆರೆವಂ
ತಜಿತಕಾಂತಿಗಳಿಂದ ಮುನಿವರ
ರಜನಿಕಾಂತನ ಹಂಗಿಸುತ್ತಿರೆ ನಿಂದರಾ ಜನವು ||೫೦||

ಪಡೆದ ಧ್ಯಾನಾವಸ್ಥೆ ಹರಿದುದು
ಮಿಡಿಯುತಾನಂದಾಶ್ರುಗಳ ಮುರಿ
ದೊಡಲ ಯತಿಭೂಕಾಂತ ನೇತ್ರದ ಕಾಂತಿಗಳಸ್ರವಿಸಿ |
ಕುಡಿನಗೆಯ ಸೂಸುತ್ತ ನಿಂದರ
ಕಡೆಗೆ ಸಿಟ್ಟಿಸೆ ಜಿಲ್ಲೆಯಧಿಪತಿ
ಯುಡಿಗೆ ಮಾಣದನು ಮುನಿಪ ಪರಿಸಿದನವನ ಪ್ಯದಪಪಿ ||೫೧||

ತಿಳಿಪಿದಂ ಧರ್ಮವನು ಮುನಿಪತಿ
ಬಳಿಕ ಜಿಲ್ಲಾಧೀಶ ಭಗವನ್ !
ತಳೆದೊಡಂ ತುಪ್ಪಟದ ವಸ್ತ್ರವ ನಡುಗುತಿಹೆವಾವು |
ಪೊಳೆಯು ಮಳಲಿನ ಮೇಲೆ ಮಾಘದ
ಚಳಿಯ ನಡುರಾತ್ರಿಯಲಿ ಬೆತ್ತಲೆ
ಕುಳಿತೆ ಕಂಪಿಸದಿಹಿರದೆಂತೋ ದೇವಗಡಮೆಂದ ||೫೨||

ಎಂದ ಜಿಲ್ಲಾಧೀಶ್ವರಂಗನು
ಸಂದಲುತ್ತರವೀವ ಮುನ್ನವೆ
ಸಿಂದ ನಿಷ್ಠುರ ಮಿತ್ರ ನರನಿವ ಕೊಬ್ಬಿ ಬೆಳೆದಿಹನು |
ತಿಂದು ತೇಗಲು ಮೂಥರನುದಿನ
ತಂದುಕೊಡುವರು ಬಗೆಬಗೆಯ ಹಲ
ವೊಂದು ಭಕ್ಷ್ಯವನಿವಗೆ ಗ್ಯೆದಪುದೇನು ಕುಳಿರಿಂದ ||೫೪||

ಗಹಗಹಿಸಿ ನಗುತವಕೆ ಯತಿಪರ
ನಹಹ! ವಾಸ್ತವಮಲ್ತೆ ಭಿಕ್ಷುಕ
ರಹ ನಮಗೆ ಹುಳಿಸಾರು ರೊಟ್ಟಿಗಳಿವನು ಬಿಟ್ಟಲ್ಲಿ |
ಇಹ ಸುಭಕ್ಷ್ಯಗಳೇನೊ! ಸಿಕ್ಕಲು
ಬಹಳ ಹೆಚ್ಚೆನೆ ಹಾಲ ಕುಡಿವೆವು
ಮಹಿತಭೋಜನ ನಿಮ್ಮದಲ್ಲವೆ ಕೇಳಿನೀವೆಂದ ||೫೪||

ತಟ್ಟೆತಟ್ಟೆಯು ತುಂಬ ಪೇರಿಸು
ತಿಟ್ಟ ಮಾಂಸಸುಭಕ್ಷ್ಯವಲ್ಲದೆ
ಮೊಟ್ಟೆಯೊಡಹಲವಾರು ಪೌಷ್ಟಿಕ ಭೋಜನಂಗಳನು |
ಮುಟ್ಟಿಗೈವಿರಿ ಮದ್ಯವಂ ಸಹ
ಕುಟ್ಟುವಿರಿ! ಬಳಿಬನ್ನಿ ಕುಳ್ಳಿರಿ
ಬಟ್ಟೆಬಿಚ್ಚಿರಿ ತಿಂದೆ ಕುಳಿರಂ ಸಹಿಸಿ ನೀವೆಂದ ||೫೫||

ಉದಿಸನಾಚಿಕೆ ಕೆಂಪಗಾದುದು
ವದನ ತನ್ನರ ಬಿಟ್ಟು ದೌಷ್ಟ್ಯವ
ಸದಯರೇ! ತಾವೆಂತು ಚಳಿಯನು ಸೈರಿಸುವಿರೆನಲು |
ವದನ ಮುಚ್ಚದೊಡಂ ಕುಳಿರುಸಲು
ದದಕೆ ಸೈರಣೆಯುದಿಪುದಭ್ಯಾ
ಸದೊಳಗೆಂದನು ಮುನಿಪನವದಿರು ಮುನ್ನಡೆದರೆರಗಿ ||೫೬||

ಈ ತೆರದಿ ಪಲವಿಧದಿ ದೇವನ
ದೀತಟದಿ ಸಂಚರಿಸಿ ತಾನವ
ಧೂತ ದಶೆಯಲಿ ಸತ್ಯಶೀತಳ ಕಿರಣಗಳ ಸೂಸಿ |
ಕಾತರ ಹೃದಯೋದಧಿಯ ಹರಿ
ಸಾತುಮಾಂಬರದಲ್ಲಿ ತೊಳಗಿದ
ನಾ ತಪಸ್ಸಂಪದ ಸುಧಾಕರ ಹರಸೆ ಪರಮಾತ್ಮ ||೫೭||

|| ಇಂತು ಒಂಬತ್ತನೆಯ ಸಂಧಿ ||



# ಹತ್ತನೆಯ ಸಂಧಿ

**ಸೂಚನೆ—ದ್ವೈತ ಬೋಧಿಸಿ ಮದದ ಮಲ್ಲನ**
**ತಾ ತವಿಸಿ ಕೊಲೆಬಂದ ಕ್ಷತ್ರಿಯ**
**ಪಾತಕಿಯನುಂಕ್ಷಮಿಸಿ ಸುಳಿದನು ಯತಿ ದಯಾನಂದ ॥**

ಬಳಿಕ ತರಳರಿ ಯತಿಪ ತತ್ಪುರ
ಮುಳಿದು ಗಂಗಾತಟದ ಚಾಸೀ
ಪೊಳಲಿಗೈತಂದೊಂದು ಕುಟಿಯಲಿ ನಿಂದು ಸತ್ಯವನು ।
ಬೆಳಗಿಸಿ ಪುರಾಣೋಕ್ತಿ ವೇದಂ
ಗಳಿಗೆ ವಿಪರೀತಮಿರೆ ಸಾಹಸಿ
ಗಳದ ಬಿಡುವುದೆ ಧರ್ಮಲಕ್ಷಣವೆಂದು ಬೋಧಿಸಿದ ॥೧॥

ಆ ದಿನಂಗಳಲಾ ಯತಿಪ ಮೂ
ರ್ತ್ಯಾದರಂ ವೇದೋಕ್ತವಲ್ಲವು
ಭೇದನರಕುಲಕಿಲ್ಲ ವರ್ಣಂ ಜಾತಿ ತಾನಲ್ಲ ।
ವೇದ ವೇತ್ತ್ರಂವ್ಯಾಸ ಭಾಗವ
ತಾದಿಗಳ ಬರೆದಿಲ್ಲ ಮೇಣ್ಸ್ಮೃತ
ರಾದವರಿಗಾ ಶ್ರಾದ್ಧ ಸಲ್ಲದೆನುತ್ತ ಬೋಧಿಸಿದ ॥೨॥

ವೀರಮಲ್ಲನದೊರ್ವ ತಾನೋಂ
ಕಾರದಾಸನು ಬಂದು ತೀರಕೆ
ಭೂರಿ ಭಕ್ತಿಯ ಭಾವದಿಂ ಭವಭಯವಿಭಂಜನನ |
ತೋರಕಾಯವ ಕಂಡವನ ಪಾ
ದಾರವಿಂದವನೊತ್ತಿ ಗುರು ಸೇ
ವಾರತಂ ತಾನಾಗೆ ಬಗೆದನು ಬಿಗಿದ ಬಗೆಯಿಂದ ||೩||

ಬಂದ ಭಕ್ತನು ಬೇಡಲು ದಯಾ
ನಂದನೊಪ್ಪಿದ ಕಾಲನೊತ್ತುತ
ಲಂದು ಮಲ್ಲನು ಮೀನಖಂಡವನೊತ್ತೆ ಕೈಯಿಡಲು |
ಅಂದಲೊಲ್ಲದು ಒಡಿತದಲಿ ಕ
ಲ್ಲಂದಮಿಹಖಂಡಗಳು ಬೆಮರಿಡ
ಲಂದು ತನ್ನಂಗಗಳು ಸುಯ್ಯುತ ನಿಂದನಾ ಮಲ್ಲ ||೪||

ಮುಂದಿನಾನೇ ಬ್ರಹ್ಮಜಗ ಸು
ಳ್ಳಿಂದು ಸಾಪನ್ನತದ ಪಾತಕ
ವೊಂದಗಳಿಸುವರೆಂದು ಯತಿವರ ನುಡಿಯಲೊಂದುದಿನ |
ಬಂದು ಮಣಿದಾಛತ್ರಸಿಂಹನು
ನಿಂದು ವಾದದಲೆಲ್ಲ ಪಂಡಿತ
ರಂದದಲಿ ರೋಚಕದ ವಾಕ್ಯದ ಸಂಕಲೆಯಬಿಗಿದ ||೫||

ಸ್ವಾಮಿಗಳಿ! ತಾವೇನೆ ಪೇಳಿರಿ
ನಾಮ ರೂಪಾತ್ಮಕದ ಜಗವಿದು
ತಾ ಮುಗಿಲಹೂವಿನೊಲು ಮಿಥ್ಯಾಸ್ವಪ್ನಗೋಚರದ |
ಆ ಮಹಿತರಚನೆಯೊಲು ವಿಭ್ರಮ
ತಾ ಮೊಲದಕೊಂಬಿನೊಲಸತ್ಯಂ
ನೇಮದಿಂ ನಿಟ್ಟಿಸಲು ವಾಸ್ತವಮುಲ್ಲವೆಂದೊರೆದ ||೬||

ಛತ್ರಸಿಂಹನು ನುಡಿಯುತಿರಲು ವಿ
ಚಿತ್ರವೆಂಬಂತಾ ಯತೀಶಂ
ಕ್ಷತ್ರಿಯನ ಕೆನ್ನೆಯನು ತಾಂ ಲಘುವಾಗಿ ತಾಡಿಸಲು |
ಚಿತ್ರದೊಳ್ನಸು ನಿಂತು ತ್ಯಾಗಿಧ
ರಿತ್ರಿಯೊಡೆಯರ ಕೋಪವಿದು ಸ
ರ್ವತ್ರ ದೂಷ್ಯಂ ತಾಡಿಪರೆ ಮತಭೇದವಿರಲೆಂದ ||೭||

ಎನಲು ನಸುನಗೆಬೀರಿ ತನ್ಮುನಿ
ಜನಪ ನಿನ್ನಭಿಮತದಲಾ ಬ್ರ
ಹ್ಮನನುಳಿದು ಬೇರೆಲ್ಲ ಸುಳ್ಳೆನೆ ಗೋಚರಿಪುದೆಲ್ಲ |
ಕನಸೆನಲು ನಿನ್ನಿಂದ ಬೇರೆಯ
ನೆನಿಪನಾವನು ವತ್ಸ ಹೊಡೆದನೊ
ನಿನಗೆ ಸುಳ್ಳಿನಭಾಸವೆಂತಾಯ್ತೆಂದು ಬೆಸಗೊಂಡ ||೮||

ಇಂತು ಯತಿವರನೆನಲು ಚಿತ್ತದ
ಚಿಂತೆ ತೊರೆದಾ ಛತ್ರಸಿಂಹನು
ಸಂತಸದಿ ಮುನಿಪದದ ರಜವಂ ತಳೆದು ಮಸ್ತಕದಿ |
ಸಂತಸರ ಬೆಳಗಿದಿರಿ ತಾವೆ
ನ್ನಂತರಂಗವ ನಾವು ಮನಬಂ
ದಂತೆ ಹರಟುವ ಮೂಢರರಿಯೆವು ತತ್ವಗಳನೆಂದ ||೯||

ಈ ಪರಿಯಲಾಪುರದಿ ಸದ್ಧ
ರ್ಮ್ಮೋಪದೇಶವನಿತ್ತು ಮುನಿಪನ
ಸೂಪಶಪರಿಗೆ ಬಂದು ಭಕ್ತರಬಂಧನವ ಕಡಿದು |
ಕಾಪುಗುಡದೆಂದಿನೊಲೆ ತಾ ಪ್ರತಿ
ಮಾಪರತೆಯುಂ ಖಂಡಿಸಿರೆ ಗಂ
ಗಾಪತನವೊಂದಿದುವು ಸಾಸಿರದೇವ ಮೂರ್ತಿಗಳು ||೧೦||

ಒಂಮುದಿನ ಯತಿರಾಜ ವಿಪ್ರ
ವೃಂದ ಮಧ್ಯದಲಿರಲು ಹತ್ತಿರ
ಬಂದು ಸಾತ್ವಿಕಭಕ್ತಿಸೂಸುತೆ ಪಾತ್ರಮೊಂದರಲಿ |
ತಂದು ರೊಟ್ಟಿಯನೊಪ್ಪಿಸಲು ನಾ
ಯಿಂದನೊಬ್ಬನುಮೋದನೆಂಬನು
ತಿಂದನದನಾನಂದದಿಂ ಯತಿವರ ದಯಾನಂದ ||೧೧||

ಅರರೆ ! ಮುನಿವರರೇಂ ಪ್ರಮಾದವೊ !
ತರವೆ ತಮಗಿದು ತುಚ್ಛ ಜಾತಿಯ
ನರನ ನಾಯಿಂದಕನ ರೊಟ್ಟಿಯ ತಿನ್ನುತಿಹರೆಂದು |
ಜರೆದು ಬ್ರಾಹ್ಮಣರಬ್ಬರಿಸೆ ಯತಿ
ವರನು ಗೋಧಿಯರೊಟ್ಟಿಯಿದು ಭೂ
ಸುರರೆ ನಾಯಿಂದನದಿದಲ್ಲೆನುತೊರೆದ ನಸುನಗುತ ||೧೨||

ಮರಳುತಲ್ಲಿಂ ಕರ್ಣವಾಸಕೆ
ತೆರಳಿ ಯಜ್ಞವನೊಂದ ವಿರಚಿಸಿ
ನೆರೆದ ಹಲಸಾಸಿರಕೆ ಜನಿವಾರಂಗಳನು ಕೊಡಿಸಿ |
ಅರುಹಿ ಗಾಯತ್ರಿಯನು ವೇದ
ಸ್ವರವೊಳಗೆ ಸದ್ಧರ್ಮ ಬೋಧಿಸಿ
ತೆರೆದು ದುರ್ನೀತಿಗಳ ಖಂಡಿಸಿದನು ದಯಾನಂದ ||೧೩||

ಆ ವರದಯಾನಂದ ಗಿರಿಬಲ
ದೇವ ಬಿನ್ನಪಮೆಸಗೆ ಪಯಣಂ
ಗೈವುತಲ್ಲಿಂ ಸೇರಿ ಸೋರೋಪುರವ ವೈಷ್ಣವರ |
ಠೀವಿ ಬೆರೆದಿಹ ಬುಧರ ಶಾಸ್ತ್ರಾ
ರ್ಥಾವರಣ ರಣದಲ್ಲಿ ಸೋಲಿಸೆ
ಭಾವಿಸಿದರತಿ ಕೆಡುಕ ಯತಿಪಗೆ ಮುಗ್ಧಮಾನವರು ||೧೪||

ಪರಮ ಯತಿವರನೊಂದುದಿನ ಬಳಿ
ನೆರೆವ ಭಕ್ತರ ನಡುವೆ ಕುಳ್ಳಿರೆ
ಮೀರಿದ ಸೊಕ್ಕಿನ ಮುನಿದ ಕೆಂಗಣ್ಣುಗಳ ಕೊಬ್ಬಿನಲಿ |
ಸಿರಮುರಿದ ನರನೊಬ್ಬ ದಂಡವ
ನಿರಿಸಿ ಹೆಗಲಲಿ ಸಭೆಯ ಮುಂದಿಯು
ಸರಿಯಿಸುತ ಗಂಟಿಕ್ಕಿ ಹುಬ್ಬನು ಸುಗ್ಗಿದನು ಜವದಿ ||೧೫||

ಹಲ್ಲುಮುಸೆಯುತಲವುಡ ಕಚ್ಚುತ
ಮುಲ್ಲ ಮುನಿಬಳಿನಿಂದು ತಿರುಕನೆ!
ಬಲ್ಲೆಯಾ ನಾಸಾರು ವಿಗ್ರಹಪೂಜೆ ಗಂಗೆಯರ |
ಒಲ್ಲದೆಯೆ ನೀ ಬೈವೆ ದೇವರ
ನೆಲ್ಲ ಪಳಿಯುವೆ ನಿನ್ನ ಕಾಯದ
ಲೆಲ್ಲಿ ಬಡಿದೀ ಕೋಲಿನಿಂ ಸಾಯಿಸಲಿ ಬೊಗಳೆಂದ ||೧೬||

ಬಿಡದೆ ಭಕ್ತರು ಪಲ್ಮೊರೆದು ತಲೆ
ಹಿಡುಕನಂ ದಂಡಿಸಲು ಬಗೆದಿರೆ
ತಡೆದವರ ಮುನಿಪಾಲ ನಿನ್ನಭಿಮತದಿ ಧರ್ಮದಲಿ |
ನಡೆಯಿರೆಂಬುದೆ ತಪ್ಪೆನಿಸಲೆಡೆ
ಎಡದೆ ಖಂಡನಗೈಯೆ ಸೂಚಿಪ
ಪಿಡುಗು ಸಿರವಿದೆ ದೋಷಿಯಿದನೇ ವತ್ಸ ಹೊಡೆಯೆಂದ ||೧೭||

ಉಸಿರುತೀಪರಿ ಯತಿಪನೆಳನಗೆ
ಪಸರಿಸಾತನ ವದನನೋಡಲು
ಕುಸಿದುದಾತನ ಧೈರ್ಯ ಕಂಪಿಸಿತಾತನಂಗಾಂಗ |
ಬಿಸುಪುತಗ್ಗಿತು ಮದವಿಳಿದು ನಿಜ
ನೊಸಲ ಯತಿಪದಕಿರಿಸಿ ಹಾ! ಮ
ನ್ನಿಸಿರಿ ಭಗವನ್! ಎನ್ನುತ ಬಿದ್ದನು ರೋದಿಸುತ ನೆಲಕೆ ||೧೮||

ಪರಮಹಂಸನಸೀಮಕರುಣೆಯ
ನಿರುಕಿಸಲ್ಲರು ಪುಳಕಮೊಂದಿರೆ
ಕರದಲವನಂ ಸವರಿ ಮುನಿವರ ತಮ್ಮ! ವ್ಯರ್ಥದಲಿ |
ಮರುಗದಿರು ಹೊಡೆದಿದ್ದರುಂ ಸಹ
ಕೆರಳುತಿರಲಿಲ್ಲಾವು ರೋದಿಸ
ಲಿರುವ ಕತವೇಂ ದೇವಸನ್ಮತಿ ಕೊಡಲಿ ನಿನಗೆಂದ ||೧೯||

ದೇವನದಿಯಲಿ ಮೀಯೆ ಬಂದಿಹ
ಸಾವಿರದ ಕೂಟದಲಿ ಸನ್ಯಾ
ಸೀವರಂ ಸತ್ಯೋಪದೇಶವ ಗೈಯುತಿರೆ ನಯದಿ |
ತೀವಿದುತ್ಸವದಿಂ ಬರೌಲಿಯ
ರಾವ ವೈಷ್ಣವ ಕರ್ಣಸಿಂಹನು
ಮೀವಬಗೆಯಿಂ ಬಂದನತ್ತಮೆ ಕೂಡಿ ಮಂದಿಗಳ ||೨೦||

ಬೀಡಲುನುದಿನರಾತ್ರಿ ರಾಸ
ಕ್ರೀಡೆ ವಿರಚಿಸಿ ತನ್ನಿಳಿದಕಡೆ
ನೋಡೆ ಯತಿಪಗೆ ಕರ್ಣಸಿಂಹನು ವರನಿಮಂತ್ರಣವ ।
ಕೂಡೆ ಬಂದಿಹ ಬುಧರ ಮುಖದಿಂ
ನಾಡೆ ಕಳುಹಿಸೆ ಯತಿಜನೋತ್ತಮು
ತೀಡಿ ಬಹ ಬೇಸರದಿ ಪೇಳಿದನಿಂತು ದೂತರಿಗೆ ||೨೧||

ನೀತಿಬಾಹಿರರೀತಿ ಪೂಜ್ಯಮು
ಹಾತುಮುರ ವೇಷಗಳ ಕುಣಿಪುದು
ಪಾತಕದಿ ನಾವ್ಭಾಗ ವಹಿಸೆವು ಬಾರೆವೆಂದೆನುತ ।
ಆ ತಪೋಧನನುತ್ತರಿಸಲಾ
ಮಾತಿಗನುವಿಂ ಬಳಿದು ಬಣ್ಣಪ
ದೂತರೊರೆದರು ಕರ್ಣಸಿಂಹಗೆ ಕೋಪಮುದಿಪಂತೆ ||೨೨||

ಬಳಲಿ ರವಿ ಪಶ್ಚಿಮದ ಹಾಸಿಗೆ
ಯೊಳಗೆ ಮಲಗುತ್ತಿರಲು ಮಿರಮಿರ
ಪೊಳೆವ ಚಿನ್ನದ ರೇಖೆಯಂಚಿನ ಶುಭ್ರಮೇಘಗಳ ।
ತೊಳಪ ತೆರೆಗಳನೆಳೆದು ತಣ್ಪನು
ತಳೆದ ಮಂದಸಮೀರ ಮೆಲ್ಲನೆ
ಸುಳಿದು ಬಿಜ್ಜಣವಿಡಲು ರಂಜಿಸುತಿರ್ದುದಾ ಸಂಜೆ ||೨೩||

ಮಿಕ್ಕುಗುವ ಸೊಬಗಿಂದ ಸಾಲ್ಗಳ
ನಿಕ್ಕಿ ರಾಜಮರಾಳ ಸಂಕುಲ
ಸೊಕ್ಕಿನಿಂ ಶುಭ್ರಾಂಗಮೆರೆಯಿಸಿ ಮೇಲೆತೇಲುತಿರೆ ।
ಕೊಕ್ಕರೆಯೆ ಮೊದಲಪ್ಪ ಪಲನೀ
ರ್ವಕ್ಕಿಗಳು ನಿನದಿಸುತ ತುಂತುರ
ರೆಕ್ಕೆಗಳಿನೆರಚುತಿರೆ ಸುರನದಿ ಕೀವಿ ಬೀರಿದುದು ॥೨೪॥

ಸಂಜೆಗೆಂಪಿನ ಮೇಲುವದ ನೆರೆ
ಸಂಜನಿಪ ತೆರೆತೆರೆಯಪುಳಕದ
ಕಂಜ ಕುಮುದದ ಕಂಪಪೂಸಿದ ತಟದ ಹೂಲತೆಯ ।
ಕುಂಜಗಳ ಹರಿಹರಿದ ಕಲಕಲ
ಮಂಜುಳದ ಗಾನಗಳ ಸೊಬಗಿನ
ಪುಂಜೆ ಗಂಗಾಬಾಲೆ ಮೆರೆದಳು ರಾಜ ವೈಭವದಿ ॥೨೫॥

ಇಂಪುಗಾನದ ನದಿಯ ನೀರಿನ
ತಂಪನುಂ ಬಗೆಬಗೆಯ ಸಿಹಿಹೂ
ಗಂಪನುಂ ತಾಂತಳೆದ ಭಾರಕೆ ದಣಿದು ಮರಗಿಡದ ।
ಸೊಂಪಿನೆಲೆಗಳ ನಡುವೆ ವಿರಮಿಸಿ
ಪೆಂಪಿನಿಂ ತಂಬೆಲರು ಸುಳಿದಿರೆ
ಗುಂಪುಕೂಡಿದ ಭಕ್ತಮಧ್ಯದಿ ಕುಳಿತನಾಯತಿಪ ॥೨೬॥

ಸೈಕತದ ರಾಶಿಯಲಿ ಸದ್ಧ
ರ್ಮೈಕರತ ಮುನಿಭೂಮಿಕಾಂತನ
ನೇಕತರದಿಂ ಬೆಸಗೊಳುವ ನಿಜಭಕ್ತಮಂಡಳಕೆ |
ಲೋಕಕರ್ತನಸೃಷ್ಟಿಗಳ ವಿಷ
ದೀಕರಿಸುತಿರೆ ಖಟಖಟ ಧ್ವನಿ
ಸೋಕಿದುದು ಕಿವಿದೆರೆಯ ತಟ್ಟನೆ ಹಿಂದುಗಡೆಯಿಂದ ||೨೭||

ವಿಗ್ರಹಾರ್ಚನ ರೂಢಿಪಾಲಕ
ರಗ್ರ ರಂಗಾಚಾರ್ಯನಿಗೆ ಗು
ರ್ವಗ್ರಪೀಠವನಿತ್ತು ವೈಷ್ಣವ ದೀಕ್ಷೆಯನು ಕೊಂಡು |
ಉಗ್ರನಾಗಿಹ ಕರ್ಣಸಿಂಹ ಸ
ಮಗ್ರ ಮೂರ್ತ್ಯರ್ಚನವ ಖಂಡಿಪ
ನಿಗ್ರಹೀತಾತ್ಮನಲಿ ಕನಲುತ ಬಂದ ಜನರೊಡನೆ ||೨೮||

ಶಕ್ತರಹ ಸೇವಕರ ಕೊಂಡು
ದ್ರಿಕ್ತ ಚೇತನ ಕರ್ಣಸಿಂಹನು
ಭಕ್ತವನಧಿಯ ಸೀಳಿ ಮಧ್ಯವೆ ನುಗ್ಗಿ ಹೀನಮುಹ |
ಉಕ್ತಿಗಳನುಸಿರುತ್ತಲವಿನಯ
ಯುಕ್ತ ನಡತೆಗಳಿಂದ ರಾಗವಿ
ರಕ್ತರಾಜನ ಕಡೆಗೆ ನಡೆದನು ಜಡಿದ ವೇಗದಲಿ ||೨೯||

ಪಲ್ಲಮುಸೆದಿರಲವಿನಯಕೆ ಜನ
ರೆಲ್ಲ ಶಾಂತಿಯ ಬಿಡದೆ ಮುನಿಭೂ
ವಲ್ಲಭಂ ನಸುನಗುತ ವಂದಿಸಿ ಕರ್ಣಸಿಂಹನನು ।
ಎಲ್ಲವೊಳ್ಳಿತೆ ಬಂದು ಕುಳಿರೆನು
ತಲ್ಲಿ ತಾಣವತೋರೆ ಗರ್ವದಿ
ಸಲ್ಲದುಬ್ಬರದಿಂದ ನುಡಿದಂ ಸಂತರಾಜನಿಗೆ ॥೨೦॥

ಕೊರಳನಿನಿತುಂ ತಗ್ಗಿಸದೆ ಷ್ಕೈ
ಮರೆದು ಸೊಕ್ಕಿನಲೆಲ್ಲಿ ಕುಳ್ಳಿಹು
ದೊರೆಯೆನಲಹಂಕಾರಮದ ಶಿರಕೇರಿಹುದ ಕಂಡು ।
ಪರಮಮುನಿ ಬೇಕಲ್ಲಿ ಕುಳಿರೆಂ
ದೊರೆದನಾಕ್ಷಣ ಧೂರ್ತನೀ ಕುಳಿ
ತಿರುವೆಡೆಯೆ ಕುಳಿತಪೆನು ಸರಿಕೆಲಕೆಂದು ಗರ್ಜಿಸಿದ ॥೨೧॥

ಕರ್ಣಸಿಂಹನ ಮಾತಕೇಳಿ ಸು
ವರ್ಣ ತೇಜಸ ಸರಿಸಿ ತನ್ನಯ
ಪರ್ಣಪೀಠವ ಬನ್ನಿ ಕುಳಿರೆನೆ ಧೂರ್ತರಾಜನ್ನ ।
ವರ್ಣಗೆಟ್ಟಿರೆ ವದನ ಕರಿವಾ
ಕರ್ಣಿಸದೆ ರಾಸವನುನೋಡದ
ನಿರ್ಣಯಕೆ ಕತಮೇನು ಯತಿಯಾಗಿರ್ದುಮುರುಹೆಂದ ॥೨೨॥

ಎಂದಪಂ ಕೇಳ್ದೊಡನೆ ಯತಿವರ
ನೊಂದು ಕೊಳಕೆದೆಯವರು ಪಲಬಗೆ
ಯಿಂದ ಸಿಪ್ಮ್ರಯ ಪೂಜ್ಯಪುರುಷರ ವೇಷಗಳ ರಚಿಸಿ ।
ಮುಂದಿ ಪುಥ್ಯದಿ ಕುಣಿದಪರು ನಲಿ
ವಿಂದ ನೀವ್ ನಿಟ್ಟಿಪಿರಿ ನಾಚಿಕೆ
ಯಿಂದುಬಾರದೆ ಛೀ! ಅದೆಂತಹ ಕ್ಷತ್ರಿಯರೊ! ಎಂದ ||೩೩||

ತಂದೆತಾಯ್ಗಳ ಬಂಧು ಬಳಗದ
ಮುಂಪಿಗಳನಣಕಿಸಲು ಮಾನವ
ನೊಂದಪನು ಚಿತ್ತದಲಿ ತಾನೆನಿತಾದೊಡಕಟಕಟ ।
ಸಂದ ಸದ್ವಂಶಜರೆನಿಪ ನೀ
ವಿಂದು ಮಾಪುರುಷಾನುಕರಣದಿ
ಕುಂದುಗಾಣಿರೆ! ಶೋಕವೆಂದನು ನೊಂದ ಮುನಿನಾಥ ||೩೪||

ಮುನಿಪನಿಂತೆನೆ ಕರ್ಣಸಿಂಹನು
ಜನಮುಖದಿ ನೀಂ ದೇವತಟನಿಯ
ಮನದಿ ಮೂನಿಸೆ ದೇವರವತಾರಗಳ ಹಂಗಿಸುವೆ ।
ಎನುತ ಕೇಳಿಹೆ ನನ್ನೆದುರು ದು
ರ್ಜನನೆ! ನೆನಪಿಡು ಮನದಿ ನೀಂ ಖಂ
ಡನಪ ಗೈದರೆ ದಂಡಿಸುವೆನೆಚ್ಚರಿಕೆಯಿರಲೆಂದ ||೩೫||

ಎಂದ ನುಡಿಗಳನಾಲಿಸಿ ದಯಾ
ನಂದ ನಸುನಗೆಯಿಂದಲಾರನು
ನಿಂದಿಸೆನು ವಸ್ತುಗಳದೆಂತಿಹುದಂತೆ ಬಣ್ಣಿಪೆನು ।
ಹಿಂದಿರಲಿ ಭಯುಗಿಯದ ಮಾತುಗ
ಳಿಂದು ಸತ್ಯವನಾಡೆ ಸಾನಾ
ರಿಂದಲುಂ ಭಯಗೊಳುವನಲ್ಲೆನೆ ಧೂರ್ತನಿಂತೆಂದ ॥೩೬॥

ಕ್ಷತ್ರಿಯಂ ಗಂಗೆಯಲಿ ಮೀಯೆ ಪ
ವಿತ್ರನಪ್ಪನು ಪಾಪ ನರಗೆ ಧ
ರಿತ್ರಿಯಲಿ ತಾಂ ಹೊದ್ದದೆಂದಪರೆನಲು ಯತಿರಾಜ ।
ಪುತ್ರ ! ಹುಲುಮಾನವರ ರಚನೆ ವಿ
ಚಿತ್ರವಿದ ನಂಬದಿರು ತಿಳಿಯೆ ಧ
ರಿತ್ರಿಯಲಿ ವೇದೋಕ್ತಧರ್ಮವೆ ಪಾಪಹರವೆಂದ ॥೩೭॥

ನುಡಿವ ನಡುವೆಯೆ ಕರ್ಣಸಿಂಪನ
ಪಡೆದ ಫಾಲದ ತಿಲಕವಂ ಕಂ
ಡೊಡನೆ ಮುನಿಪಂ ಗೆರೆಯಿದೇನೆನಲಾತ ಶ್ರೀ ರೇಖೆ ।
ಬಿಡದೆ ಸರ್ವರು ಧರಿಸಬೇಕಿದ
ತೊಡೆದವಂ ಚಾಂಡಾಲನೆಂದನು
ಕುಡಿನಗೆಯ ಸೂಸುತ್ತ ಯತಿವರರನಿಂತು ಬೆಸಗೊಂಡ ॥೩೮॥

ಒಳಿತು ವೈಷ್ಣವದೀಕ್ಷೆಯಂ ನೀ
ವ್ವಳಿದೆನಿತು ದಿನವಾಯ್ತುಸುತ ನಿ
ತ್ತ್ಚಳ ಯತೀಶ್ವರ ಕೇಳಲಾ ಕ್ಷತ್ರಿಯನು ಹಲಕಾಲ |
ಕಳೆದುಡೆಂಪನು ಯತಿಪನಿಂತಿರ
ಲೊಳಿತು ನಿಮ್ಮಯ ತಂದೆತಾತದಿ
ರಿಳೆಯಲೀ ದೀಕ್ಷೆಯನು ಕೊಂಡರೆ ಪೇಳಿ ನೀವೆಂದ ||೩೯||

ಸೊಲ್ಲನಾಲಿಸಿ ಕರ್ಣ ಸಿಂಪನು
ಬಲ್ಲತನದಿಂದಿಲ್ಲವೆಂದೆನೆ
ಚೆಲ್ಲಿ ಕುಡಿನಗೆಗಳನು ಯತಿಭೂಕಾಂತ ಹೇ ವತ್ಸ |
ಎಲ್ಲಿಯದೊ! ತವಪಿತಪಿತಾಮಹ
ರೆಲ್ಲರುಂ ಚಾಂಡಾಲರೇ ಸರಿ
ಯಲ್ಲವೇ ನೀವೆಂದ ನುಡಿಗನುಸಾರ ಪೇಳೆಂದ ||೪೦||

ಕುಡಿನಗೆಯಲಾ ಮುನಿಪನೀಪರಿ
ನುಡಿಯುತಿರಲಾ ಕರ್ಣಸಿಂಹನು
ಕಡಿದು ಪಲ್ಗಳ ಕೆಂಗಿಡಿಗಳಂ ಕಾರಿ ಕಂಗಳಲಿ |
ಅಡಿಯ ನೆಲಕಪ್ಪಳಿಸಿ ಖಡ್ಗದ
ಹಿಡಿಯ ಮೇಗಡೆ ಹಸ್ತವನ್ನಿಡೆ
ಗಡಗಡನೆ ನಡುಗಿದುದು ಭಯದಿಂ ಮಂದಿ ಸಂದೋಹ ||೪೧||

ಪತ್ತು ಹದಿನೈದಾಳುಗಳು ಓರಿ
ದೆತ್ತಿ ಖಡ್ಗಂಗಳನು ಝಳಪಿಸೆ
ಮತ್ತನಾಗಿಹ ಕರ್ಣಸಿಂಹನು ಮುಂದೆ ನುಗ್ಗುತಿರೆ।
ಸುತ್ತ ಕುಳಿತಿಹ ಭಕ್ತ ಸಂಕುಲ
ತತ್ತರಿಸಿದುದು ಭಯದಿ ಕಂಪಿಸು
ತತ್ತನಾ ಯತಿಭಕ್ತ ಟೇಕಾರಾಮನಕಟೆನುತ ॥೪೨॥

ಎಲ್ಲಿಯದು ಭಯ ವತ್ಸ! ನಾಂ ನುಡಿ
ದೆಲ್ಲವುಂ ಸಹ ಸತ್ಯ ಸುಳ್ಳಿನ
ಸೊಲ್ಲ ನುಡಿವವ ಮಾತ್ರ ಬೆದರುವ ಧರ್ಮಮಾರ್ಗದಲಿ।
ಎಲ್ಲ ಕಡೆಯಿಂ ನಾನು ನಿರ್ಭಯ
ನಲ್ಲದೀ ಭಯ ನಿನಗೆ ನಲಹುವ
ಕೊಲ್ಲುವವನಾದೇವನಿರ್ಪನೆಂದನಾ ಮುನಿಪ ॥೪೩॥

ಇತ್ತ ಯತಿವರನಿಂತುಸಿರುತಿರ
ಲತ್ತಲಾ ಕ್ಷತ್ರಿಯನು ನರಪದ
ದೊತ್ತಡಕೆ ಸಿಕ್ಕಿರ್ದ ಸರ್ಪನತೆರದಿ ಬುಸ್ಸೆನುತ।
ಕತ್ತಿಯಂ ಹೊರಸೆಳೆದು ಕೋಪೋ
ನ್ಮತ್ತನಾಗತಿ ತುಚ್ಛನುಡಿಗಳ
ಬಿತ್ತರಿಸಿ ಪಲ್ಮಸೆಯುತಿರ್ದನು ಮುನಿಯ ಪಕ್ಕದಲಿ ॥೪೪॥

ನೆರೆದ ಭಕ್ತರ ನಡುವೆಯೀಪರಿ
ಪರಮಹಂಸನ ಹಂಗಿಸುವುದಂ
ನಿರುಕಿಸುತ ಹಲಮಂದಿ ಯುವಕರು ತಾಳ್ಮೆಯ್ಯೆಗೆಡಲು |
ಉರಿದುರಿದು ಮುನ್ನುಗ್ಗೆ ಯತಿ ಭೂ
ವರನವರ ಕೈಸನ್ನೆಯಿಂ ಕು
ಳ್ಳಿರಿಸಿ ಕನಲಿದ ಕರ್ಣಸಿಂಹಗೆ ನಗುತಲಿಂತೆಂದ ||೪೫||

ಹೇಮಹಾಶಯ! ಶಾಸ್ತ್ರವಾದದ
ಲೀ ಮನಂ ನಿಮಗಿರಲು ಬೇಗದಿ
ನಾ ಮಥುರೆಯಿಂ ನಿಮ್ಮ ರಂಗಾಚಾರ್ಯನನು ಕರೆಸಿ |
ನೇಮದಿಂ ಹಿಂಜರಿದವರು ನಿಜ
ಯೀ ಮತವ ಸೇರುವರು ಶಪಥವ
ನೀಮಹಾಜನರೆಲ್ಲ ಕೇಳ್ದಪರೆಂದ ಮುನಿನಾಥ ||೪೬||

ವರ ಯತೀಶ್ವರ ನಗುತಲಿಂತೆನೆ
ಕೆರಳಿ ಕ್ಷತ್ರಿಯ ಪಲ್ಗಳಂ ಮೊರೆ
ಮೊರೆದು ರಂಗಾಚಾರ್ಯಪದಯುಗಪಾದುಕಾರಜವ |
ಒರೆಸುತಿರುವರು ನಿನ್ನ ಸಮನಹ
ನರರೆನಿತೊ ಜನರವರ ಸಂಗಡ
ವರರೆ! ಶಾಸ್ತ್ರವಿವಾದ ನಿನಗೇತರದೊ ಸಾಕೆಂದ ||೪೭||

ನುಡಿನುಡಿಯ ನಡುನಡುವೆ ಪಲ್ಗಳ
ಕಡಿಕಡಿದು ಕಡುಕಡುಗಿ ಕತ್ತಿಯ
ಜಡಿಜಡಿದು ಬಿಡಬಿಡದೆ ಝಳಪಿಸಿ ಬೀದಿಭಿಕ್ಷುಕನೆ ।
ಪೊಡೆಪೊಡೆದು ಸಿನ್ನೊಡಲ ಸೀಳುತ
ಒಡಿಒಡಿದು ಖಂಡಗಳ ಕೊಚ್ಚುವೆ
ತಡೆತಡೆಯೊ ಯತಿಯೆನುತ ಸುಗ್ಗಿದ ಧೂರ್ತರಾಜನ್ಯ ॥೪೮॥

ಸುಗ್ಗಲಿಂತಾ ಕ್ಷತ್ರಿಯನು ನಸು
ಸಗ್ಗದಾ ಯತಿಪಾಲ ಶಾಂತಿಯ
ಕುಗ್ಗಿಸದೆ ನಸುನಗೆಯನಳಿಸದೆ ಮಧುರವಾಣಿಯಲಿ ।
ಮುಗ್ಗರಿಸದಿರು ಮಗನೆ! ಶಾಸ್ತ್ರದ
ಲೊಗ್ಗು ನಿನಗಿರೆ ಗುರುವ ಕರೆಯಿಸು
ಓಗ್ಗುವೆನು ನಾನದಕೆ ಕೋಪವನುಳಿದು ನೋಡೆಂದ ॥೪೯॥

ಬೇಕೆ ಶಾಸ್ತ್ರಾರ್ಥಗಳು ಗುರುವಂ
ನೀಕರಿಸು ಶಸ್ತ್ರಾರ್ಥ ರಣವೇ
ಬೇಕೆ ಜಯಪುರ ಜೋಧಪುರಗಳ ಭೂಪರಲಿ ಕಾದು ।
ಏಕೆ ಸನ್ಯಾಸಿಯನು ಘಾತಿಸ
ಲೀಕಡೆಗೆ ಧಾಪಿಸುವೆ ಮಗನೇ!
ಸಾಕು ನಾವಂಜಿಕೆಯನರಿಯೆವು ಜೋಕೆ ನಿಲ್ಲೆಂದ ॥೫೦॥

ಕೇಳುತೀ ಮಾತುಗಳ ನಿಜಕರ
ವಾಳವಂ ಸೆಳೆದೆತ್ತಿ ಮುನಿಪನ
ಬಾಳ ಮುಗಿಸಲು ಕರ್ಣಸಿಂಹನು ಪ್ಯೈಯರ್ಮೇಲೆರಗೆ |
ತಾಳುತಾಳೆಲೆ ಧೂರ್ತ! ಎನ್ನುತ
ತೋಳನೀಡಾಯತಿಪ ನೂಂಕಿದ
ಧೂಳ ಮುಕ್ಕುತಲುರುಳಿ ಬಿದ್ದನು ಕ್ಷತ್ರಿಯಂ ನೆಲಕೆ ||೫೧||

ಹಿಂಗದಿಹ ಕೋಪಾಗ್ನಿಯಲಿ ಮುಖ
ಭಂಗ ಪವಿಯುಂಬೀಳೆ ನೆಲದಿಂ
ಚಂಗನೆಯೆ ಚಿಗಿದೆದ್ದು ಕರದಲಿ ಕತ್ತಿಯನು ಕೊಂಡು |
ಖಿಂಗಡಿಪೆ ನಾಂ ನಿನ್ನ ತಲೆಯನು
ತಂಗು ನರಕದಲೆನುತ ನುಡಿಗಳ
ನುಂಗುನುಂಗುತ ನುಡಿದು ನುಗ್ಗಿದನಾಗ ಸರನಾಗ ||೫೨||

ಮುಯ್ಯಿನಿಂ ಮೈಮೇಲೆರಗಿ ಸಿರ
ಪೊಯ್ಯೆಕ್ಷತ್ರಿಯ ಖಡ್ಗವೆತ್ತಿರ
ಲೊಯ್ಯನಾ ಯತಿರಾಜ ಕರದಿಂಪಿಡಿದವನ ತೋಳ |
ಅಯ್ಯೆನುತ್ತಾಸಿ ಕಸಿದು ಬಿರುಸಿಂ
ದೊಯ್ಯೆ ನೆಲದೆಡೆ ಮುರಿದು ಬಿದ್ದುದು
ಸುಯ್ಯೆನುತಲ್‌ಬ್ಭಾಗಮಾಗುತ ಮಂದಿ ಬೆರಗಾಗೆ ||೫೩||

ನೋಡುತಾಕ್ಷತ್ರಿಯನ ಮುಖವನೆ
ಹೇಡಿ! ನಾನುಂ ಮುಯ್ಯತೀರಿಸೆ
ಕಾಡಿಸಲೆ? ಛೀ! ನಿನ್ನನೆನುತಿರಲಾ ತಪೋಧನನು |
ಬಾಡಿತಾತನ ವದನ ಬಂದುದು
ಕೂಡೆ ಮೂರ್ಛಾಭಾವ ಬಾಯ್ಗೊರೆ
ಯೂಡುತಿರೆ ಕಣ್ಗಡ್ಡೆ ಹಾರಲು ಕಂಪಿಸುತ ಕುಳಿತ ||೫೪||

ನಡುಗುವಾಕ್ಷತ್ರಿಯನ ಮುಖ ಕಂ
ಡೊಡನೆ ಕನಿಕರವಾಯ್ತು ಯತಿಪಂ
ಹಿಡಿದ ಬಾಹುವ ಸಡಲಿಸೆಲವೋ ನಿನ್ನ ದುಷ್ಕೃತಿಗೆ |
ಕಡಗಿ ಬಗೆಯೆನು ನಿನಗನಿಷ್ಟವ
ನಡೆ ನಿನಗೆ ಪರಮಾತ್ಮ ಸನ್ಮತಿ
ಕೊಡಲಿ ನಾಂ ಸನ್ಯಾಸ ಧರ್ಮವ ಬಿಡೆನು ನಡೆಯೆಂದ ||೫೫||

ಮಿಂಚಿನಂದದಲಿಲ್ಲ ನಡೆದುದು
ಮಿಂಚಿದುದ ನೆನೆನೆನೆದು ಭಕ್ತಗ
ಣಂ ಚತುರ ಗುರುವರನ ಸಾಹಸ ಕರುಣೆಗಳ ಕಂಡು |
ಸಂಚಲಿತ ಕೌತುಕದಿನಿಂದುದು
ಕೊಂಚವುಂ ತಲೆಯೆತ್ತದಂಬರ
ದಂಚಿನಿಂ ಮುಖಮುಚ್ಚಿನಡೆದನು ವೀರ ರಾಜನ್ಯ ||೫೬||

ರುಂಡಬಾಗಿಸಿನಡೆದ ತಪ್ಪು ಮು
ಖಂಡನೊಡನೆಯೆ ಸ್ತಬ್ಧಸೇವಕ
ಮಂಡಳಂ ಸಹ ಮುದುರಿ ವಸ್ತ್ರಂಗಳಸು ಹೊರಗಾಯ್ತು ।
ಕೊಂಡು ಶಾಸಕರಿಂದ ಧೂರ್ತಗೆ
ದಂಡ ತೆರಿಸುವುದೆಂದು ಭಕ್ತರ
ತಂಡಮನೆ ಯತಿರಾಜ ಧರ್ಮವೆ ಗೈವುದದನೆಂದ ॥೫೭॥

ಮುರುಳನಪ ನಿಜಕ್ಷತ್ರಧರ್ಮವ
ತೊರೆದ ಮಾತ್ರಕೆ ಬ್ರಾಹ್ಮಣತ್ವದ
ಪರಮ ಧರ್ಮವ ತ್ಯಜಿಸಬೇಕೇ ನಾವು ವತ್ಸರಿರಾ ।
ಧರಣಿಯಲಿ ನಾವಾರ್ಗಮಹಿತವ
ನುರದಿ ಬಗೆಯೆವು ಪೊರೆದ ಧರ್ಮವೆ
ಪ್ರೇರಿವುದಲ್ಲವೆ ? ಮರೆಯಿರಾಮದನೆಂದನಾ ಮುನಿಪ ॥೫೮॥

ಕಡೆದೊಷಂ ಸಹ ಮೊಸರು ಬೆಣ್ಣೆಯ
ಕೊಡದೆ ದುರುಳಂ ಘಾತಿಸಿದೊಡೇಂ
ಬಿಡುವನೇ ತತ್ವಜ್ಞ ಸರ್ವಪ್ರೇಮ ಭಾವವನು ।
ಕೊಡುತ ಕರುಣಾಮೃತವನೀಪರಿ
ಬಿಡದೆ ಮೆರೆವನು ಸಂತ ಸಜ್ಜನ
ಗದಣವನಧಿ ಸುಧಾಕರಂ ಮಿಗೆ ಹರಸೆ ಪರಮಾತ್ಮ ॥೫೯॥

॥ ಇಂತು ಹತ್ತನೆಯ ಸಂಧಿ ॥



# ಹನ್ನೊಂದನೆಯ ಸಂಧಿ

**ಸೂಚನೆ—ಭಕ್ತಿ ವಿವರಿಸಿ ದಂಡಿಗಳಲಿ ವಿ**
**ರಕ್ತಪತಿ ದುರ್ನಡೆಯ ವಿಗ್ರಹ**
**ಭಕ್ತಿ ಖಂಡಿಸಿ ಕ್ಷಮಿಸಿದಂ ನಿಂದಕನ ಘಾತಕರ ||**

ಬಳಿಕ ಬಾಲರೆ ಕೇಳಿ ಪಯಣಂ
ಬೆಳಸಿ ಸೋರೋಪುರದಿ ಯತಿವರ
ನಿಳಿಯೆ ವಿಬುಧಾಂಗದನು ವಿರಜಾನಂದ ಪದಗಳಲಿ |
ಕುಳಿತು ವ್ಯಾಕರಣವನು ಕಲಿತವ
ನಿಳಿದು ಪಾದಕೆ ಮೂರ್ತಿ ಪೂಜೆಯ
ನುಳಿಪೆನೆನ್ನುತ ಸೋಲ್ಲುಬಿಸುಟನು ನದಿಗೆ ಮೂರ್ತಿಗಳ ||೧||

ಒಂದು ಸಾಯಂಕಾಲ ಯೋಗಿವ
ಸುಂಧರಾಧೀಶ್ವರನು ಸುಳಿದಿರ
ಲಂದಮಿಗುತಿಹ ನದಿಯ ತೀರದಿ ದೈವಯೋಗದಲಿ |
ತಂದವಸ್ತ್ರ ಕಮಂಡಲುವನಾ
ನಂದದಿಂ ತೊಳೆಯುತ್ತ ನದಿಯಲಿ
ಮಿಂದು ನಡೆದಿಹ ಸಾಧುವೊಬ್ಬನನತ್ತಲೀಕ್ಷಿಸಿದ ||೨||

ಮೆರೆವ ಮಾಯಾವಾದವಂ ಬಿ
ತ್ತರಿಸಿ ನಲಿವಾಸಾಧು ಮುನಿಭೂ
ವರನ ನುಡಿಯಿಸಿ ತ್ಯಾಗಿಯೆನಿಸವಧೂತನೆಂದೆನಿಸಿ |
ಬರಿದೆ ಖಂಡನ ಮಂಡನದ ತೊಲೆ
ವಿರುಕಿನಲಿ ನೀನೇಕೆ ಸಿಲುಕಿಹೆ
ಭರದಲೀ ಪ್ರವೃತ್ತಿಲೇಪವ ತೊಳೆದು ನಲಿಯೆಂದ ||೩||

ಈ ನುಡಿಗೆ ನಸುನಗುತಲಾಗ ತ
ಪೋನಿಧಿಯು ಹೇ ಸಾಧು ಗೈದೊಡ
ಮಾನಿದೆಲ್ಲವ ಪೂರ್ಣ ನಿರ್ಲಿಪ್ತನಹೆ ಶಾಸ್ತ್ರಗಳ |
ಮಾನಿತಪ್ರವೃತ್ತಿ ವಿಶ್ವದ
ಮಾನವ ಪ್ರೇಮದಲಿ ಕರ್ತ
ವ್ಯಾನುಧರ್ಮವೆ ಗೈಯವೇಳ್ಪುದು ಸತ್ಪರವನೆಂದ ||೪||

ಉತ್ತರವನಿದಕೇಳಿ ಸಾಧು ವಿ
ಪತ್ತಿಣದು ನರಮೋಹವೆತ್ತಣ
ಪತ್ತುಗೆಯೊ ಶೃತಿವರ್ಗ ಘೋಷಿಸುವಾತ್ಮದೇವನನು |
ಚಿತ್ತದಿಂ ಪ್ರೀತಿಸಲು ಕಲಿಯೆಂ
ದೊತ್ತಿ ಪೇಳುತಲುಪನಿಷತ್ತಿನಿ
ನೆತ್ತಿ ಋಷಿಸಂವಾದವೊಂದನು ವಿಸ್ತರಿಸಿ ನುಡಿದ ||೫||

ಆ ವಿನೂತನ ಮುನಿಪ ಕೇಳಿದ
ನೀಪದಾರಂ ಪ್ರೀತಿಪಿರಿ ನನ
ಗೋವಿ ಬಿತ್ತರಿಸಿರೆನೆ ಸಾಧುವು ಶೀಘ್ರವಾತ್ಮನನು |
ಭಾಪದಿಂ ಪ್ರೀತಿಸುವೆನೆನೆ ಯತಿ
ಭೂಪರಂ ತತ್ಪ್ರೇಮದಾತ್ಮನ
ದಾವೆಡೆಯಲಿಹನೆಂದು ಸಾಘುವ ಮರಳಿ ಬೆಸಗೊಂಡ ||೬||

ಸಾಜದಿಂದಾ ಸಾಧುವಾತ್ಮನು
ರಾಜನಿಂದಾ ಭಿಕ್ಷುಕನ ವರೆ
ಗೀಜಗದಿ ಕರಿಯಿಂದಲಿರುವೆಯುವರೆಗೆ ಸಪ್ಪತ್ರ |
ರಾಜಿಸುತ್ತಿಹ ಮೇಲು ಕೀಳ್ಗಳ
ಗೋಜು ವಿಭುಗಿಲ್ಲಾತನನೆ ನಾಂ
ನೈಜಮಾರ್ಗದಿ ಪ್ರೀತಿಸುತ್ತಿಹೆನೆಂದು ಬಣ್ಣಿಸಿದ ||೭||

ಸಾಘುವಿನ ನುಡಿಕೇಳಿ ಯತಿಪನ
ಗಾಧಗಾಂಭೀರ್ಯದಲಿ ನಿರ್ಮ್ಮಳ
ಗಾದರಂ ಮಹದಾತ್ಮಗೋಸುಗ ಲೇಶ ಸಹವಿಲ್ಲ |
ಈ ದಿವಸ ತಿರಿದುಂಬ ಚಿಂತನ
ಸಾಘು! ನಿಮಗಿದೆ ಬಟ್ಟೆ ಹಿಂಡುವ
ಮೋದಸಹವಿಹುದಾದರೊದಗಿದ ಭಾಗ್ಯವೇನೆಂದ ||೮||

ಮಿಂದು ಶುಂಭ್ರಾಬಟವನುಡುವಲಿ
ತಂದು ಭಿಕ್ಷಾನ್ನವನು ಭುಂಜಿಪ
ಲೊಂದುದಿವಸಮೆಯಾದೊಡಂ ಸಖ! ನಿಮ್ಮ ದೇಶದಲಿ |
ಒಂದಗಳು ಸಹ ಸಿಗದೆ ಹಸಿವಿಗೆ
ಬೆಂದು ಬೂದಿಗಳಪ್ಪ ನಿಮ್ಮಯ
ಬಂಧುಗಳ ಸಾಸಿರವ ನೆನೆದಿರೆ ಪೇಳಿ ನೀವೆಂದ ||೯||

ಧರಿಸೆ ವಸ್ತ್ರಗಳಿರದೆ ಕಲ್ಮಷ
ವೆರೆವ ಚಿಂದಿಯನುಟ್ಟು ಚಳಿಯಲಿ
ಥರಥರನೆ ಕಂಪಿಸುತ ನಾರುವ ಜರ್ಜರಾಂಗಗಳ |
ಕರುಣಚಿತ್ರವ ಬೀದಿಬೀದಿಯ
ಲಿರಿಸಿ ಚೀತ್ಕರಿಪವರು ನಿಮ್ಮೀ
ಭರತಖಂಡದಲೆನಿಬರಿರ್ಪರೊ ಬಲ್ಲಿರೇನೆಂದ ||೧೦||

ಕೀಟಮುಕ್ಕುವ ರೊಚ್ಚೆಗೊಬ್ಬರ
ದೂಟೆಗಳ ಮಧ್ಯದಲೆ ಗುಡಿಸಲ
ಮಾಟವಿಲ್ಲದೆ ರಚಿಸಿ ಹಸುಕುರಿಯೆಮ್ಮೆ ಕೋಳಿಗಳ |
ಸಾಟಿಯುಹ ಜೀವನವನವುಗಳ
ಕೂಟದಲೆ ತೇಯುತಿಹ ದೀನರ
ನೋಟ ತಾರದೆ ನಿಮಗೆ ಕಂಬನಿಗಳನು ಗಡಮೆಂದ ||೧೧||

ಮೆಱೆವ ನಚ್ಚಿನ ಭಾರತಾಂಬೆಯ
ಕರುಳಮಕ್ಕಳು ನಿಮ್ಮ ನಿಜಸೋ
ದರರು ಹಲಕೋಟಿಜನ ಹಸಿವಿಂ ರೋಗಶೋಕದಲಿ |
ನರಳಿ ಚೀತ್ಕರಿಸುತಿರೆ ಪಲವೆಡೆ
ತಿರಿದು ಹೊಟ್ಟೆಯ ತುಂಬಿ ಗಳುಹುತ
ತಿರುಗಲಾತ್ಮಂ ನಲಿವನೇ ಗಡ ಸಾಧು! ನಿಮಗೆಂದ ॥೧೨॥

ಇಲ್ಲವಾತ್ಮನ ತಣಿಪಮಾರ್ಗವಿ
ದಲ್ಲ ವಿಶ್ವಾತ್ಮನಲಿ ತನ್ನನೆ
ಸಲ್ಲಿಸಲು ತನ್ನಂಗದಂತೆಯೆ ಭೇದಭಾವಿಸದೆ |
ಎಲ್ಲರಂ ತನ್ನವರಗೈವುದೆ
ಬಲ್ಲವರ ನಡೆ ಸಾಧು! ತನ್ನಂ
ತೆಲ್ಲರಂ ಕಾಂಬವನೆ ವಂದ್ಯನು ಕೇಳಿ ನೀವೆಂದ ॥೧೩॥

ಕಂಗಳಿಂ ಪನಿಜಾರಿ ನಿಜಮುಖ
ದಿಂ ಗದಿಸಿ ಸಂತವಿಪ ನುಡಿಯಾ
ಲಂಗಿಸುತ್ತಿರೆ ವಕ್ಷ ಹಸ್ತಗಳಿಂಪ ಸ್ಪೈದಡವಿ |
ಹಿಂಗಿಸಾರ್ತರ ಶೋಕವಂ ನಲಿ
ವಂ ಗಳಿಪ ಮಾನವನೆ ಜಗದೀ
ಶಂಗೆ ತಾ ಪ್ರಿಯತಮನು ದಿಟವೆಂದನು ದಯಾನಂದ ॥೧೪॥

ಆವನಂಬಕ ದೀನ ಮಾನವ
ದೇವದರ್ಶನಗೈಯುತಿರ್ದ್ದಪು
ದಾವ ಪುರುಷನ ಕರ್ಣವಾರ್ತರ ಗೋಳನಾಲಿಪುದು |
ಆವನಾಕರ ತುತ್ತನೌಷಧ
ವೀವುದೋ ಹಸಿದರ್ಗೆ ರುಗ್ಣರಿ
ಗಾ ವಿನುತನೇ ದೈವಭಕ್ತನು ಕೇಳಿ ನೀವೆಂದ ||೧೩||

ದೇವ ಪೂರ್ಣತೃಪ್ತನಾತಗೆ
ನೀವು ಕೊಟ್ಟಪಿರೇನ ನಿಮ್ಮಿಂ
ದಾವುದನುಮೀಶ್ವರನು ಕಾಮಿಸ ತನ್ನಸಲುವಾಗಿ |
ನೀವವನ ಮಕ್ಕಳಲಿ ಭೇದವ
ಭಾವಿಸದೆ ಸೇವೆಯನು ಸಲ್ಲಿಸೆ
ದೇವಸೇವೆಯದಾಯ್ತು ತತ್ವವಿದೆಂದನಾ ಯತಿಪ ||೧೬||

ಆದಕತದಿಂದಾತ್ಮದೇವನ
ನಾದರಿಸೆ ಕಾಮಿಸುವ ಮಾನವ
ಸಾಧು ! ಪರಜನದುಃಖವೇ ನಿಜದುಃಖ ಪರಸುಖವೇ |
ಆದ ಸುಖ ತನಗೆಂದು ಪರರಲ
ಭೇದನಾಗಿರಬೇಕವನೆ ಪರ
ಮಾದರಾರ್ಹನು ದೈವಭಕ್ತನೆನುತ್ತ ಮುನಿಯೊರೆದ ||೧೭||

ಆ ಮಹಾಮುನಿಪಾಲನಾತ್ಮ
ಪ್ರೇಮವಿಧಿಗಳನಿಂತು ಬಣ್ಣಿಸೆ
ರೋಮಹರ್ಷದಿ ಸಾಧುಯತಿಭೂಕಾಂತನಡಿಗೆರಗಿ |
ಹೇ ಮಹಾತ್ಮರೆ ತಮಗೆ ಬೋಧಿಸೆ
ಕಾಮಿಸಿರ್ದಪರಾಧ ಮನ್ನಿಸಿ
ರೀ ಮರುಳನಂಪರಸಿರೆನ್ನುತ ಗೈದ ಬಿನ್ನಪವ ||೧೮||

ಸ್ನೇಹಪರಯುತಿ ಬಳಿಕ ವೇದದ
ಕಾಹಿಗೋಸುಗ ಕಾಸಗಂಜಕೆ
ವಾಹನದಿ ಬಂದೊಂದು ಶಾಲೆಯ ತೆರೆದುನೇರ್ಪಡಿಸಿ |
ಊಹೆಗಂದದ ತೆರದಿ ಶ್ರಮಿಸುತ
ಶಾ.ಹಬಾಜಪುರಕ್ಕೆ ನಡೆತಂ
ದೈಹಿಕಾಮುಷ್ಮಿಕ ಸಮನ್ವಿತ ಧರ್ಮ ಬೋಧಿಸಿದ ||೧೯||

ಶಾಹಬಾಜಪುರಸ್ಥ ಭಕ್ತರಿ.
ಗಾಹಿತವ ಬೋಧಿಸುತ ಸತ್ಯಕೆ
ಕಾಹುಗುಟ್ಟಿರೆ ಕಾಸಗಂಜಿನ ಮಂದಿಗಳು ಬಂದು |
ತ್ರಾಹಿ ! ವಿರಜಾನಂದದೇವನು
ದೇಹಬಿಟ್ಟಿಹನೆನಲು ಯತಿಪರ
ನೋಹೊ ! ಶೋಕವನೆನುತ್ತ ಸಿಂಪಸು ಜೊಂಬೆಯುಂದದಲಿ ||೨೦||

ಹೆತ್ತವರನೊಡಹುಟ್ಟಿದವರನು
ಹತ್ತಿರದ ನಂಟರನು ಬಿಡುವಲಿ
ಚಿತ್ತಗುಂದದ ಸಕಳಸಂಪದಗಳನು ಯೌವನದಿ |
ಕಿತ್ತು ಬಿಸುಡುವಲಿನಿತುಮುಳುಕದ
ಮತ್ತಮಾನಸನಿಂದು ನಿಜಗುರು
ಸತ್ತುದಕೆ ರೋದಿಸಿದನೆಳಮುಗುವಂತೆ ಭರದಿಂದ ||೨೧||

ಮುಗ್ಗರಿಪ ಶಿಶುವೆನ್ನನೊಬ್ಬನ
ತಗ್ಗುತಿರೆಯಲಿ ಬಿಟ್ಟು ಗುರುವರ
ಸಗ್ಗಕೇರಿದಿರೇಕೆ ಲೋಕದಿ ನೋಡಲೆನ್ನವರು |
ಒಗ್ಗರೊಬ್ಬರುಮಕಟ! ಜ್ಞಾನದ
ಬುಗ್ಗೆಯೊಣಗಿತೆ! ಕೆಟ್ಟೆನೆನ್ನುತ
ಲುಗ್ಗುದನಿಯಲಿ ನುಡಿದು ಮುನಿವರನೊಂದು ಬಿಸುಸುಯ್ದು

ಎಲ್ಲವನು ವಿಸ್ಮರಿಸಿ ತನ್ನದು
ದೆಲ್ಲವನು ಕಿತ್ತೊಗೆದು ಬಾಳನೆ
ಸಲ್ಲಿಸಿದೆ ನಿಮ್ಮಡಿಗೆ ಕೇವಲ ನಿಮ್ಮನೊಬ್ಬರನೇ |
ಎಲ್ಲವೆಂದೆಣಿಸಿರ್ದೆ ಗುರುವರ!
ಬಲ್ಲವರ ದೊರೆ! ನನ್ನನೊಬ್ಬನ
ನಿಲ್ಲಿಬಿಟ್ಟೋಡಿದಿರೆ! ಹಾ! ಹತಭಾಗ್ಯನಾನೆಂದ ||೨೩||

ನೀವು ಹೊರಿಸಿದ ಸಾಲವಂ ಗುರು
ದೇವ! ನಾನೀ ಜನ್ಮಮೊಂದರ
ಲಾವಪರಿ ತೀರಿಪೆನೊ ನಿಮ್ಮುಪಕಾರಭಾರವನು |
ಆವ ತೆರವಿಳಿಸುವೆನೊ ನನ್ನೀ
ಜೀವನವೆ ನಿಮ್ಮಡಿಯ ಕರುಣಾ
ಭಾವನಾಪ್ರತುಮೆಯಲೆ! ಮರೆದಪೆನೆಂತೊ ಹಾ! ಎಂದ ||೨೪||

ಮರುಗಿ ನಸುಹೊತ್ತಿಂತು ಯತಿ ಭೂ
ವರನು ದಿಟಮೀ ವ್ಯಾಕರಣ ಭಾ
ಸ್ಕರನು ಮುಳುಗಿದನೆಂದು ಪ್ರಜ್ಞಾಚಕ್ಷುಪಿಂಗಿದುದು |
ಗುರುಮರಣದಿಂದೆಸುತ ತನ್ನಯ
ಸೆರಗಿನಿಂ ಕಂಬನಿಯನೊರೆಸುತ
ತಿರುಹಿದಂ ನಿಜಮೊಗವ ಶೂನ್ಯದಕಡೆಗೆ ಶೋಕದಲಿ ||೨೫||

ಇರಲು ವೇಶ್ಯಾವ್ಯಸನಿಯಾಗಿಹ
ತರುಣನೊಬ್ಬನ ತಂದೆ ಪುತ್ರನ
ಪರಮಹಂಸನ ಬಳಿಗೆ ಕಳುಹಲ್ಸ್ನೇಹಿತರ ಕೂಡೆ |
ಧರೆಯುಲಘು ದುರ್ವ್ಯಸನವೆಲ್ಲವು
ನಿರುಕಿಸಿದೊಡದರಲ್ಲಿ ವತ್ಸರೆ!
ಪರಮ ಪಾತಕ ಸೂಳೆಗಾರಿಕೆಯೆಂದನಾ ಯತಿಪ ||೨೬||

ಸೂಳೆಗಾರಿಕೆಯಿಂದ ಮನೆತನ
ಕಾಳಹುದು ಧನಸಂಪದಂಗಳು
ಕಾಳಹುದು ಪತ್ಸರಿದ ತನ್ನಾರೋಗ್ಯಭಾಗ್ಯ ನಹ
ಕಾಳಹುದು ಪುರುಷಾರ್ಥ ಬುದ್ಧಿಯು
ಕಾಳಹುದು ಸದ್ಧರ್ಮ ಕರ್ಮಾದಿ
ಸೂಳೆಗಾರನ ಚಿತ್ತ ನಿಲದೆಂದೊರೆದನಾ ಯತಿಪ ||೨೭||

ಪೇಳಿಸಿತನಾ ತರುಣರಿಗೆ ಮುನಿ
ಪಾಳಿ ಜನಿಸಲು ಬಾಲೆಯೊಬ್ಬಳು
ಸೂಳೆಗಾರಿಕೆಯಿಂದ ಮುಂದವಳೇನ ಗೈದಳೆಸ |
ಕೇಳಿದಾಕ್ಷಣ ಯುವಕರಿನ್ನೇಂ
ನಾಳೆಯುಹಳೆನೆ ಯತಿಪ ನಿಜಸುತೆ
ಸೂಳೆಯಪ್ಪುದ ನೋಡಲಾಪನು ಬಯಪ ಗಡಮೆಂದ ||೨೮||

ನುಡಿಗಳಿವು ಕೂರಲಗಿನಂದದಿ
ಬಿದಪೆ ವಕ್ಷದನಿರಿಯೆ ಕಂಪಿಸಿ
ಕೆಡೆದು ಯತಿಪದಗಳಲಿ ವೇಶ್ಯಾಸಕ್ತನಹ ತರುಣ |
ಬಿಡುವೆ ತಮ್ಮಡಿಯಾಣೆಯೀದು
ರ್ನಡೆಯನೆನ್ನುತ ರೋದಿಸಲು ಪ್ಮೈ
ದಡವಿ ಮುನಿವರ ಮತಿಯಿದೇ ಸ್ಥಿರವಿರಲಿ ಹೋಗೆಂದ ||೨೯||

ಉಲ್ಲಸಿತಯತಿಕಾಯಶಕ್ತಿಯು
ಸೊಲ್ಲನಾಲಿಸಿ ತತ್ಪುರದ ಹಲ
ಮಲ್ಲರಾ ಮುನಿವರನ ನೋಡುವ ಭಾವದಿಂಬಂದು ।
ಅಲ್ಲಿ ನದಿಯಲಿಮಿಂದು ನಿಜಕರ
ದಲ್ಲಿ ಕೌಪೀನವನು ಒಡಿದು ಪ್ರ
ಫುಲ್ಲವದನದಿ ಬರ್ಪ ಯತಿಪನ ಕಂಡು ಬಾಗಿದರು ॥೩೦॥

ತನ್ನ ಶಕ್ತಿಯ ಪರಿಕಿಸುವ ಬಗೆ
ಯನ್ನುರದಿ ತಾಳಿದುದನೂಹಿಸಿ
ತನ್ನೊಳಗೆ ನಗುತಾ ತಪೋಧನನೆಡದ ಕೈಯಿಂದ ।
ತನ್ನ ಕೌಪೀನವನು ಹಿಂಡುತ
ಲಿನ್ನು ಬಲದಭಿಮಾನವಿರ್ಪರು
ಬನ್ನಿ ನೀರ್ಪನಿಯೊಂದನಿದರಿಂ ಪೊರಮಡಿಸಿರೆಂದ ॥೩೧॥

ಸಿಕ್ಕಿಸದ ಹಸ್ತಗಳ ಮಧ್ಯದಿ
ತಿಕ್ಕಿ ತಾನೊಬ್ಬೊಬ್ಬನುಂ ಬೆಮ
ರಿಕ್ಕಿ ಮೇಲುಸಿರಡರಿ ಜಲಬಿಂದುವದು ಹೊರಬರದೆ ।
ಅಕ್ಕಟೆತ್ತಣ ಬಲವಿದೆನ್ನುತ
ಸೊಕ್ಕಳಿದು ಕೌತುಕದಿ ಮಲ್ಲರು
ಬೆಕ್ಕಸಂಬಡೆ ನಕ್ಕು ಯತಿವರ ಹರಸಿ ಮುನ್ನಡೆದ ॥೩೨॥

ಜ್ಞಾನಧನ ಹಲಪುರಗಳಲಿ ಧ
ರ್ಮಾನುರಾಗವ ಬೆಳಸಿ ಪಯಣದಿ
ಕಾನಪುರಕ್ಕೈತಂದು ದುರ್ಗಾಲಾಲಸವನದಲಿ ।
ತಾನಿಳಿದು ದುರ್ನೀತಿಗಳ ಬಿಗು
ಮಾನದಿಂ ಖಂಡಿಸುತ ಮತದಭಿ
ಮಾನವಂತರು ಬರಲಿ ವಾದಿಸಲೆಂದು ಘೋಷಿಸಿದ ॥೩೩॥

ಅದುವರೆಗೆ ನಡೆತಂದ ಮತಗಳ
ನದುಮಿ ವೈದಿಕ ಧರ್ಮಪಸರಿಪ
ಸದಯ ಯತಿಪನ ಘೋಷವಾತಕೆ ಕಾನಪುರದಜನದ ।
ಉದಧಿ ಕದಡಿತು ಗುರುಮಹಂತರು
ಬುಧರು ಬ್ರಹ್ಮಾನಂದ ಮೊದಲಹ
ರಿದನು ಸಹಿಸದೆ ಚಿಂತೆಗೊಂಡರು ಯತಿಯಭಂಗಿಸಲು ॥೩೫॥

ಧನಿಕರಿರ್ವರು ಹಲವು ಲಕ್ಷದ
ಧನವ ಮುಟ್ಟಿಸಿ ಶಿವಗೆ ವಿಷ್ಣುವಿ
ಗೆನುತ ದೇಗುಲವೆರಡ ಕಟ್ಟಿಸಿ ಮುನಿಪಗವನರುಹೆ ।
ಜನದ ಮೌಢ್ಯದ ಮೂಲಮೀಕೃತಿ
ತಿನಿಸೆ ಹಲಸ್ವಾರ್ಥಿಗಳ ಕೂಡಿಸಿ
ಮೊನೆತುದೇನ್ಸೆ ಧರ್ಮವೆಂದನು ಯತಿ ದಯಾನಂದ ॥೩೫॥

ಜನಕೆ ವಿದ್ಯಾದಾನಗೈವೊಡೆ
ಧನವ ವ್ಯಯಿಸಿವರಾಗದೇನೈ
ತಿನಲಿರದ ಸಿರ್ಗತಿಕಮಾನವ ಕುಲವನುದ್ಧರಿಸೆ ।
ಧನವನಿತ್ತರೆ ಪಾಪಮುಪ್ಪುದೆ
ಜನುಮಭೂಮಿಯು ಕಲೆಯ ವರ್ಧಿಸೆ
ಮನಬರದೆ ನಿಮಗೆಂದು ಕೇಳ್ದನು ಯತಿ ದಯಾನಂದ ॥೩೬॥

ಎಂದ ನುಡಿಯಿಂ ಕನಲಿ ಬ್ರಹ್ಮಾ
ನಂದ ಮೊದಲಹರೊಡನೆ ಪತ್ರನ
ದಿಂದ ಲಕ್ಷ್ಮಣಶಾಸ್ತ್ರಿ ಹಲಧರಬುಧರ ವಾದಿಸಲು ।
ತಂದರಾ ಯತಿವರನ ಬೀಡಿಗೆ
ಬಂದುದಿಪ್ಪತ್ತೈದುಸಾವಿರ
ಮಂದಿ ಜಿಲ್ಲಾಧೀಶ ಥೇನನ ನಾಯಕತ್ವದಲಿ ॥೩೭॥

ಎತ್ತಿವಾದವ ಹಲಧರಂ ತಾಂ
ಬಿತ್ತರಿಸಿ ಗುರುಮೂರ್ತಿ ಪೂಜೆಯು
ಮತ್ತತನದಿಂದೇಕಲವ್ಯನು ಬಾಣವಿದ್ಯೆಗಳ ।
ವಿತ್ತಗಳಿಸಿದನೆಂದು ಭಾರತ
ವೊತ್ತಿಸಾರಿರೆ ವಿಗ್ರಹಾರ್ಚನ
ಮತ್ತದೆಂತುನಿಷಿದ್ಧಯತಿಗಳೆ ಪೇಳಿ ನೀವೆಂದ ॥೩೮॥

ಎಂದ ನುಡಿಗಳನಾಲಿಸಿ ದಯಾ
ನಂದ ಮೂಢನದೊಬ್ಬ ಮಾಡಿದ
ನೆಂದರದೆ ವಿಧಿಯಾಯ್ತೆ ನಾವನುಸರಿಸಲವ ಋಷಿಯೇ |
ನಿಂದು ಯತ್ನಿಸೆ ವಿದ್ಯೆಯಾತಗೆ
ಬಂದುದಲ್ಲದೆ ವಿಗ್ರಹಾರ್ಚನ
ದಿಂದಲಲ್ಲೈ ವೇದವಾಕ್ಯವ ತೋರಿ ನೀವೆಂದ ||೩೯||

ನಸು ಸಮಯ ಕುಳ್ಳಿರ್ದ ಹಲಧರ
ಪೊಸತೆನಿಸುವೊಲ್ಮೂರ್ತಿಗಳ ಪೂ
ಜಿಸಲು ವಿಧಿಯಿಲ್ಲದೊಡಮದರ ನಿಷೇಧವಿರ್ದಪುದೆ |
ಉಸುರಿವೇದಂಗಳಲಿ ನೀವೆನ
ಲಸಮ ವಿದ್ಯನು ಪೋಗು ಪಶ್ಚಿಮ
ದೆಸೆಗೆನಲು ಮೂರ್ದಿಜ್ಞಷೇಧವೆ ಸಿದ್ಧಮಾಯ್ತೆಂದ ||೪೦||

ಆಗ ಲಕ್ಷ್ಮಣಶಾಸ್ತ್ರಿ ಮುನಿಗಳೆ
ಹೋಗಲೀನುಡಿಗಳನು ಬಿಡಿರಿದು
ವಾಗ ವಿಭುಸರ್ವತ್ರವಿರ್ಪನು ಮೂರ್ತಿಯಲಿ ಕೂಡ |
ಹೇ ಗರಿಷ್ಠರೆ! ತತ್ವವಿಂತಿರ
ಲೀಗ ವಿಗ್ರಹ ಪೂಜನದಿ ದೋ
ಷಾಗಮನವೆಂತಹುದೊ ಬಣ್ಣಿಸಿರೆಂದು ಬೆಸಗೊಂಡ ||೪೧||

ಎಂದ ಲಕ್ಷ್ಮಣಶಾಸ್ತ್ರಿಗೆ ದಯಾ
ನಂದನೆಲ್ಲಿಡೆ ದೇವರಿರೆ ನೀ
ವಿಂದು ವಿಗ್ರಹವನ್ನೆ ಪೂಜಿಸಲೇಂ ವಿಶೇಷತೆಯೋ|
ಹಿಂದಿರಿಸಿ ಚೇತನನ ಜಡಗಳ
ತಂದು ಪೂಜೆಯ ಸಲಿಸಿ ಕುಳಿತರೆ
ಬಂದ ಭಾಗ್ಯವದೇನೆನಲು ಬೆಳೆದಿತ್ತು ನೀರವತೆ ||೪೨||

ಉತ್ತರಿಸದೀನುಡಿಯ ಹಲಧರ
ಮತ್ತೆ ಲಕ್ಷ್ಮಣಶಾಸ್ತ್ರಿ ಮೌನಂ
ಬೊತ್ತು ಕುಳ್ಳಿರೆ ವಿಜ್ಞಥೇನನುಹಾಶಯಂ ನಗುತ |
ಉತ್ತಮಾದರದಿಂ ನುಡಿಸಿ ಯ
ತ್ಯುತ್ತಮನ ಹಲಧರನವಂದಿಸಿ
ಹೊತ್ತುಮೀರಿದುದೆನುತ ನಡೆದನುತಾಂ ನಿಜಾಲಯಕೆ ||೪೪||

ಎದ್ದೊಡನೆ ಮಧ್ಯಸ್ಥ ಸಭೆಯಲಿ
ಗದ್ದಲಂ ಬೆಳದಿತ್ತು ಹಲಧರ
ಗೆದ್ದನೆನ್ನುತಲೊಬ್ಬನರಚಲು ತನ್ಮಹಾಸಭೆಯ |
ಸದ್ದು ನಭಕೇರಿತ್ತು ಧೂರ್ತರು
ಕದ್ದು ಕಲ್ಗಳನಿಟ್ಟಗೆಗಳಂ
ತಿದ್ದಿ ತೀಡಿದರಾಯತೀಶನ ಕಡೆಗೆ ಭರದಿಂದ ||೪೫||

ಸಲ್ಲದೊಡಮಾ ಹಲಧರನೆ ಮುಸಿ
ವಲ್ಲಭನ ಸೋಲಿಸಿದನೆನ್ನುತ
ಶಿಲ್ಲಕಡೆ ಸುಳ್ಳುಡಿಯ ಪರಡಲು ಪಕ್ಷಪಾತಿಗಳು |
ಸಲ್ಲದುದನಾಡಿದರೆ ಸಲುವುದೆ
ಗೆಲ್ಲವೆತ್ತ್ತಣದಕಟ ಸುಳ್ಳಿಗೆ
ಬಲ್ಲಜನರಿದಕಂಡು ಚಿಂತಿಸರೆಂದನಾ ಯತಿಪ ||೪೫||

ಇನಿತರಿಂ ಮುದಗೊಳ್ಳದಾ ಸ
ಜ್ಜನರು ಧೇನನಮುನೆಗೆ ನಡೆತಂ
ದಸಿತ ವರ್ಣಿಸಲಾತ ಪತ್ರಿಕೆಯೊಂದ ತಾಂರಚಿಸಿ |
ಮುನಿಯೆ ಶಾಸ್ತ್ರಾರ್ಥದಲಿ ಗೆದ್ದನು
ನೆನೆಯೆ ಹಲಧರಗಾಯ್ತು ಸೋಲಿಂ
ದೆನುತ ಬರೆದನು ಮೂರ್ತಿ ಸಾಸಿರಬಿತ್ತು ನದಿತಳಕೆ ||೪೬||

ತೀರದಲ್ಲಿಹ ಮಂದಿರದ ಪೂ
ಜಾರಿಯೊಬ್ಬನು ಯತಿಕುಟಿಯಬಳಿ
ಸಾರಿ ದಿನವುಂ ಬೆಳಗಿನಲಿ ಕೆಡದಿರ್ದ ನೇಮದಲಿ |
ಕಾರಿಮುನಿಸಂ ಮುನಿಪನಿಗೆ ಹಲ
ವಾರು ನಿಂದೋಕ್ತಿಗಳ ಸಲ್ಲಿಸಿ
ನೇರದಿಂ ಸುರನದಿಗೆ ಮಿಾಯಲು ನಡೆವನಾ ಬಳಿಕ ||೪೭||

ಒಂದುದಿನ ಸಂಜೆಯಲಿ ಭಕ್ತರ
ಸಂದಣಿಗೆ ತಾನಿತ್ತೊಡಂ ಹಲ
ವೊಂದುರುಚಿಕರ ಭಕ್ಷ್ಯಮಿಕ್ಕಿರಲಾರಿಗಿದನೀವೆ ।
ಎಂದು ಯತಿವರ ಯೋಚಿಸುತ್ತಿರೆ
ಸಂದ ನೇಮದಿ ತನ್ನನನುದಿನ
ನಿಂದಿಸುವ ಪೂಜಾರಿ ಕಂಡನು ಸುಳಿವ ಕಂಗಳಿಗೆ ||೪೮||

ಪರಮ ಗೌರವದಿಂದಲವನನೆ
ಕರೆದು ಭಕ್ಷ್ಯವನಿತ್ತು ದಿನವುಂ
ಕರುಣೆಯಿಂ ಸಂಜೆಯಲಿ ಬಿಜಯಂಗೈಯಿರೀಕಡೆಗೆ ।
ಬರಿದೆ ಸಂಕೋಚಿಸಲು ಬೇಡಿರಿ
ತೆರತೆರದ ತಿಂಡಿಗಳ ಕೊಳಿರೆಂ
ದೊರೆದನಾ ನಿರ್ವೈರಭಾವದ ಸಂತಭೂಕಾಂತ ||೪೯||

ಬಂದು ತಾನೇಳೆಂಟು ದಿನಪರ
ಮಂದದಿಂ ಬಗೆಬಗೆಯ ಭಕ್ಷ್ಯವ
ನೊಂದಿ ಪೋದೊಡಮೊಂದುದಿನವುಂ ಮುನಿಪ ತಾಂಗೈದ ।
ನಿಂದೆಗಳ ಮಾತೆತ್ತದಿರಲಪ
ನೊಂದು ಮನ್ನಿಸಿ ತಪ್ಪನೆನುತಳ
ಲೆಂದೊ ಮರೆತುದ ನೆನೆಯಬೇಡೆಂದನು ದಯಾನಂದ ||೫೦||

ಹೊಗಳಿಕೆಗೆ ಪ್ಪೈಯುಬ್ಬಿ ಸಲಿಯುದೆ
ತೆಗಳಿಕೆಗೆ ಮನಕುಗ್ಗಿ ಮುಳಿಯದೆ
ಹೊಗಳುವವರಂ ತೆಗಳುವವರಂ ಸಮದಿ ಸಿಟ್ಟಿಸುತ ।
ಸಿಗಗೊಡದೆ ಚಿತ್ತವನು ಭಕ್ತರೊ
ಳಗಪುಳಾ ಸರಸಿಯೊಳಗಂ ಚಿ
ದ್ಗಗನದೊಳಗಂ ಪರಮಹಂಸನು ಮೆರೆದನೀತೆರದಿ ॥೫೧॥

ಆ ತಪೋಧನನಿಂತು ದೇವನ
ದೀ ತಟದಿ ಸಂಚರಿಸಿ ತಾನವ
ಧೂತ ದಶೆಯಲಿ ನಿಂತು ವೈದಿಕ ಧರ್ಮಬೋಧಿಸುತ ।
ಘಾತಕರ ರಕ್ಷಕರ ಸಹ ಸಂ
ಪ್ರೀತಿಸುತ ರಂಜಿಸಿರೆ ಜಗವಿ
ಖ್ಯಾತ ಕಾಶೀಬುಧರ ಪರಿಕಿಪ ಭಾವ ಮೂಡಿಮುದ ॥೫೨॥

ಚಿತ್ರಮಿಂತೆನೆ ಮೆರೆದ ಕಾಶೀ
ಪತ್ತನದಿ ಹರಡಿರ್ಪ ಮೌಢ್ಯದ
ಕತ್ತಲಂ ಸಂಹರಿಸಿ ಭರದಿಂ ವೇದ ಸಾಗರವ ।
ಬಿತ್ತರಿಸಿ ಸದ್ಧರ್ಮದಲೆಗಳ
ಸುತ್ತಲುಂ ಚೆಲ್ಲುವೊಡೆ ಸದ್ಗುಣ
ವಿತ್ತಪ ಸುಧಾಕರನು ಬೆಳಗಿದ ಹರಸೆ ಪರಮಾತ್ಮ ॥೫೩॥

॥ ಇಂತು ಹನ್ನೊಂದನೆಯ ಸಂಧಿ ॥



# ಹನ್ನೆರಡನೆಯ ಸಂಧಿ

ಸೂಚನೆ—ಆ ದಯಾಕರ ವಿಗ್ರಹಾರ್ಚನ
ವೇದಬಾಹಿರವೆಂದು ತೋರ್ದನು
ವಾದದಲಿ ತದ್ವಾರಣಾಸಿಯ ಬುಧರ ಮಧ್ಯದಲಿ ||

ಒಂದೆಮನದಿಂ ಕೇಳಿ ತರಳರೆ
ಮುಂದೆಪಯಣಂ ಗೈಯುತ ದಯಾ
ನಂದ ಸರಸತಿ ರಾಮನಗರಕೆ ರಾತ್ರಿಗೊಂದುದಿನ |
ಒಂದು ಹೆಂಟೆಯನಿಟ್ಟು ಶಿರದಡಿ
ಗೊಂದು ವಿಟಪದಕೆಳಗೆ ನಿದ್ರಿಸ
ಲೆಂದು ಮಲಗಿದ ತಟನಿತೀರದ ಮಳಲರಾಶಿಯಲಿ ||೧||

ಇರುಳು ರಾಜಗೃಹದ ಪಕ್ಕದ
ಮರದ ಕೆಳಗೀತೆರದಿ ನಿದ್ರಿಸಿ
ಮರುದಿವಸ ರವಿಯುದಿಪಮುನ್ನಮೆ ಮಿಂದು ಗಂಗೆಯಲಿ |
ಬೆರೆದ ಚಿತ್ತದಿ ಮುಚ್ಚಿಕಂಗಳ
ಪರಮ ದೇವೋಪಾಸನಾಸ್ತುತಿ
ನಿರತನಾದನು ಮತ್ತನೊಲ್ಮೈಮರೆದು ಮುನಿನಾಥ ||೨||

ಮಿತ್ರ! ದೇವವಿಚಿತ್ರ! ನಾಮುಪ
ವಿತ್ರ! ಸದ್ಗುಣಚಿತ್ರ! ವಿಭುಸ
ರ್ವತ್ರ! ನೀನೆಸವಿತ್ರ! ಸತ್ಯಚರಿತ್ರ! ನಿಗರ್ಾತ್ರ |
ಪಿತ್ರ! ಸನ್ನುತಿಪಾತ್ರ! ಭಕ್ತ್ತತ
ಸುತ್ರ! ವಿಶ್ವವಿಧಾತ್ರ! ವೀತಗು
ಣತ್ರಯನೆ ಸಲಹೆಂದು ನುತಿಸಿದನಾ ದಯಾನಂದ ||೩||

ಆ ನದೀತೀರದಲಿ ಶುಭಕೌ
ಪೀನವೊಂದನು ಧರಿಸುತಂತ
ರ್ಧ್ಯಾನಚೇತನನಾಗಿ ದಿವ್ಯಾನಂದ ಸಾಗರದಿ |
ತಾನೆತಾನಾಗಾಳ್ದು ತೇಲುವ
ಪೀನವಕ್ಷನ ಸುಂದರಾಸ್ಯಾ
ಜಾನುಬಾಹುವ ಕಂಡು ನೆರೆದುದು ದರ್ಶಕಸ್ತೋಮ ||೪||

ಸ್ತೋತ್ರ ಮುಗಿದಾನಂದ ಬಾಷ್ಪಂ
ನೇತ್ರದಿಂದುದುರುತಿರೆ ಪುಳಕಿತ
ಗಾತ್ರ ನಗೆಮೊಗದಿಂದಲೆಲ್ಲರ ನುಡಿಸಿ ವಂದಿಸುತ |
ಆ ತ್ರಿಗುಣಗಣರಹಿತ ವಿಶ್ವಪಿ
ಧಾತ್ರನೊಬ್ಬನ ನುತಿಸಿ ವೇದವೆ
ಮಾತ್ರ ಧರ್ಮಸ್ರೋತವಿದನೀವರಿಯಿರೆಂದೊರೆದ ||೫||

ಅಗ್ರಜ್ಯೈತನ್ಯನನು ವರ್ಜಿಸಿ
ಪಗ್ರಹಂಗಳ ಪೂಜಿಪುದು ಕ
ಟ್ಟಗ್ರ ಮೂಢತೆ ವೇದಶಾಸ್ತ್ರವಿರುದ್ಧವದಬಿಡಿರಿ |
ನಿಗ್ರಹಿಸಿ ಚಿತ್ತವನು ನೀವು ಸ
ಮಗ್ರಮನ್ನತಿಗಳಿಸಿರಿದು ಬಾ
ಹ್ಯಗ್ರಹಣ ಪಿರಿದಲ್ಲ ಗೂಢವಗ್ರಹಿಸಿ ನೀವೆಂದ ||೬||

ವೇದವೇತ್ತನು ವಿಜ್ಞಸನ್ನುತ
ಪಾದ ಸನ್ಯಾಸೀಪ್ರಪಂಚ ಪಿ
ನೋದ ಬಂದಿಹನೆಂಬ ಸಂಗತಿಕೇಳಿದಾಕ್ಷಣಮೇ |
ಆದರದಿ ಕಾಶೀ ನರೇಶ್ವರ
ನಾ ದಯಾನಂದಂಗೆ ಭೋಜನ
ದಾದಿಗಳ ಚಾರುವ್ಯವಸ್ಥೆಯಗೈದನನುವಿಂದ ||೭||

ರಾಮನಗರದಲಿಂತು ಹಲದಿನ
ವಾ ಮುನೀಶ್ವರ ನೆಲಸಿ ಕಾಶೀ
ಧಾಮದಲ್ಲಿನ ಪಂಡಿತರ್ಗಳ ಶಾಸ್ತ್ರಸಂಪದದ |
ನೇಮ ನಿಷ್ಠಾಪರಿಚಯವನು
ದ್ದಾಮ ಭಕ್ತರ ಕಡೆಯಿನರಿಯು
ತ್ತಾ ಮಹಾಪುರಿಗೈದೆ ಬಗೆದನು ವೇದಘೋಷಣಕೆ ||೮||

ಈ ಪುರಿಯೆ ಸಂಪೂರ್ಣಭಾರತ
ದೀ ಪುನೀತಾವನಿಯ ಸದ್ಧ
ರ್ಮ್ಮಪಗಾ ಸ್ರೋತಮಲೆ ಶಾಸ್ತ್ರಜ್ಞಾನ ಸಂಗ್ರಹಕೆ |
ಈ ಪುರಮೆ ನೆಲೆಯಲ್ತಿದಂ ವೇ
ದೋಪದೇಶದಿ ನಿಲಿಸೆ ಧರ್ಮದ
ಕಾಪು ದಿಟಮಹುದೆಂದು ಯತಿಪಂ ಚಿಂತಿಸಿದ ಮನದಿ ||೯||

ಚಿಂತಿಸೀಪರಿ ಕಾಶಿನಗರಿಗೆ
ಸಂತಸದಲೈತಂದು ಸಾತ್ವಿಕ
ಸಂತ ಮಾಧವಸಿಂಹಸಾನಂದೋಪಪನದೊಳಗೆ |
ನಿಂತು ಧರ್ಮವಿವಾದದೊಳ್ಜನ
ರಂತರಂಗವ ಬೆಳಗಿಸುತ್ತಿರೆ
ಸಂತತಂ ಹಗಲಿರುಳ ಬಗೆಯದೆ ಬಂದಪುದು ಮಂದಿ ||೧೦||

ದೇವ ಮಂದಿರಗಳಲಿ ಪಂಡಿ
ಭೂವರರ ಮನೆಗಳಲಿ ಶಾಸ್ತ್ರ
ವಿದಾವಸಥ ಮಠಗಳಲಿ ವಿದ್ಯಾರ್ಥಿಗಳ ಕೂಟದಲಿ |
ಮೀವ ಘಟ್ಟಂಗಳಲಿ ಪೇಟೆಯ
ಲಾವಡೆಯೊಳಂ ಕಾಶಿಯಲಿ ಕ
ರ್ಣಾವಗತಮಾಗುತ್ತಲಿರ್ದುದು ಮುನಿಪ ಶುಭನಾಮ ||೧೧||

ಸಾಜದಿಂದೊಂದುದಿನ ಕಾಶೀ
ರಾಜನಿಗೆ ಸನ್ಯಾಸಿ ಜಗದಧಿ
ರಾಜ ಸತ್ಯಾಸತ್ಯನಿರ್ಣಯಗೈಯಲೀಪರಿಯು ।
ರಾಜಪಂಡಿತರೊಡನೆ ವಿಗ್ರಹ
ಪೂಜೆ ಮೊದಲಹ ವಿಷಯದೊಳ್ಮರಿ
ಮೂಜದಂತೆನ್ನೊಡನೆ ವಾದವ ರಚಿಸಿ ಸೀವೆಂದ ॥೧೨॥

ವೀರಯತಿಪನ ಖಂಡನಾತ್ಮಕ
ಘೋರಗರ್ಜನದಿಂದಲೇ ಗಂ
ಭೀರ ಚಿಂತಾಗ್ರಸ್ತನಾಗಿಹ ನೃಪತಿ ತತ್ಕ್ಷಣವೇ ।
ಪೌರಪಂಡಿತಮುಖ್ಯರೆಲ್ಲರ
ನೇರದಿಂ ಬರಮಾಡಿ ಧರ್ಮೋ
ದ್ಧಾರಕೋಸುಗ ಯತಿಯ ಸಂಗಡ ವಾದಿಸುವುದೆಂದ ॥೧೩॥

ಜನಪನಿಂತೆನೆ ಪಂಡಿತಾವಳಿ
ಮುನಿಪನೋಪ್ರತಿಯೊಂದು ನುಡಿಗಂ
ನನಗಿದಕೆ ವೇದಪ್ರಮಾಣವ ತೋರಿರೆಂದವನು ।
ಅನಿತನುಂ ಸಂಗ್ರಹಿಸಲೋಸುಗ
ದಿನವೆಮಗೆ ಹದಿನೈದು ಬೇಕೆಂ
ದೆನೆ ನರೇಶ್ವರನೊಪ್ಪಿತೆಂದನು ಬಿಗಿದ ಒಗೆಯಿಂದ ॥೧೪॥

ಆಱುಮುದುರಿಸಲಾರದಂದದ
ಪಾರವಿದ್ಯಾರ್ಣವರ ಕಾಶೀ
ಪೌರವಿಬುಧೋತ್ತಮರ ಸೇನಾಶಿಬಿರದೊಳನುಗ್ಗಿ ।
ಧೀರ ಗುರ್ಜರ ಯತಿಯದೊರ್ವ್ವಸ
ವಾದೊ ಕಾದುವನೆಂಬವಾರ್ತೆ ಸ
ಪೋರನೊಡನೆಯೆ ಸುಳಿದುದೆಲ್ಲೆಡೆ ತನ್ಮಹಾಪುರದಿ ||೧೫||

ಒಕ್ಕಲಿತ ಶಿಷ್ಯರನು ಹಲವರು
ಮಕ್ಕಳಂ ಹಲಬುಧರು ಕಳಿಪರು
ಪ್ರೋಕ್ಕ ಯತಿವಿದ್ಯಾ ಮಹಾವಾರಿಧಿಯ ತಳವರಸೆ ।
ಸಿಕ್ಕಿ ಪ್ರಶ್ನಾವಳಿಯ ಹೊಡೆತಕೆ
ಮುಕ್ಕರಿಸಿ ಹಿಮ್ಮೊಗದೆ ಬರ್ಪುದು
ಸೊಕ್ಕಳಿದು ಜನ ವೇದಶಾಸ್ತ್ರಾರ್ಣವನ ಸೇರ್ದೊಡನೆ ||೧೬||

ಇದಿ ಪಂಡಿತಗಣ ಸುಪಾವನ
ಪಾದದಲಿ ಬಿನ್ನವಿಸಲು ಚತು
ರ್ವೇದ ಷಡ್ವೇದಾಂಗಮಲ್ಲದೆ ಋಷಿಮನುಸ್ಮೃತಿಯ ।
ಆದರಿಪೆವಿದಱೊಡನೆ ನಾಲ್ಕುಪ
ವೇದ ವೇದೋಪಾಂಗವಾರಸು
ಪಾದದೊಳ್ ಸ್ವೀಕರಿಪೆವೆಂದನು ನಗುತಲಾ ಯತಿಪ ||೧೭||

ಬಂದು ಪುರರಕ್ಷಕನು ಕೊನೆಗಾ
ನಂದವಾಟಿಕೆಯಲ್ಲಿ ವಿಬುಧ
ವೃಂದ ಶಾಸ್ತ್ರಾರ್ಥವನು ಕಾರ್ತಿಕ ಶುದ್ಧ ದ್ವಾದಶಿಯ |
ಸಂದ ಪುಂಗಳವಾರದಲಿ ನಲಿ
ವಿಂದಗೈದಪುದೆಂಬ ನಿರ್ಣಯ
ವಂ ದಯಾನಂದಾವನೀಶರ ಪುತದಿ ಘೋಷಿಸಿದ ||೧೮||

ದಾನದಕ್ಷಿಣೆಯಿಂದ ಬುಧ ಸ
ಮ್ಮಾನಗೈಯುವ ಭಾರವಂ ಕಾ
ಶೀನರೇಶ್ವರನೀಶ್ವರೀನಾರಾಯಣನು ಹೊರಲು |
ಜ್ಞಾನಿಗಳು ಶಾಸ್ತ್ರಾರ್ಥ ರಣದಭಿ
ಮಾನಿಗಳು ಚಿಂತಿಪರು ವೀರ ತ
ಪೋನಿಧಿಯ ಸೋಲಿಸುವ ಯುಕ್ತಿವಿಶಾಲಜಾಲಗಳ ||೧೯||

ಹೊತ್ತು ಕೌಂಕುಳಲಿಟ್ಟು ಪುಸ್ತಕ
ವೆತ್ತಿ ವೇದೋಕ್ತಿಗಳ ಸಂಕಲಿ
ಸುತ್ತಲಾ ವ್ಯಾಕರಣಸೂತ್ರಗಳಚ್ಚು ಹೊಂದಿಸುತ |
ಹತ್ತುವಿಧ ವೇದಾಂತದುಕ್ತಿಯ
ಬಿತ್ತರಿಸಿ ಮನೆಮನೆಗೆ ತಮ್ಮಲಿ
ಸುತ್ತುವರು ಸಂಭ್ರಮದಿ ಬುಧಜನ ಸಂದಿಸಂದಿಯಲಿ ||೨೦||

ಏಸುಜನ ವಾದಿಗಳೊ ಬಂದಿಹ
ರ್ಪೆ ಸುರುಳಿ ಶಾಸ್ತ್ರಗಳ ಬಿಚ್ಚಲು
ಘಾಸಿಪಟ್ಟಿಪರಲ್ಲ ಕಾಶೀಪುರಿಯ ಪಂಡಿತರು ।
ಈಸುದಿನ ವಾದಿಸಿದವರನಾ
ಯಾಸವಿಲ್ಲದೆ ಗೆಲ್ದರೀ ಸ
ನ್ಯಾಸಿಯೇ ದೊರೆಯಪ್ಪನೆಂದವು ಮಂದಿ ಸೋಜಿಗದಿ ॥೨೧॥

ಇತ್ತ ಪಂಡಿತವರ್ಗವೀಪರಿ
ಹೊತ್ತು ಪುಸ್ತಕಗಳನು ಸುಳಿದಿರ
ಲತ್ತ ಧೂರ್ತವೃಂದ ಶಾಸ್ತ್ರಾರ್ಥದ ಮಹಾಸಭೆಯ ।
ವುತ್ತಿ ಯತಿಪನ ಕಲ್ಲು ಕೋಲ್ಗಳಿ
ನೆತ್ತಲುಂ ಬಡಿದೆಂತು ಹರಿವುದೊ
ನೆತ್ತರೆನ್ನುತ ಗುಣಿಸುತಿರ್ದರು ರೀತಿನೀತಿಗಳ ॥೨೨॥

ದುಷ್ಟರೀಪರಿ ಯತ್ನಿಪುದ ಕಂ
ಡಿಷ್ಟನಾ ಬಲದೇವ ಸಭೆಯಲ
ನಿಷ್ಟ ಧೂರ್ತರದೆನಿಬರೋ ಬಂದಪರು ತಮ್ಮಡಿಗೆ ।
ಕಷ್ಟ ಭಾವಿಪರೆಂದು ಭಯಸಂ
ದಷ್ಟನಾಗಿರೆ ನಗುತ ಯತಿವರ
ನಿಷ್ಟಕೇ ನೀನಿಂತು ಚಿಂತಿಸಬಹುದೆ ಕೇಳೆಂದ ॥೨೩॥

ಸತ್ಯಭಾಸ್ಕರನುದಿಸಿ ಜಗದಲ
ಸತ್ಯ ತಿಮಿರವ ಕೆಡಿಸನೆಂಬೀ
ನಿತ್ಯ ತತ್ವವ ಯೋಗಿಜನಗಳು ಮರೆಯದಿರ್ಪ ಪತ್ಸ |
ಸತ್ಯರೂಪಾತ್ಮಕನ ಭಕ್ತರ
ನಿತ್ಯ ದೇಹವನುಳಿಸಲೆಂದುಂ
ಸತ್ಯ ಮುಚ್ಚಿಡಲಾರರ್ಪ ಬಲದೇವ ಕೇಳೆಂದ ||೨೪||

ಆವನಿಗೆ ಪರಸೇವೆಯೇ ನಿಜ
ಜೀವನವೊ ಪರಮಾತ್ಮನಾಜ್ಞೆಯ
ನಾವನಾವಗಮತುಳ ಧೈರ್ಯದಿ ಪಾಲಿಸುವನಾತ |
ಆವನಿಂದಂಜುವನೊ ಗಡ ಬಲ
ದೇವ ಕಾಲಕೆ ನೋಡಿಕೊಳ್ಳುವೆ
ನಾವತಹ ಸಾಹಿಗರನಂಜದಿರೆಂದನಾ ಯತಿಪ ||೨೫||

ವಾದಕೋಸುಗಮೆಂದು ನಿಶ್ಚಿತ
ವಾದ ದಿನವರೆ ಪಾಠಶಾಲೆಗೆ
ಪೋದ ವಿದ್ಯಾರ್ಥಿಗಳು ಸಾಲ್ಗಳ ರಚಿಸಿ ವೈಭವದಿ |
ಬೀದಿಬೀದಿಯ ತಿರುಗಿ ತಮತಮ
ಗಾದ ಗುರುಜನ ಬಿರುದಪಾಠ ನಿ
ನಾದದಿಂ ಬೆಳಗಿನಲೆ ಸೀಳುತಲಿರ್ದರಂಬರವ ||೨೬||

ಬೂದಿ ಮೈಗಳ ಸಾಧುಗಳು ಜಡೆ
ಗೂದಲಿನ ಜೋಗಿಗಳು ಕಾವಿಯ
ತೇದ ಸನ್ಯಾಸಿಗಳು ವಿಧವಿಧ ವರ್ಣದಂಬರದ |
ಮಾದರಿಯ ಬೈರಾಗಿಗಳು ಸಹ
ಹಾದಿಹಾದಿಯ ತಿರುಗಿ ಸಾಲ್ಗಳ
ಲೈದೆ ಘೋಷಿಸುತಿರ್ದರಾದಿನ ಮತನಿನಾದಗಳ ||೨೭||

ಇಕ್ಕೆಲದಿ ಸಾಲ್ಗಟ್ಟಿ ಮೇಲ್ಗಗ
ನಕ್ಕೆ ತಾಗುವ ತೆರದಿ ಗುರುಗಳ
ಲಕ್ಕ ಬಿರುದಾವಳಿಯ ಸಾರುತ ಬಿಜ್ಜಣಂಗಳನು |
ಇಕ್ಕಿ ಚಾಮರ ಛತ್ರವಂ ಪಿಡಿ
ದುಕ್ಕಿ ಶಿಷ್ಯರು ನಡೆಯುತಿರೆ ಪ
ಲ್ಲಕ್ಕಿಗಳ ಸಿಂಗರಿಸಿ ನಡೆದರು ಪಂಡಿತೋತ್ತಮರು ||೨೮||

ಗಂಟೆಜಾಗಟೆ ಶಂಖನಾದಗ
ಳೆಂಟು ದಿಕ್ಕಿನ ಗುಡಿಗಳಿಂ ಹೊರ
ವಂಟು ಗಗನವ ಸೀಳುತಿರೆ ಪಂಡಿತರು ಪಾಮರರು |
ಗಂಟಲೊಣಗುವ ತೆರದಿ ವಿಜಯದ
ಗಂಟಯಾಚಿಸಿ ವಿಭುಗೆ ಲೋಭವ
ನಂಟಿಸಲು ಕಾಣ್ಕೆಗಳ ತೆರುತಿರೆ ನಕ್ಕನಾ ಯತಿಪ ||೨೯||

ಕ್ಷೌರಕರ್ಮವನೆಸಗಿ ತಟನಿಯ
ಸೀರಿನಲಿ ನೆರೆಮಿಂದು ದಿನದೊಲು
ಧಾರಣಂಗೈದೊಂದು ಕೌಪೀನವನು ಬೆಳಗಿನಲಿ ।
ಭೂರಿ ಭಕ್ತಿಯ ಭಾವದಿಂ ಭೂ
ಭಾರಧರ್ತನೆ ! ಸತ್ಯದ್ಯುತಿಯಂ
ತೋರು ನರಕುಲಕೆಂದು ಯತಿಪಂ ಪ್ರಾರ್ಥನೆಯಗೈದ ॥೩೦॥

ಹೊತ್ತುವರೆ ಶಾಸ್ತ್ರಾರ್ಥಸಮರಕೆ
ಬಿತ್ತರಿಸಿ ತಂತಮ್ಮ ಯಶಗಳ
ನೊತ್ತರಿಸುತಾನಂದವಾಟಿಕೆಗಂದು ಪಂಡಿತರು ।
ಚಿತ್ತದಳುಕಂ ಮೇಲೆ ತೋರದೆ
ಚಿತ್ತವಿಸುತಿರೆ ಮುನಿಪನೆಳನಗೆ
ಯೊತ್ತಮೊಗದಿಂ ಕೈಯಜೋಡಿಸಿ ಸ್ವಾಗತಿಸುತಿರ್ದ ॥೩೧॥

ಆನೆಗಳ ಮೇಲಡರಿ ಕೆಲವರು
ಮೇನೆಗಳ ಮೇಲಿನ್ನು ಕೆಲವರು
ಮಾನದಿಂದುದ್ಘೋಷಿಸುತ್ತಿಹ ಬಿರುದು ಬಾವಲಿಯ ।
ಗಾನ ವಿಭವದಿ ಯತಿಪನಿರ್ದು
ದ್ಯಾನವಂ ಸೇರಿದರು ಸುತ್ತಲು
ಮಾನವಾಂಬುಧಿ ಘೋರ್ಗರೆಯುತಿರೆ ಪಂಡಿತೋತ್ತಮರು

ಅಸಮ ವಿರಜಾನಂದ ಪಂಡಿ
ಪ್ರಸರ ಭೂಪರ ಶಿಷ್ಯ ಸದ್ವೇ
ದಸರಸೀಚರ ಹಂಸ ಪ್ರಾತಃಸ್ಮರಣಸುತಿಪಾತ್ರ |
ಸುಸರಳಾತ್ಮಕ ಸಕಳಸದ್ಗುಣ
ವಿಸರ ಶ್ರೀ ಸ್ವಾಮೀ ದಯಾನಂ
ದ ಸರಸತಿಯಿವರೆಂಬ ಘೋಷಣಮಾದುದಾದಿಯಲಿ ||೩೩||

ಗುರುವಿಶುದ್ಧಾನಂದ ಯತಿಭೂ
ವರರಿವರು ಪಂಡಿತರು ತಾರಾ
ಚರಣರಿವರೇ ಬಾಲಶಾಸ್ತ್ರಿಗಳಿವರು ಮಾಧವರು |
ನಿರುಕಿಸಿರಿ ಬುಧವಾಮನಾಚಾ
ರ್ಯರನು ತಾವೆಂದೆನುತ ಪಂಡಿತ
ಪರಿಚಯುವ ಪೌರಜನಪೇಯಲು ಮುಗಿಪ ಕೈಮುಗಿದ ||೩೪||

ಮಧ್ಯದಲಿ ಭೂವರನು ಕುಳಿತನು
ತದ್ಯತಿಪ ಬಲಗಡೆಗೆ ವಾದದ
ಲುದ್ಯಮಿಪ ಪಂಡಿತನಿಗೆಡಗಡೆ ಪೀಠ ರಂಜಿಸಲು |
ವಿದ್ಯೆಯಧಿಪರಿಗೆಲ್ಲ ಮುಂಗಡೆ
ಗುದ್ಯತಾಸನಗಳಿರೆ ತತ್ಕೃತ
ವಿದ್ಯ ಸಭೆಯಲಿ ಸೇರ್ದರವರವತ್ತ್ಯದು ಸಾಸಿರವು ||೩೫||

ಓಪಿ ಕೇಳಿರಿ ಬಾಲಕರೆ ಸರ
ದೇವತಾಸ್ತುತಿ ಮುಗಿಯೆ ಶುಭಶಕು
ನಾವಳಿಯ ನಿಟ್ಟಿಸುತ ತಾರಾಚರಣ ಪಂಡಿತನು |
ನೇವರಿಸಿ ಪೇಲೇಳೆ ಮಹತಿಸ
ಭಾವನಧಿ ಭೋರ್ಗರೆಯೆದೊಮ್ಮೆಗೆ
ತೀವ ಜಯಘೋಷದಲಿ ಹುರಿಮುಂಬಿಸುವ ನಾದವಲ ||೩೬||

ಬಂದ ತಾರಾಚರಣನಂ ಯತಿ
ವಂದಿಸುತ ವೇದಪ್ರಮಾಣವ
ದಿಂದು ಮಾನ್ಯವೆ ನಿಮಗೆನಲು ನಸುನಗುತ ಪಂಡಿತನು |
ಸಂದ ವರ್ಣಾಶ್ರಮದ ಧರ್ಮಾದಿ
ನಿಂದರಿಗೆ ವೇದಪ್ರಮಾಣವು
ದೆಂದುಮಲ್ಲವಮಾನ್ಯವೆನೆ ಯತಿರಾಜನಿಂತೆಂದ ||೩೮||

ನಿಮ್ಮ ಮತವಿಂತಿರಲು ವೇದದೊ
ಳೊಮ್ಮೆತೋರಿಸಿ ಮೂರ್ತಿಪೂಜೆಗೆ
ಸಮ್ಮತಿಪ ಮಂತ್ರವನದಾಗದಿರಲ್ಕೆ ವೇದದೊಳು |
ಸಮ್ಮತಿಯೆ ಸಿಗದೆಂದು ನೀವೀ
ಗೊಮ್ಮನದಿ ಜನರೆದುರಿಗೊಪ್ಪಿರಿ
ನಮ್ಮ ನುಡಿಗುತ್ತರಿಸಿರೆಂದನು ಯತಿದಯಾನಂದ ||೩೯||

ಬಂದು ಮಧ್ಯದಿ ಯತಿವಿಶುದ್ಧಾ
ನಂದ ಸ್ವಜನಾಸಿದ್ಧಿ ಕಾರಣ
ದಿಂದಲನುಮಾನಿತ ಜಗತ್ತಿನ ಕಾರಣವದಿಲ್ಲ ।
ಎಂದುದೀ ವ್ಯಾಸೋಕ್ತಿಯಿದ ನೀ
ನಂದು ವೈದಿಕವೆನುತ ಸಿದ್ಧಿಸಿ
ರೆಂದೊರೆಯೆ ವಿಷಯಾಂತರವಿದೆಂದೊರೆದನಾಯತಿಪ ॥೩೯॥

ಎಂದ ಮುನಿಪಗೆ ಗುರುವಿಶುದ್ಧಾ
ನಂದನಾದೊಡದೇನು ಗೊತ್ತಿರ
ಲಿಂದೆಮಗೆ ಪೇಳೆನಲು ನಿರುಕಿಸಿ ನಾನು ಪುಸ್ತಕದಿ ।
ಓಂದುಮುಂದನು ನಿಮಗೆ ಬಂದೀ
ಸಂದೆಗವ ಪರಿಹರಿಸಲಾಗವು
ದೆಂದು ಯತಿವರನೆನೆ ವಿಶುದ್ಧಾನಂದನಿಂತೆಂದ ॥೪೦॥

ಎಲ್ಲವುಂ ಯತಿವರನೆ ನೆನಪಿನೊ
ಳಿಲ್ಲದಿರೆ ಶಾಸ್ತ್ರಾರ್ಥಮೆಸಗುವೊ
ಡಿಲ್ಲಿಗೇಕ್ಕೈತಂದೆ ಗಡಯೆನುತೊರೆಯೆ ಕಾಶಿಗುರು ।
ಬಲ್ಲಮುನಿವರ ನಿಮಗೆ ಶಾಸ್ತ್ರಗ
ಳೆಲ್ಲವುಂ ನೆನಪಿಹುದೆ ಪೇಳಿರೆ
ನಲ್ಲಗುವಿನಿಂ ಯತಿವಿಶುದ್ಧಾನಂದನಹುದೆಂದ ॥೪೧॥

ಮುನಿಪನಾಕ್ಷಣ ಸತ್ಯಪಿಂತಿರ
ಲೆನಿತು ಧರ್ಮದಲಕ್ಷಣಂಗಳೊ
ನನಗೆ ತಿಳುಹಿಸೆನೆ ವಿಶುದ್ಧಾನಂದ ವೇದದಲ್ ।
ಎನಿತುಫಲಯುತ ಕರ್ಮವಿರ್ದಪು
ದನಿತು ಧರ್ಮವೆಸರಿಯೆನಲ್ಯತಿ
ಜನಪ ಶಾಸ್ತ್ರದೊಳುಕ್ತಲಕ್ಷಣವೆನಿತೊ ತಿಳುಹೆಂದ ॥೪೨॥

ಕೂಡೆಕಾಶೀಯತಿಯು ಶಾಸ್ತ್ರದಿ
ನೋಡೆ ಲಕ್ಷಣವೊಂದೆಯಿಹುದೆಂ
ದಾಡೆ ಧರ್ಮಕೆ ಹತ್ತು ಲಕ್ಷಣವೆಂದು ಶಾಸ್ತ್ರಗಳು ।
ಕೂಡಿ ನುಡಿದಪುವೆಂದು ಯತಿವರ
ನಾಡೆ ಪೇಳ್ದನು ಕಾಶಿಯತಿಯದ
ನೀಡಿಸುತ್ತಲದಾವ ಶಾಸ್ತ್ರವೊ ತೋರು ನಮಗೆಂದ ॥೪೩॥

ಭರದಿ ಮನುವಿನ ಹತ್ತು ಲಕ್ಷಣ
ವೆರೆದ ಧರ್ಮವ ತಿಳಿಪಶ್ಲೋಕವ
ನರಿಯಿರೇ ತಾವೆಂದು ಯತಿಪಂ ಶ್ಲೋಕಮುಚ್ಚರಿಸೆ ।
ಗುರು ವಿಶುದ್ಧಾನಂದ ಮೂಗಿಗೆ
ಬೆರಳನೊಯ್ಯುತೆ ಮೌನದಿಂ ಕು
ಳ್ಳಿರಲು ಮುಂದಕೆ ಬಾಲಶಾಸ್ತ್ರಿಯು ಬರುತಲಿಂತೆಂದ ॥೪೪॥

ನಾವು ಶಾಸ್ತ್ರಗಳೆಲ್ಲ ಓದಿಹೆ
ವೇ ವಿಷಯದಲಿ ಕೇಳಲಿದ್ದರೆ
ನೀವು ನಮ್ಮನು ಕೇಳಿರೆಂದಾ ಪಂಡಿತನು ಪೇಳೆ |
ಆವಿನುತಯತಿ ಬಹಳ ಲೇಸಾ
ಯ್ತೋವಿ ಪೇಳಿರಧರ್ಮಲಕ್ಷಣ
ಯಾವುದೆನೆ ಬುಧ ಬಾಲಶಾಸ್ತ್ರಿಯು ಬೆಕ್ಕಬೆರಗಾದ ||೪೫||

ಒಬ್ಬ ಓಂಜರಿದೊಡನೆ ಮತ್ತೆ
ನ್ನೊಬ್ಬನೀಪರಿ ಮುಂದಕೈತಂ
ದುಬ್ಬಿ ಹಲಚಣದೊಳಗೆ ಒಮ್ಮೆಟ್ಟುತಿರೆ ನಾಯಕರು |
ಅಬ್ಬರಿಸಿ ಬುಧರೆಲ್ಲ ವೇದದ
ಕಬ್ಬದೊಳ್ ಪ್ರತಿಮಾಪದಂತಾ
ನೊಬ್ಬದಿಯೊಳುಂ ಸಿಕ್ಕದೇ ಪೇಳೆಂದು ಕೂಗಿದರು ||೪೬||

ವೇದದೊಳ್ಪ್ರತಿಮಾಪದಂ ಕಂ
ಡೈದುವುದು ದಿಟವೆಂದು ತಾಪಸ
ಭೂಧವಂ ಸಮ್ಮತಿಸಲಂತಿರೆ ನೀವು ಖಂಡನವ |
ಗೈದಪಿರದೇಕೆಂದು ಬುಧಜನ
ವಾದಿಸಿತು ಮೂರ್ತ್ಯರ್ಚನದ ವಿಧಿ
ವೇದದೊಳಗಿಲ್ಲೆಂದು ನುಡಿದನು ಯತಿದಯಾನಂದ ||೪೭||

ಓಂದೆ ಸರಿದಿರಲಿಲ್ಲ ವಿಬುಧ
ನೃಂಪತಟ್ಟನೆ ಬಂದು ಮಂತ್ರವ
ದೊಂದನುಚ್ಚರಿಸುತ್ತ ಪಂಡಿತಮಾಧವಾಚಾರ್ಯ |
ಸಂದಪೂರ್ತಕೆ ಮೂರ್ತಿಪೂಜೆಗೆ
ಹೊಂದುವರ್ಥವನೇತಕೆ ದಯಾ
ಸಂದಯತಿಗಳೆ ಮಾಡಬಾರದು ಪೇಳಿ ನೀವೆಂದ ||೪೮||

ಆ ನುಡಿಗೆ ಯತಿಪಾಲನರ್ಥವ
ಸಾನುನಯ ಬಿತ್ತರಿಸಿ ಕೂಪೋ
ದ್ಯಾನ ಕೆರೆಮೊದಲಪ್ಪಭಾವನೆ ಪೂರ್ತಶಬ್ದದಲಿ |
ತಾನು ಸಿದ್ಧಿಪುದಿದನುಳಿದು ನೀ
ವೇನೆಗೈದರು ಮೂರ್ತಿಪೂಜೆಯ
ನೀನುಡಿಯ ಮೇಲಿಂದ ಸಾಧಿಸೆ ಸಾಧ್ಯವಿಲ್ಲೆಂದ ||೪೯||

ಈನುಡಿಗೆ ನಸುಹೊತ್ತು ಮಾಧವ
ಮೌನದಲಿ ಕುಳ್ಳಿರ್ದು ಬಳಿಕ ತ
ಪೋನಿಧಿಯೆ ವೇದದಲಿ ನೀವು ಪುರಾಣಶಬ್ದವನು |
ಧ್ಯಾನಿಸಿರ್ಪಿರೆ ಪೇಳಿರೆನಲಾ
ಜ್ಞಾನಧನಯತಿ ಈಪದದಸಂ
ಧಾನ ವೇದದಿ ಹಲವುಕಡೆಯಿಹುದೆಂದ ನಯದಿಂದ ||೫೦||

ಈತೆರದೊಳುತ್ತರಿಸಿ ನಯದಿಂ
ದಾ ತಪೋಧನ ವೇದಗಳೊಳೀ
ಮಾತಿಗರ್ಥ ಸನಾತನಂ ಭಾಗವತ ಮೊದಲಾದ |
ನೀತಿಬಾಹ್ಯ ಪುರಾಣ ಚಯವು
ಲ್ಲೈ ತಿಳಿಯಿರೆಂದರುಹೆ ಮೌನದಿ
ಸೋತು ಹಿಂದಕೆ ಸರಿದುಕುಳಿತನು ಮಾಧವಾಚಾರ್ಯ ||೫೧||

ಒದಗೆ ಪ್ರಕರಣಮುನಿಷತ್ತಿನ
ತದಿತಿಹಾಸ ಪುರಾಣವೆಂಬೀ
ಪದಯುಗದೊಳಿತಿಹಾಸವೆಂಬೀ ಶಬ್ದವಪುರಾಣ |
ಅದೆ ವಿಶೇಷಿಪುದೆಂದು ಯತಿವರ
ಪವದಿ ಬಣ್ಣಿಸಲುಪನಿಷತ್ತಿನ
ಲೊದಗದೀಪರಿ ವಾಕ್ಯವೆಂದನು ವಾಮನಾಚಾರ್ಯ ||೫೨||

ವಾಮನನ ನುಡಿಕೇಳಿ ಗರ್ಜಿಸು
ತಾ ಮುನೀಶ್ವರನುಪನಿಷತ್ತಿನ
ಲೀ ಮೊದಲು ನಾನೊರೆದುದಿಲ್ಲಿಂದೀಗ ಬರೆದುಕೊಡಿ |
ನೇಮದಿಂದಿಹುದೆಂದು ನಾಂಬರೆ
ದೀ ಮಹಾಸಭೆಗೀವೆಸಾರದು
ಸ್ವಾಮಿ ಸತ್ಯವೊ ಗೆಲ್ದರವರೇ ಬರೆದುಕೊಡಿರೆಂದ ||೫೩||

ವಾದಿಗಜಕೇಸರಿಯು ಗರ್ಜಿಸೆ
ಕ್ರೋದು ಕೊಬ್ಬಿತು ಮೌನ ವೇರಿದ
ಗಾಧಪಂಡಿತಮಂಡಳದಲೊರ್ವಸಪಬಾಯ್ಬಿಡಡೆ ।
ಈ ದೊರೆಯ ಸಾಸಿಗನು ಕಾಶಿಯೊ
ಳ್ವೈದುದಿಲ್ಲಿದುವರೆಗೆಸುತ ಮ್ಮೈ
ಗಾದುನಿಂತರು ಸೂಜಿ ಬಿಳ್ದರೆ ಕೇಳುವಂದದಲಿ ||೩೪||

ಮರಳಿ ಗರ್ಜಿಸಿ ಯತಿಪರ ವ್ಯಾ
ಕರಣ ಕಲಿತವರಿರಲು ನಿಮ್ಮೊಳು
ತೆರೆಯಿಸ್ವೆ ಬಾಯ್ಗಳನು ನೀವ್ ವ್ಯಾಕರಣ ಶಾಸ್ತ್ರದಲಿ ।
ಇರುವುದೇಸ್ವೆ ಕಲ್ಮಸಂಜ್ಞೆಯ
ದರುಹಿರೆಂದೆನೆ ಬಾಲಶಾಸ್ತ್ರಿಯು
ಪರಮ ಹಂಸಗೆ ನುಡಿದನೀಪರಿ ಮೆರೆದು ಗರ್ವವನು ||೩೫||

ಎಲ್ಲಿಯುಂ ವ್ಯಾಕರಣದಲಿ ಗ್ವೈ
ದಿಲ್ಲ ಯತಿಪರೆ ಕಲ್ಮಸಂಜ್ಞೆಯ
ನಿಲ್ಲದೊಡಮುದಕೊರ್ವ ಟೀಕಾಕಾರನೊಂದುಕಡೆ ।
ಸಲ್ಲಿಸಿಹನಪಹಾಸ್ಯವೆಂದೆನ
ಲೆಲ್ಲಿ ತೋರಿಸಿರೆಂದು ಯತಿಭೂ
ವಲ್ಲಭಂ ಗರ್ಜಿಸಿದ ಶಾಸ್ತ್ರಿಯು ತಳೆದ ಮೌನವನು ||೩೬||

ಮತ್ತೆ ಕವಿಮದು ಮೌನ ಸೂಕ್ತಿ
ವತ್ತುಜನ ಪಂಡಿತರು ನಾಸಿಕ
ಕಿತ್ತು ಬೆರಳನು ಕುಳಿತರರವತ್ತ್ಯದು ಸಾಸಿರದ |
ಚಿತ್ತ ಕಾಶಿಯಪಂಡಿತರು ಬೆ
ನ್ನಿತ್ತು ಸರಿದರೆ ಯತಿಜನೇಶ್ವರ
ನೆತ್ತಣಿಂ ಬಂದವನೊ ದೈವೀಪುರುಷನೆನುತಿತ್ತು ||೫೭||

ಬಿಟ್ಟ ಕಂಗಳ ತೆರೆದ ಬಾಯ್ಗಳ
ತೊಟ್ಟ ಚಿಂತೆಯ ನಾಸಿಕದ ತುದಿ
ಗಿಟ್ಟ ಬೆರಳಿನ ಬಿಗಿದ ಮೌನದ ಬಿಸಿಲ ಬೇಗೆಯುಲಿ |
ಸುಟ್ಟ ಹೂಗಳ ಬೆಡಗಿನಿಂ ಕಂ
ಗೆಟ್ಟ ಮುಖಗಳ ಸೆಣಸಿ ಧೈರ್ಯಂ
ಗೆಟ್ಟ ಬುಧಜನಕುಳ್ಳಿರಲು ಸಭೆ ವಿಭವಗುಂದಿಮುದು ||೫೮||

ತಾಸು ನಾಲ್ಕರವರೆಗೆ ಪಂಡಿತ
ಭೂಸುರೋತ್ತಮರೊಬ್ಬರೊಬ್ಬರು
ಜೈಸೆ ಯತಿಪನ ಬಗೆದು ಘುಮುಕುತಶಾಸ್ತ್ರಸಂಗರಕೆ
ಆ ಸುಗುಣಿಯಾ ಜ್ಞಾನಬಾಣಕೆ
ಘಾಸಿವಡೆಯುತೆ ಹಿಂದೆ ಸರಿದರು
ಮೀಸಲೆಂಬಂತಿತ್ತು ಯತಿಪಗೆ ವಿಜಯಸಿರಿಪೀಠ ||೫೯||

ಎನಿತೊ ಯತ್ನಿಸಿ ಕೂಡ ಪಂಡಿತ
ಜನಕೆ ಜಯವಾಗದಿರೆ ದುರ್ವಂ
ಚನದ ಬಳದಿಂ ಮುನಿಯ ಗೆಲ್ಲುವದೊಂದು ಬಗೆಯಿಂದ |
ಸನಿಸನಿಯಕ್ಕೈತಂದು ತಮ್ಮೊಳ
ಗನುನಯದಿ ಚರ್ಚಿಸುತ ತಮದಿಂ
ಕೊನೆಗೆ ಲಾಭವ ಗಳಿಸೆ ನಿಶ್ಚಯಿಸಿದರು ಪಂಡಿತರು ||೬೦||

ಕತ್ತಲಾಗುತಲಿತ್ತು ಸಂಜೆಯೊ
ಳಿತ್ತಲುಂ ಮಾಧವನು ಹಾಳೆಯ
ನೆತ್ತಿ ವೇದವಿದೆನುತ ಯಜ್ಞಂಗೈದು ಯಜಮಾನ |
ಹತ್ತನೆಯ ದಿವಸದಿ ಪುರಾಣವ
ಚಿತ್ತವಿತ್ತಾಲಿಸುವುದೆಂದಿಹು
ದೆತ್ತಣ ವಿಶೇಷಣವೊ ಯತಿವರ ಪೇಳಿ ನೀವೆಂದ ||೬೧||

ಎನುವ ಪಂಡಿತ ಮಾಧವಗೆ ಯತಿ
ಜನಪ ಪಾಠವನೋದಿರೆನೆ ವಂ
ಚನಕೆ ನಿಂತಾ ಕಾಶಿ ವಿಬುಧರು ತಾವೆ ನಿರುಕಿಸಿರಿ |
ಎನುತ ನುಡಿದರು ನಯದಿ ತದ್ಯತಿ .
ಜನಪ ಕೈಯೊಳಗದನು ಪಿಡಿಯುತ
ಲನುವಿನಿಂದಾದ್ಯಂತವರಿಯಲು ನೋಡತೊಡಗಿದನು ||೬೨||

ದೀಪ ಬಂದುದು ಸಕಳಯತಿಕುಲ
ದೀಪ ತುದಿಮೊದಲರಿಯೆ ಪತ್ರವ
ನೃಪನಿಂದೋದುತ್ತಲಿತ್ತಣವಾಕ್ಯವೆಂದೆನುತ |
ತಾ ಪಲವುಚಣ ಚಿಂತಿಸುತ್ತಿರೆ
ಭೂಪ ಸಮಯವಿದೆನುತ ತತ್ಕಾ
ಶೀ ಪುರಿಯ ಗುರು ಯತಿವಿಶುದ್ಧಾನಂದ ಭಾವಿಸಿದ ||೬೩||

ಮುರಿದು ಮೈಯನು ಮೇಲಕೇಳುತ
ಲವರೆ ಸಂಧ್ಯಾಸಮಯಮೊದಗಿತು
ತರುಣ ಯತಿಯನು ಕಷ್ಟಪಡಿಸುವುದಿನ್ನು ತರವಲ್ಲ |
ತೆರಳುವೆವು ನಾವೆಂದು ಕಾಶಿಯ
ಗುರುವಿಶುದ್ಧಾನಂದನಾಕಳಿ
ಸಿರಲು ಕುಳ್ಳಿರೆನುತ್ತಯತಿ ಕೈವಿಡಿದು ಪೇಳಿದನು ||೬೪||

ಆರರೆ ತಮ್ಮಯ ಸಮದ ಪಂಡಿತ
ವರರು ನಿರ್ಣಯಗೈಯದೀಪರಿ
ತೆರಳುವುದು ತರವಲ್ಲವೆಂದಾ ಯತಿಪ ಕೈವಿಡಿಯೆ |
ಗುರು ವಿಶುದ್ಧಾನಂದ ನೀವ್ಕು
ಳ್ಳಿರಿ ಶಾಂತಿಯಲೆಮ್ಮ ಕಾಮನೆ
ಹರಿದುದೆನ್ನುತ ನಗುತ ನೃಪತಿಗೆ ಗೈದ ಸಂಜ್ಞೆಯನು ||೬೫||

ಅರಿತು ಸಂಕೇತವನು ಕಾಶೀ
ನರಪತಿಯು ನಿಜವಿಜಯ ಘೋಷಿಸೆ
ಕರವಹೊಯ್ಯಲು ನೆರೆದ ಪಂಡಿತವರ್ಗವುನ್ಮದಿಸಿ |
ಮೊರೆವ ಜಯಜಯಕಾರನಾದದಿ
ಹರಿದು ಗಗನವ ಬಿಡದೆಯೊಮ್ಮೆಲೆ
ಕರತಳವ ಹೊಯ್ಯುತ್ತ ಮೇಲ್ಗಡೆಗೆದ್ದು ದಬ್ಬರಿಸಿ ||೬೬||

ಚಂಡ ಮಾರುತ ಜಡಿಯೆಕ್ಷುಬ್ಧಂ
ಗೊಂಡು ಭೋರ್ಗರೆವಂತೆ ಜಳನಿಧಿ
ಪಂಡಿತರ ವಂಚನೆಯ ನಿರ್ಮಿತ ವಿಜಯಘೋಷದಲಿ |
ತಂಡತಂಡದಿ ಮಿಗುವ ಮಾನವ
ಮಂಡಳಂ ಮನಮುಕ್ಕಿ ಮೊರೆದುದ
ಖಂಡಮಹಿಮನ ಮಸೆದ ಮಿಥ್ಯಾಮಾನ ಮದದಿಂದ ||೬೭||

ಕಾದು ಕುಳಿತಿಹ ಧೂರ್ತಜನ ಹಲ
ರಾ ದಯಾನಂದನೆಡೆಗೆಸೆದರು
ಪಾದುಕೆಗಳಂ ಕಲ್ಗಳಿಟ್ಟಿಗೆ ಚೂರುಗಳನೊಗೆದು |
ಪಾದಘಾತವ ಬಗೆದರುಚ್ಛಿ
ಷ್ಟಾದಿ ನಿಂದಿತವಸ್ತುವೆರಚುತ
ಮೋದಗೊಂಡರು ರಚಿತಕೋಲಾಹಲದ ಮಧ್ಯದಲಿ ||೬೮||

ಬಂದು ಯತಿಪನ ಮುತ್ತಿನಾಲ್ಕೆಡೆ
ಯಿಂದ ಬಹುತುಚ್ಛೋಕ್ತಿವಿಸರದಿ
ನಿಂದಿಸುತ ಕೈಹೊಯ್ದು ಹಾಸ್ಯವಗೈದು ಹಂಗಿಸುತ ।
ತಂದ ಕಲುಮುಷವೆರಚಿ ಛೀ ಛೀ
ಯೆಂದು ತೆಗಳುತ ನಗುತಿರಲು ಹಲ
ಮಂದಿ ಶಾಂತಿಯ ಬಿಡದೆ ಕಾಂತಿಯ ಕಿಡದೆ ಯತಿ ಮೆರೆದ

ಪಿರಹಿಚೋರರು ಹಳಿಯೆ ಚಂದಿರ
ತೊರೆವನೇ ತಿಳಿನಗೆಯ ಗೂಗೆಯು
ಜರೆಯೆ ಕಳೆಗುಂದುವನೆ ದಿನಮಣಿಯಾತ್ಮಸಂಭವರೇ ।
ಮುರೆದೊಡಂ ಕರವೆತ್ತಿ ಹರಸಳೆ
ಕರುಣೆ ಕನ್ನಡತಾಯಿ ನಸುನಗೆ
ವೆರೆದ ಮೊಗದಿಂ ಯತಿಪ ಮಂದಿಯ ಸಂತವಿಸುತಿರ್ದ ॥೭೦॥

ನಿಂದಿಪರ ವಂದಿಸುತ ಕಲ್ಲುಗ
ಳಿಂದ ತಾಡಿಸಿದವರ ಹರಸುತ
ನಿಂದು ಹಾಸ್ಯವ ಗೈವ ಮೂಢರ ಸುಖಿಸಿರೆಂದೆನುತ ।
ಒಂದಿನಿಸು ಸೌಹಾರ್ದವಂ ಬಿಡ
ದಂದು ಕೋಳಾಹಳದ ಸಭೆಯಿಂ
ಹಿಂದೆ ಬಂದನು ನಸುನಗೆಯ ಬೀರುತ ದಯಾನಂದ ॥೭೧॥

ಧರ್ಮ ಜೀಽಸಿಸಿತೆಂದು ಕೆಲವರು
ಕರ್ಮ ಫಲಿಸಿದುದೆಂದು ಕೆಲವರು
ಮರ್ಮವೇತ್ತ್ರರು ನಮ್ಮ ಕಾಶಿಯ ಬುಧರ್ನುತ ಹಲರು |
ದುರ್ಮತಿ ದಯಾನಂದ ಗಳಿಸಿದ
ಪೆರ್ಮೆ ತೀರಿದುದೆಂದು ಹಲಮನು
ಜರ್ಮರೆದು ಹಿಂದಿರುಗಿದರು ತಂತಮ್ಮ ಮನೆಗಳಿಗೆ ||೭೨||

ಗುಂಪುಗುಂಪೊಳು ನೆರೆದು ಸೊಗಸಿನ
ಪೆಂಪಿನಿಂ ದೇವಾಲಯಂಗಳೊ
ಳಂ ಪುಸಿಯ ಜಯದುತ್ಸವಂಗಳ ರಚಿಸಿ ಮೂರ್ತಿಗಳ |
ಕಂಪೊಗೆದ ಮಲರುಗಳಿನರ್ಚಿಸಿ
ಸೊಂಪು ಹರಡಿತು ಧರೆಗೆ ಧರ್ಮದ
ತಂಪು ದಕ್ಕಿತು ನಿನ್ನ ದಯೆಯಿಂದೆಂದುದಾ ಮಂದಿ ||೭೩||

ಕತ್ತುರಿಯ ಬೈತಿಟ್ಟವಾತ್ರಕೆ
ಸುತ್ತದಿರ್ಪುದೆ ಕಂಪು ಕವಿಯಂ
ತೊತ್ತು ಹಳಿದರೆ ಕವಿತೆ ಬೆಳಗದೆ ಕನ್ನಡಿಗರೊಳಗೆ |
ಮತ್ತ ಕಣ್ಮುಚ್ಚಿದರೆ ಲೋಕಕೆ
ಕತ್ತಲಪ್ಪುದೆ ಸತ್ಯ ಮುಚ್ಚಿಡ
ಲೆತ್ತಪೋಽಪುದು ಯತಿಯ ಕೀರ್ತಿಯು ಬೆಳೆದುದಾ ಪುರದಿ

ಪಕ್ಷಪಾತಿಗಳಿರದೆ ತಮ್ಮಯ
ಪಕ್ಷಗೆಲ್ದಿಹುದೆಂದು ಸಾರ್ದೊಡ
ಮಕ್ಷರಜ್ಞರು ಸತ್ಯಸಂಪತ್ಕಾಮನಾಪರರು |
ವಕ್ಷ ಯತಿಪನೆ ವಾದಸಂಗರ
ದಿಕ್ಷಮತೆಯಿಂ ಕಾದಿ ಗೆಲಿದನಿ
ಪಕ್ಷಿ ಬಲ ಕಳೆಗುಂದಿತೆಂದರು ಕಾಶಿನಗರಿಯಲಿ ||೭೫||

ಹತ್ತನೆಯ ದಿವಸದಿ ಪುರಾಣವ
ಚಿತ್ತವಿತ್ತಾಲಿಸುವುದೆಂಬುದ
ಬಿತ್ತರಿಸಿ ಯತಿಪಾಲ ಸಾಹಸಮುಳ್ಳ ಪಂಡಿತರು |
ಮತ್ತೆ ವಾದಿಸಲೆಂದು ಗರ್ಜಿಸೆ
ಚಿತ್ತಗುಂದಿದ ಬುಧರು ನಾಸ್ತಿಕ
ನೆತ್ತಣವನಿವ ನೋಡ ಬಾರದೆನುತ್ತ ಸಾರಿದರು ||೭೬||

ಎಂದ ವಿಬುಧರ ಮಾತ ಗಣಿಸದೆ
ಬಂದ ಲಕ್ಷಾಂತರರ ಚಿತ್ತದಿ
ನಿಂದ ಸಂಶಯ ತಿಮಿರವಡಗಿಸಿ ಹೃತ್ಕುಮುದ ಕುಲವ |
ಅಂದದಿಂ ನಗಿಸಿದನು ಬೀರುತ
ಮಂದಹಾಸನ ಸಂತ ವಾರಿಧಿ
ಸುಂದರ ಸುಧಾಕರನು ದಯೆಯಿಂ ಹರಸೆ ಪರಮಾತ್ಮ ||೭೭||

|| ಇಂತು ಹನ್ನೆರಡನೆಯ ಸಂಧಿ ||



# ಹದಿಮೂರನೆಯ ಸಂಧಿ

ಸೂಚನೆ——ತರುಣಬುಧ ಯುವನಜನ ಫೋಟೊ
ಗಿರರ ಭಂಗಿಸಿ ಕರ್ಮ ವರ್ಣಿಸಿ
ಕರಗಿ ತರುಣಿಗೆ ದೊರೆಯ ಕಾಣ್ಕೆಯ ಯತಿಪ ಕೈಗೊಂಡ ॥

ಕತೆಯ ಕೇಳಿರಿ ಮುಂದಕತಿಗ
ರ್ವಿತನು ರಾಮುಸ್ವಾಮಿ ಮಿಶ್ರನು
ಯತಿಯೊಡನೆ ವಾದಿಸಲು ನಾನೊಂದೇಕ್ಷಣದಲವನ ।
ಪತನಗೈದಪೆನಾದೊಡಾ ದೂ
ಷಿತನ ಕೊಳೆಮುಖನೋಡೆ ಬಂದಪು
ದತುಳ ಪಾತಕಮೆಂದು ನುಡಿದನು ಮಂದಿಗಳ ನಡುವೆ ॥೧॥

ಒಂದುದಿನ ಕೊಳೆಮುಖವನೋಡದೆ
ಯುಂ ದಯಾನಂದನನು ಗೆಲಬಹು
ದೆಂದು ರಾಮುಸ್ವಾಮಿ ಮಿಶ್ರನು ತರುಣ ಪಂಡಿತನು ।
ಒಂದು ಕಾರ್ಗತ್ತಲಿನ ರಾತ್ರಿಯ
ಲಿಂದು ನಾಂ ನಿನ್ನೊಡನೆ ವಾದಿಪೆ
ನೆಂದು ಬಹುತುಚ್ಛೋಕ್ತಿಯುಸಿರಿದನಾ ಯತೀಶಂಗೆ ॥೨॥

ನಿನ್ನೊಡನೆ ನಾಸ್ತಿಕನೆ ಸಂಸ್ಕೃತ
ವನ್ನು ನುಡಿವುದು ಕೂಡ ಪಾಪವಿ
ದನ್ನರಿತು ದೇಶೀಯ ಭಾಷೆಯ ನುಡಿವೆ ವಾದದಲಿ |
ನನ್ನೊಡನೆ ಚೂರಿಯಿದ ತಂದಿಹೆ
ನಿನ್ನು ವಾದದಿ ಸೋಲ್ದವರ ಮೂ
ಗನ್ನೆ ಕೊಯ್ದುಪೆವಿದರಿನೆಂದನು ಧೂರ್ತ ದೌಷ್ಟ್ಯದಲಿ ||೩||

ತರುಣ ಬುಧನಿಂತೆನಲು ಮೃದುಳ
ಸ್ವರದಿ ನಾವಿನ್ನೊಂದು ಶಸ್ತ್ರವ
ತರುವೆವದರಿಂ ಸೋಲ್ದವರ ನಾಲ್ಗೆಯನೆ ಕೊಯ್ದುಪೆವು |
ಬರುವ ವಾದದ ದೋಷಕೆಲ್ಲವು
ಮೆರೆವ ಜಿಹ್ವೆಯೆ ಮೂಲ ನಾಸಿಕ
ವರಿಯೆ ನಿರ್ದೋಷವಲೆ ಎಂದನು ನಗುತ ಮುನಿನಾಥ. ||೪||

ಬಳಿಕಲಿರ್ವರು ವಾದಕಿಳಿದರು
ಕಳೆಯೆ ಹಲಚಣ ಮುನಿವರನ ಪುಂ
ಜುಳದ ಸತ್ಯದಿ ತೊಳೆದ ವಾಣಿಯ ತಿಳಿಯ ಭಾವನೆಯ |
ಎಳೆಯ ಮಗುವಿನ ಪರಿಯನೀಕ್ಷಿಸಿ
ಪಳಪಳನೆ ಕಂಬನಿಗರೆದು ಬುಧ
ಕೆಳಗುರುಳಿ ಮನ್ನಿಸಿರಿ ಭಗವನ್! ಎನುತ ಯಾಚಿಸಿದ ||೫||

ಒಂದುದಿನ ಸಂಜೆಯಲಿ ಮುನಿವರ
ನಂದಮಿಗೆ ದೇವನನು ದಿವ್ಯಾ
ನಂದದಿಂ ನುತಿಸುತ್ತ ಗಂಗಾತಟದಿಕುಳ್ಳಿರಲು |
ಅಂದು ತಂಗಾಳಿಯನು ಸೇವಿಸ
ಲೊಂದುಗೂಡುತ ಹಲರುಯವನರು
ಬಂದರಾಕಡೆ ಕಂಡರೊಪ್ಪುವ ಯತಿಜನೇಶ್ವರನ ||೬||

ಅವರಿವರ ಮತವೆನದೆ ಸುಳ್ಳನು
ಸವರಿ ಸೆಣಸುವ ಸಂತನೆಂದೋ
ಪವರಿಸಿರೆ ಸಭೆಯೊಳಗೆ ಯವನರ ಮತದ ದೋಷಗಳ |
ಅವರೊಳಗೆ ಹಲಮಂದಿ ಮುನಿಭೂ
ಧವನ ಗುರುತಿಸುತರರೆ ದುರ್ಜನ
ನಿವನೆ ಪೈಗಂಬರರ ಹಳಿದವನೆಂದರುಬ್ಬೆಗದಿ ||೭||

ಮಂದಿಯವರೊಳಗಿರ್ವರೊಮ್ಮನ
ದಿಂದಲೀ ಸೈತಾನನಂ ನದಿ
ಗಿಂದೆ ಮುಳುಗಿಪೆವೆಂದು ಮುನಿಭೂವರನ ಕೌಂಕುಳಲಿ |
ತಂದುನಿಜಕರಗಳನು ಮಿಗೆಬಲ
ದಿಂದ ತೋಳ್ಗಳಹಿಡಿದು ತೂಗಿದ
ರಂದು ಯತಿಪನ ಹಿಂದುಮುಂದಕೆ ಬಿಸುಡೆ ವಾಹಿನಿಗೆ ||೮||

ಕುಂದದಿನಿತುಂ ನಗುತ ತನ್ನೊಳೆ
ಮಂದಿಗಳ ಕೈಗಳನು ಕಂಕುಳ
ಸಂದಿನಲಿ ಬಲದಿಂದಲೊತ್ತುತ ತನ್ನನಾ ಜನವು |
ಮುಂದಕೆಸೆಯುವ ಮುನ್ನ ತಾನೇ
ಚೆಂದದಿಂಚಿಗಿದೊಮ್ಮೆಮುಳುಗಿದ
ನಂದು ನದಿಯೊಳು ಯತಿಪ ಸಿಕ್ಕಿಸಿಕೊಂಡವರ ಬಿಗಿದು ||೯||

ಬಳಿಕಲಾಯತಿಪಾಲ ಧುಮುಕಲು
ಚಳಿಸಿದುದು ಜಲ ಸುಳಿಗಳೊಡ ಬೊ
ಬ್ಬುಳಿಗಳೆದ್ದುದು ಸಂಗಡದೊಳೆಳೆತಂದಮಾನವರು
ಬುಳಬುಳನೆ ನೀರ್ಕುಡಿದು ಕಂಗಳ
ಮುಳಮುಳನೆ ತೆರೆಯುತ್ತ ನಿಜಪದ
ಗಳನು ಹೊಡೆಯುತ ಮುಳುಗಿತೇಲ್ದರು ಮೇಲುಸಿರಿನೊಡನೆ ||

ಹೊಳೆಯಹೊರಗೈತಹರೆ ಯತಿಕಂ
ಕುಳಲಿ ಸಿಲುಕಿದ ತಮ್ಮಕೈಗಳ
ನೆಳೆಯಲಾರರು ಯತಿಪನಂ ಸಹ ಮೇಲೆತಂದವರು |
ತಳಕೆಯೇಜಗ್ಗುವನು ಮಂದಿಗ
ಳುಳಿವಮಾರ್ಗವೆಪೊಳೆಯದಿರೆ ಬಲು
ಬಳಲಿ ಜಳಜಳಮುಳುಗುತಿರ್ದರು ಹೊಳೆಯ ಜಳತಳಕೆ ||೧೧||

ಆ ತಪೋಧನ ತನ್ನ ಸಳಿತಕೆ
ಸೋತುಮುಂದಿಗಳಿವರು ಶೋಕದಿ
ನಾ ತಟನಿಯೊಳಿಸಾಯಲಿರುವುದಕಂಡು ರಾಜವಲಿ |
ಕಾತರಿಸ ನಿಜಚಿತ್ತ ದಯೆಯಿಂ
ಪಾತಕಿಗಳಂ ಸಡಲಿಸಲು ತಟ
ನೀತಟವ ಸೇರಿದರು ಮೋಲುಸಿರಂದ ಕಸರಂದ ||೧೨||

ಬಂದುಕೂಲಕೆ ಮೇಳಕೆ ದಯಾ
ನಂದ ಪುಸ್ತಕವೆತ್ತಿ ಹೂಡೆದವೆ
ವೆಂದು ಕಲ್ಗಳನೆತ್ತಿ ಕರದಲಿ ಪಾಪಪೀಡಿತರು |
ನಿಂದಿರಲು ತದ್ಭಾವವರಿಯುತ
ಲಂದು ಪ್ರಾಸೋಚ್ಛ್ವಾಸಗತಿಯನು
ಪಿಂದಬಂಧಿಸಿ ಜಲತಳದೊಳೇ ಕುಳಿತನಾಯತಿಪ ||೧೩||

ಕತ್ತಲಾಗುವತನಕ ಕೋಪೋ
ನ್ಮತ್ತಜನಕುಳಿತಿರ್ದು ಯತಿಪರ
ನೆತ್ತದಿರೆ ನಿಜಶಿರವನೀಸನ್ಯಾಸಿ ನೀರಿನೊಳಿ |
ಸತ್ತನೆನ್ನುತ ಒಗೆದು ಕಲ್ಗಳ
ಕಿತ್ತೊಗೆದು ತಂತಮ್ಮ ಸದನಗ
ಳತ್ತನಡೆದರು ಯತಿಪ ಮೇಲ್ಕೈತಂದ ನಸುನಗುತ ||೧೪||

ಒಂದು ದಿನ ಬೆಳಗಿನಲಿ ಯತಿವರ
ನಂದಮಿಗೆ ನದಿಕೂಲದಲಿ ಸುಳಿ
ವೊಂದು ಬಗೆಯಿಂ ನಡೆದು ಜ್ವಾಹರದಾಸನಿರ್ದೆಡೆಗೆ |
ಬಂದು ದ್ವಾರದಿ ತಳುವಿ ನಸುನೆಲೆ
ನಿಂದು ಜ್ವಾಹರ ದತ್ತಚಿತ್ತತೆ
ಯಿಂದ ಭಂಗಿಯಸೊಪ್ಪನರಿಯುತಲಿರ್ಪುದನು ಕಂಡ ||೧೫||

ದಿಟ್ಟಗಸು ಬಿದ್ದೊಡನೆ ಶಂಕರ
ಪಟ್ಟಕೇರುತ್ತಿಹಿರೆ ಭಂಗಿಯ
ಮುಟ್ಟಸದಿ ಸೇವಿಸುತ ಮದತಲೆಗೇರುತಿರೆ ತೂಗಿ |
ದಿಟ್ಟತನದಿಂದಲಿ ಶಿವೋಹಂ
ನೆಟ್ಟನೆಯಹಂ ಬ್ರಹ್ಮ ಎಂದರೆ
ಮುಟ್ಟದಿರಿ ಶಿವಪಟ್ಟವೆಂದನು ನಗುತ ಯತಿರಾಜ ||೧೬||

ಯತಿಪನೀಪರಿ ನುಡಿದನಂತರ
ಮತಿಯತಿಳುಹುತ ಸಖರೆ ನಿಮ್ಮಯ
ಜೊತೆಗೆ ಬಂದವರಿಲ್ಲ ನೀವೀತನುವ ಬಿಡುವಲ್ಲಿ |
ಜೊತೆಗೆ ಬರುವವರಿಲ್ಲ ಮಧ್ಯದಿ
ಮತಿಗೆ ಮಮತೆಯಿದೇಕೆ ಬಂಧವ
ನಿತನು ವರ್ಜಿಸಿ ಲೋಕಸೇವೆಗೆ ನಿಲ್ಲಿ ನೀವೆಂದ ||೧೭||

ನೆಲಸಿ ಕಾಶಿಯೊಳಿಂತು ಯತಿಪರ
ಪಲವುದಿನ ಬಳಿಕಾ ಪ್ರಯಾಗಕೆ
ನಲಿವಿನಿಂ ನಡೆತಂದು ಕುಂಭದ ಜಾತ್ರೆಯರ್ ಸೇರ್ದ |
ಪಲ ಸಹಸ್ರಕೆ ವೇದಧರ್ಮದೊ
ಳೊಲವ ಜನಿಸುತ ಸಾಧುಗಳ ಸಂ
ಕುಲಕೆ ಸಕ್ರಿಯವಾದ ಮೈಮೆಯ ತೆರೆದು ಬೋಧಿಸಿದ ||೧೮||

ಸಾಧುಗಳೆ ವಿಶ್ವಪುದು ಗತಿಯುತ
ಮಾದುದಾಗಿರೆ ನಮ್ಮ ದೇಹಗ
ಳೀ ಧರಾತಳದೊಂದು ಕಿಂಚಿದ್ಭಾಗಮಾಗಿರಲು |
ಸಾಧಿಪುದೆ ನಿಷ್ಕ್ರಿಯತೆ ತಾನೆಂ
ತಾದೊಡಂ ನಿವೃತ್ತಿ ಸಾಧ್ಯವೆ
ವೇದದೊಳು ನಿವೃತ್ತಿಯರ್ಥವ ಕೇಳಿ ನೀವೆಂದ ||೧೯||

ವೇದಸಮ್ಮತ ಕರ್ಮಗೈವುದು
ವೇದಬಾಹಿರಕರ್ಮ ಬಿಡುವುದು
ವೇದದೊಳ ನಿವೃತ್ತಿಯಿದೆ ಭಾವಿಸಲು ಸಾಧುಗಳೇ |
ವೇದ ಮರ್ಮವನಿಂತು ತಿಳಿಯದೆ
ವಾದಿಪರು ನಿವೃತ್ತಿ ಮಾರ್ಗದ
ವೈದಿಕಾಜ್ಞಾಜ್ಞಾನವಿರಹಿತರೆಂದನಾ ಯತಿಪ ||೨೦||

ಲೋಕದೊಳಗಿನ ದೀನಮನುಜರ
ಶೋಕ ಹರಿಸುವ ಸುಪ್ರಜಾ ಪ್ರೇ
ಮಾಕುಲತೆ ಮೊದಲಪ್ಪ ಸತ್ಕರ್ಮಗಳ ವರ್ಜಿಸುತ |
ಸಾಕು ನಿಷ್ಕ್ರಿಯರಾವು ಸದ್ಬ್ರ
ಹ್ಮೈಕಪರರಾವೆಂಬವರು ಸಹ
ವೀ ಕಳೇಬರ ಹೊರೆವ ಭಾರವ ಬಿಡರು ದಿಟವೆಂದ ||೨೧||

ಹೊಟ್ಟೆ ಹಸಿದರೆ ತಿರುಪೆಗೋಸುಗ
ನೆಟ್ಟನೀ ನಿಷ್ಕ್ರಿಯರು ಸಹ ಹಲ
ವಟ್ಟೆಯಲಿವರು ನಡೆದು ಹಲಹರಿದಾರಿ ದೂರವನು |
ಬಿಟ್ಟುಕೊಡರೀ ತೀರ್ಥಯಾತ್ರೆಯ
ಹುಟ್ಟು ಬಯಕೆಯ ಸಾಧುಗಳೆ ನೀ
ವಿಟ್ಟು ನಿಷ್ಠೆಯ ಕೇಳಿ ಧರ್ಮವನೆಂದನಾ ಯತಿಪ ||೨೨||

ಪರಮಮಿತ್ರರೆ ತನ್ನ ಸುಖಗಳ
ಪರರ ಹಿತಕೋಸುಗವೆ ಸಂತತ
ತೊರೆವುದೇ ನಿಜ ಜೀವನವ ಸಹ ಧಾರೆಯೆರೆಯುವುದೇ |
ಅರಿಯೆ ಸರ್ವೋತ್ಕೃಷ್ಟ ತ್ಯಾಗಂ
ಪರಮಧರ್ಮವಿದೆನುತ ಯತಿಭೂ
ವರನು ವರನಿವೃತ್ತಿ ಮಾರ್ಗವನಂದು ಬೋಧಿಸಿದ ||೨೩||

ಬೇಡಿ ಸದ್ಗೃಹಿ ಜನರಿನನ್ನವ
ಕೂಡಿ ಸ್ವೈರದಿಂದದನು ಭುಂಜಿಸಿ
ಕಾಡಿನಲಿ ನಿದ್ರಿಸುವ ಬಾಳಿದು ಸಾಧು ಜೀವನವೆ |
ಕಾಡಪಶು ಸಹ ಹೊಲಗಳಂ ಕಿ
ತ್ತಾಡಿ ಸಿಕ್ಕಿದ ಬೆಳೆಯ ನುಂಗುತ
ಲೋಡದೇ ವನದೆಡೆಗೆ ಭೇದವದೇನು ಗಡ! ಯೆಂದ ||೨೪||

ಒಂದು ದಿನ ಸಂಜೆಯಲಿ ವಿಶ್ವವ
ಸುಂದರತೆಯಂ ನಿಟ್ಟಿಸಿ ದಯಾ
ನಂದ ಸ್ವೈರದಿಂದಿರಲು ತಟಿನೀ ತೀರದಲಿ ಕುಳಿತು |
ಮುಂದಗಸುನದಿ ತರುಣಿಯೊಬ್ಬಳು
ಬಂದಳಾಕಡೆ ಪಿಡಿದು ಕರಗಳೊ
ಳೊಂದು ವಸ್ತ್ರದಿ ತನ್ನ ಶಿಶುವಿನ ಪೆಣನ ಸುತ್ತುತಲಿ ||೨೫||

ಕಂದಿ ಪೋಗಿರೆ ವದನ ಹೃದಯಂ
ಬೆಂದಿರಲು ಕಂಬನಿಗಳುದುರಿರ
ಲೊಂದೆ ಸಮ ನದಿಗಿಳಿದು ನೆಟ್ಟನೆನಿಂದು ನಡುಜಲದಿ |
ಸುಂದರಾಂಗನೆ ಕಂದ ನೀನೇ
ಕಂದವಳಿದೆಯೊ ಹಾ ಎನುತ್ತಳ
ಲೊಂದೆಸಲ ತೇಲಿಸಿದಳಾಶವವಂ ಪ್ರವಾಹದಲಿ ||೨೬||

ತನ್ನ ಕಪುಳಿನ ತುಂಡನೀಪರಿ
ಯಿನ್ನದಿಗೆ ಹರಿಬಿಟ್ಟು ಶೋಕದಿ
ಖಿನ್ನೆಯಾಗುತ ಶವದ ಮೇಲಡಸಿರ್ದ ವಸ್ತ್ರವನು |
ಚೆನ್ನೆ ನಿಡುಸುಯ್ಯುತ್ತ ಹಿಂಡುತ
ಹಿನ್ನಲಿಗೆ ನಡೆತಂದಳೊರಸುತ
ಕೆನ್ನೆಗಳ ನೆನಸಿರ್ದ ಕಂಬನಿಗಳನು ಸರಗಿಂದ ||೨೭||

ಪರಮಹಂಸನಿದೆಲ್ಲವನು ಕಂ
ದೆರೆದು ನಿಟ್ಟಿಸುತಿರ್ದನೊಮ್ಮೆಲಿ
ಕರುಳಿನಲಿ ಕೂರಲಗನಿರಿದಂತಾಗೆ ಕಂಬನಿಯು |
ಸುರಿಸಿ ಯತಿವರನಕಟ ಸಮ್ಮೀ
ತರುಣಿ ತನ್ನಯ ಕರುಳ ತುಂಡನು
ತೊರೆಗೆ ಬಿಸುಟಳು ಬಿಸುಡದಾವಳಿ ವಸ್ತ್ರವಕಟೆಂದ ||೨೮||

ಚೆನ್ನೆಗೀ ವಸ್ತ್ರವನು ವರ್ಜಿಸ
ಲಿನ್ನು ಬೇರೆಯ ವಸ್ತ್ರ ಸಿಕ್ಕದು
ತನ್ನ ಕಂದನ ಬಿಸುಟ ಮಾತೆಯು ವಸ್ತ್ರವಂ ಬಿಡಳು |
ಬನ್ನಮಿದಕಿಂ ಬೇರದೇಸಿಹು
ದಿನ್ನಕಟ ಬಡತನದ ಸಂಕಟ
ವಿನ್ನೆಗಂ ನಾನಿನಿತು ಘೋರವ ಕಂಡೆನಿಲ್ಲೆಂದ ||೨೯||

ಮುನ್ನಿನಂದದಿ ದೇವವಾಣಿಯು
ನಿನ್ನು ಹಲದಿನ ನಾನು ನುಡಿಯದೆ
ಖಿನ್ನದೀನರ ಮಾತನೇ ನುಡಿಯುತ್ತ ಸಂಕಟವ |
ಎನ್ನ ಕೈಲಪ್ಪನಿತ ತಗ್ಗಿಪೆ
ನೆನ್ನುತಾ ಕರುಣಾವನಧಿ ಯತಿ
ತನ್ನೊಳೇ ನಿಶ್ಚಯಿಸಿ ಹಿಡಿದನು ಹುರಿವ ಕಂಬನಿಯು ||೩೦||

ಬಳಿಕ ಮಿಜಾಸಪುರದ ಯತಿವರ
ನುಳಿದು ಬೋಧಿಸಲೊವ್ವ ಮಾಂತ್ರಿಕ
ಸುಳಿದು ದಾನವನೊರ್ವ ಶ್ರೀಯುತನಿಂದ ತಾಪದಮ |
ಇಳಿವೆ ಮಾರಣ ಸಿದ್ಧಿಯಿಂ ಭೂ
ತಳಕೆ ಯತಿಪನ ಶಿರವನೆನ್ನುತ
ಕುಳಿತ ಮಾಟಕೆ ಕನಲಿ ಯತಿಪನ ಸತ್ಯಭಾಷಣಕೆ ||೩೧||

ಇನಿತರಲಿ ಧನಿಕಂಗೆ ಕಂಠದಿ
ಮೊನೆತುದೊಂಮುರಿಗಡ್ಡೆ ಮಾಂತ್ರಿಕ
ಕೊನೆಯದಿನ ಬಲಿಕೊಡಲು ಯತಿಶಿರ ಕೆಡೆವುದೆಂದೆನಲು |
ಧನಿಕ ಯತಿಶಿರ ನೆಲಕೆ ಬೀಳುವ
ದಿನವೆ ಬೀಳುವುದೆನ್ನ ಶಿರವೇ
ದಿನವೆ ಕೆಡೆವುದೆನುತ್ತ ಚೀತ್ಕರಿಸಿದನು ವೇದನೆಗೆ ||೩೨||

ಪುರದ ಪೂಜಕನೊಪ್ಪ ಛೋಟೊ
ಗಿರನು ಯತಿಪನ ಧರ್ಮಬೋಧನ
ಕುರಿದು ಹಲಜನ ಧೂರ್ತರೊಂದಿಗೆ ಬಂದು ಮುನಿಕುಟಿಗೆ |
ಮೆರೆದು ಗರ್ವದಿ ಕಾಣ್ಕೆಗೆಂಜಲ
ಸುರಿದು ಯತಿಪಗೆ ಕಾಲತಾಗಿಸಿ
ದುರುಳ ವಚನವನಾಡಿ ವನಚರನಂತೆ ವರ್ತಿಸಿದ ||೩೩||

ಮೊದಲು ವಿನಯದಿ ಯತಿಪನಾತನ
ಹದವರಿತು ನುಡಿಸಿದನು ಪೂಜಕ
ನವಕೆ ಬಾಗದಿರಲ್ಕೆ ಯತಿವರ ತೋರಿ ರೌದ್ರವನು |
ಕದವ ಮುಚ್ಚೈ ಬ್ರಹ್ಮಚಾರಿಯೆ
ಸದೆವೆನೀತನನೊಳಗೆ ಬಿಡನಿವ
ಮದವನೆನ್ನುತ ಗುಡುಗಿದಂ ಬೆದರಿಸಲು ಧೂರ್ತನನು ||೩೪||

ಜ್ವಳಿಸ ಯತಿಪನ ನೇತ್ರಕಂಡೊಡ
ನಿಳಿದುಹೋದುದು ಗರ್ವ ದಂತಗ
ಳೊಳಗೆ ಸಿಕ್ಕಿರೆ ಜಿಹ್ವೆ ಬೆದರಿದ ಬೆಕ್ಕಿನಂದದಲಿ |
ಕುಳಿತನರ್ಚಕನೊಂದು ಮೂಲೆಗೆ
ಬಳಿಕ ಯತಿವರ ತಮ್ಮ ನಿನ್ನೊಳು
ಮುಳಿಸೆಮಗೆ ನಸುವಿಲ್ಲವೆನ್ನುತಲವನ ಕಳುಹಿಸಿದ ||೩೫||

ಮರುಳ ಘೋರಾಗಿರನು ಯತಿವರ
ಕೆರಳಿ ಬೆದರುತ ಪೋದೊಡಂ ತ
ನ್ನರದ ಕಿಚ್ಚನು ಬಿಡದೆ ನಡುರಾತ್ರಿಯೊಳಗೊಂದು ದಿನ |
ಪರಮಹಂಸನಕೆಣಕಲೋಸುಗ
ತರುಣ ಮಲ್ಲರನಿರ್ವರಂ ಪರಿ
ಪರಿ ಮರಾಶೆಯ ತೋರಿ ಕಳುಹಿದ ಯತಿಪಟೀರದೆಡೆ ||೩೬||

ಚಂದಿರಸಿಗುಂ ಯತಿವರಾನನ
ಚಂದಿರನಿಗುಂ ಸ್ಪರ್ಧೆಯೋ ಎಂ
ಬೊಂದು ಬೆಡಗಿಂ ಶುಭ್ರ ಜ್ಯೋತ್ಸ್ನಾಸ್ರಾವವೊಂದುಕಡೆ |
ಅಂದಮಿಗೆ ತಿಳಿನಗೆಯ ಮಳೆಯಿ
ನ್ನೊಂದು ಕಡೆ ರಜನಿಯನು ಬೆಳಗಿರೆ
ಬಂದರಾ ಮಲ್ಲದಿರು ಸುಳಿದಿಹ ಮುನಿಯ ಪತ್ತಿರಕೆ ||೩೭||

ಬಂದವರೆ ಗಂಭೀರ ರಜನಿಯ
ಸಂದ ಶಾಂತಿಯ ಕೆಡಿಸಿ ಯತಿಪನ
ಮುಂದೆ ಕೈಗಳ ಹೊಯ್ದು ಕೇಕಯ ಹಾಕ ನಗುತಿರಲು |
ಮುಂದಿ ಪಿನಯಕೆ ಬಾಗಕಂಬುವ
ನಂಪರಿತು ಮುನಿಪಾಲನವರನು
ಕಂದೆರೆದು ನಿಟ್ಟಸುತ ಹೂಂಕರಿಸಿದನು ಭರದಿಂದ ||೩೮||

ಸುತಿತ ಮುನಿಗರ್ಜನಕೆ ನಡುಗುತ
ಬಲದ ಗರ್ವಿತರುರುಳಿದರು ಮಲ
ಜಲ ವಿಸರ್ಜನವಾಯ್ತು ವಸ್ತ್ರದಿ ಭಯದಿ ಮೂರ್ಛೆಯಲಿ |
ಮಲಗಿದರು ಸ್ಮೃಮರೆದು ಮಲ್ಲರ
ಸುಲಿಸತಿಗೆ ಮನ ಮರುಗಿ ಮುನಿವರ
ಜಲದ ಸಿಂಪಡಿಸೆಸಗಿದಂ ಶ್ರೈತ್ರ್ಯೋಪಚಾರಗಳ ||೩೯||

ಉರುಳೆ ಹಲಜಣ ಧೂರ್ತರಿರ್ವರು
ತೆರೆದು ಕಂಗಳ ಮುಂದೆ ಮುನಿಭೂ
ವರನು ಕುಳ್ಳಿರೆ ಕಂಡು ಚಟ್ಟನೆ ಚೀರಿ ಭಯದಿಂದ |
ಮರಳಿ ಸ್ಮೃಮರೆದೊರಗೆ ಮತ್ತಾದ
ಚರಿಸದರನೆಚ್ಚರಿಸಿ ಬೆನ್ನಲಿ
ಕರವಿರಿಸಿ ಮುನಿ ಮಧುರತರಮಹ ಮಾತೊಳಿಂತೆಂದ ||೪೦||

ನಾವು ಸನ್ಯಾಸಿಗಳದಾರನು
ಮಾವು ನೋಯಿಸರಲ್ಲ ಬೆದರದೆ
ನೀವು ವಸ್ತ್ರವ ಮುದುರಿ ನಡೆಯುರೆಸುತ್ತ ಮುನಿರಾಯ |
ಹೀಗೆ ಪೇಳಲು ಮುದುರಿ ಬಟ್ಟೆಯ
ನಾ ವಿಗತಮದ ಮಲ್ಲರಿರ್ವರು
ಧಾವಿಸಿದರಲ್ಲಿಂದ ಮಸ್ತಕವೆತ್ತಿ ನಿಟ್ಟಿಸದೆ ||೪೧||

ಉರುಳೆ ಹಲದಿನ ಯತಿಪ ಕಾಶಿಗೆ
ಮರಳಿ ಪೋಗಲು ಕಾಶಿನರಪತಿ
ಪರಮ ವಿನಯದಿನರಮನೆಗೆ ದಯಗೈವುದೆಂದೆನುತ |
ಬರೆದು ವಾಹನವೊಂದ ಕಳುಹಿಸೆ
ಪರಮಹಂಸನು ವಾಹನದಿ ಕುಳಿ
ತರಮನೆಯ ಕಡೆ ತೆರಳಿದನು ದಯದಿಂದ ನಯದಿಂದ ||೪೨||

ದ್ವಾರದಲ್ಲಿ ಮೈದೋರೆ ಮುಕ್ತಿಪ
ಧೂರಮಣ ಭೂಪಾಲ ಸನಿಯಕೆ
ಸಾರಿ ಪಾದಕೆ ಮಣಿದು ಸುಂದರ ಸುಮಸುವಾಸನೆಯ |
ಹಾರವ ಸಮರ್ಪಿಸುತ ವಿನಯದ
ಭಾರದಿಂ ಬಾಗುತ್ತ ಮುನಿಪಗೆ
ತೋರಿದನು ಕರದಿಂದ ಕೆಲದ ಸುವರ್ಣಪೀಠವನು ||೪೩||

ಮುನಿಪ ಚಿನ್ನದ ಪೀಠವೇರಲು
ಜನಪ ಬೆಳ್ಳಿಯ ಪೀಠವೇರುತ
ವಿನಯದಿಂದಿಳಿದನಿಯನುಡಿಯಿಂ ಗುರುಜನೋತ್ತಮರೇ |
ನೆನೆಯೆ ನಾಂ ತಮ್ಮಡಿಗೆ ದುರ್ನಯ
ವೆನಿತನೆಸಗಿದೆನೆಂಬುದಂ ಮನ
ವೆಸಗೆ ಕುದಿವುದು ನನ್ನ ತಪ್ಪನು ಮನ್ನಿಸುವುದೆಂದ ||೪೪||

ಅಂದು ಶಾಸ್ತ್ರಾರ್ಥದಲಿ ಪುತ್ಕಲ
ಹಿಂದಿನಿಂದನುಸರಿಸಿ ಬಂದಿ
ರ್ಪೊಂದು ನೀತಿಯ ಮೂರ್ತಿಪೂಜೆಯ ರಕ್ಷಿಸಲು ಬಗೆಪು |
ಕುಂದೆನದೆ ತಮ್ಮಡಿಗೆ ನಾ ಹಲ
ವಂದದಪಮಾನಗಳನೆಸಗಿದೆ
ನೊಂದಿಹೆನು ಪುನ್ನಿಸುವುದೆಂದೆರಗಿದನು ಮನುಜೇಂದ್ರ ||೪೫||

ತನ್ನ ದೋಷವನರಿತು ತಪಿಸು
ತ್ತನ್ನರೇಶ್ವರ ಪದದೊಳೆರಗಲು
ಸನ್ನುತಪದಂ ಮೇಲಕೆತ್ತುತ ಪ್ಯೈದಜವುತಪನ |
ಖಿನ್ನರಾಗುವಿರೇಕೆ ಭೂಪರೆ
ನನ್ನಿಯಿಂ ಸಮುಗದರ ನೆನಹುಗ
ಳಿನ್ನುವರಮಿರ್ದಪುವೆ ಚಿಂತೆಯೆ ಬೇಡ ನಿಮಗೆಂದ ||೪೬||

ಮಾನವೇಂದ್ರರೆ ನಮ್ಮ ಸಮರಿಗೆ
ಮಾನವೇನಪಮಾನವೇನ್ನೈ
ಮಾನವೋದ್ಧಾರವನೆ ಚಿಂತಿಸಿ ರಾತ್ರಿದಿವಮನಪೆ |
ಜ್ಞಾನವಿತರಿಸುವಲ್ಲಿ ಮಾರ್ಗದೊ
ಳೇನೆ ಬಂದೊಡಮೆಲ್ಲ ದೇವನ
ದಾನವೆಂದೇ ತಿಳಿವೆವಿನ್ನೇಂ ಶೋಕ ನಿಮಗೆಂದ ||೪೭||

ಏನು ಜೀವನವೇಂ ಪ್ರಯೋಜನ
ಮಾನವ ಹೃದಯಾಂಬುನಿಧಿಯೊಳ್
ಜ್ಞಾನವಲೆಗಳು ಜನಿಸುವಂವದಿ ನಮ್ರಶಿರಗಾಳಿ |
ತಾನು ಬೀಸುತ್ತಿರಲು ನಮಗದೆ
ಮಾನಮನ್ನವಮಾನ ನಿಂದೆಯ
ದೇನು ಗಣನೆಯೊ ನಮಗೆ ಚಿಂತಿಸಬೇಡಿ ನೀವೆಂದ ||೪೮||

ಮನಸವನೊ ಸೋಮನಸವನೊ ಯತಿ
ಮುನಿಸವನೊ ಯತಿ ಮುನಿಸವನೊಜನ
ಕನಸನನೊ ಜನಕನಸವನೊ ಬಗೆಯುವನಿಗವನಿಗೆಯೋ |
ಎನುತ ಪುಳಕಿತನಾಗಿ ನಡುಗುವ
ದನಿಯಿನಾರಾಜೇಂದ್ರ ಚಿಂತಿಸಿ
ಮನ ವಿಮೋಹಿಸೆ ಮುನಿಗೆ ಮಣಿದನು ಮರಳಿ ಮುದದಿಂದ ||

ಸನ್ಯತರ ಗೌರವದಿ ವಿಪುಲ
ದ್ರವ್ಯ ಮುನಿಪದಕಿತ್ತು ಸತ್ಕ
ರ್ತವ್ಯ ಬೋಧಿಸಿರೆಂದು ಭೂಮಿಪ ಬೇಡಲಾ ಬಳಿಕ |
ಭವ್ಯತರವೆನೆ ಹರಸುತವನಂ
ದಿವ್ಯ ಸನ್ಯಾಸೀಶ್ವರಂ ಕ
ರ್ತವ್ಯಪಥವಂ ನೃಪಗೆ ತೋರಿದನಂದು ದಯದಿಂದ ||೫೦||

ಆ ತಪೋಧನ ಕಾಶಿಯೊಳಗ
ದ್ವೈತ ಮತಖಂಡನವ ವಿರಚಿಸಿ
ನೂತನದ ವೇದಾಂತಿಗಳ ಹುಲುವಾದಗಳ ಕೆಡಿಸಿ।
ದ್ವೈತ ತತ್ವವೆ ವೇದ ಧರ್ಮೋ
ದ್ಭೂತವೆನ್ನುತ ಸಾರೆ ವಿಬುಧ
ವ್ರಾತವಾದಿಸೆ ಮುಂದೆ ಬಾರದೆ ಓಂದೆ ನಿಂದಿಸಿತು ॥೫೧॥

ಮದವಿಮೋಹಿತ ಮೂಢ ಮನುಜ
ಹೃದಯತಮವಂ ಜ್ಞಾನ ರುಚಿನಿಕ
ರದೊಳಗಡಗಿಸಿ ಸತ್ಯಕಾಮರ ಮನಚಕೋರಗಳ।
ಮುದಮಿಗಿಸಿ ಸಚ್ಚರಿತ ಚಿದ್ಗಗ
ನದಲಿ ಸನ್ಯಾಸೀಭುವನ ವನ
ನಿಧಿ ಸುಧಾಕರ ಪೊಳೆದನೀಪರಿ ಹರಸೆ ಪರಮಾತ್ಮ ॥೫೨॥

॥ ಇಂತು ಹದಿಮೂರನೆಯ ಸಂಧಿ ॥



# ಹದಿನಾಲ್ಕನೆಯ ಸಂಧಿ

**ಸೂಚನೆ—ಗೂಳಿಕೆಡುಕರ ಸರಿಸಿ ಮುನಿಕುಲ**
**ಮೌಳಿಯುಳ್ಳರನರುಹಿ ಮೋಹವ**
**ಸೀಳುತಾಂಗ್ಲರ ಹರಸಿ ದುರ್ನಡೆಯಿಂದ ಮನನೊಂದ ||**

ಬಾಲಕರೆ ಮುನಿವರನ ಮೈಮೆಯ
ನಾಲಿಸಿರಿ ಕಾಶಿಯೊಳು ಸತ್ಯವ
ನೋಲಗಿಸಿ ಸದ್ಧರ್ಮಬೋಧನವಿತ್ತನಂತರದಿ |
ಓಲೆ ನಿಜಮನ ತನ್ನ ವೈದಿಕ
ಶಾಲೆಯಂ ನಿರುಕಿಸಲು ಯತಿಭೂ
ಪಾಲನಡೆದನು ಕಾಸಗಂಜಕೆ ಪಯಣಗತಿಯಿಂದ ||೧||

ತೋಷದಿಂದಾಪುರಕೆ ಯತಿಜನ
ಭೂಷಣಂ ನಡೆತಂದು ಮಿಗುವಭಿ
ಲಾಷೆಯಿಂ ತಾ ತೆರೆದ ವೈದಿಕಪಾಠಶಾಲೆಯನು |
ದೋಷವಿರಹಿತವೆನಿಸಿ ನೇಮದ
ಪೋಷಣಕೆ ಸರಿವಡಿಸಿ ಘನನಿ
ರ್ದ್ವೇಷಭಾವದಿ ಹೊಂದಿಸಿದ ಗುರುಶಿಷ್ಯಭಾವವನು ||೨||

ಸೂಳುಗತಿಯಿಂದೊಂದುದಿನಮುನಿ
ಮೌಳಿ ಪೇಟೆಯನಡುವೆ ನಡೆದಿರೆ
ಗೂಳಿಯೊಂದೆದುರಿಂದ ಮಂದಿಯಮೇಲೆ ನೆಗೆಯುತ್ತ ।
ಧಾಳಿಯಿಡುತೆಲ್ಲೆಡೆಗೆ ಹಾದಿಯ
ಜಾಳಿಸುತ ಗುರುಗುಟರುಹಾಕುತ
ಪಾಳಿತಪ್ಪಿಡಬಲಕೆ ನುಗ್ಗುತ ಮದದಿ ಧಾವಿಸಿತು ॥೩॥

ಧೂಳನೆಬ್ಬಿಸುತಡಿಗಡಿಗಮೆದೆ
ಸೀಳುವಂದದಿ ಮೊರೆಯುತಂಗಡಿ
ಯಾಳುಗಳನೋಡಿಸುತ ರೂಪವತಾಳ್ದ ಸಾವಿನೊಲು ।
ಗೂಳಿ ಬಾಲವ ಹೊಡೆದು ಬೀಸುತ
ನೀಳಕೋಡುಗಳಿಂದ ತಿವಿಯುತ
ಹಾಳುನೆಲವನೆ ಸುಳಿಯೆ ನುಗ್ಗಿತು ಮಂದಿ ಸಂದಿಗಳ ॥೪॥

ಅಕ್ಕಪಕ್ಕದ ಜಗುಲಿಸಾಲೊಳು
ಕಿಕ್ಕಿರಿದು ಮಂದಿಗಳು ಭೀತಿಯಿ
ನಕ್ಕಟಕ್ಕಟ ಬೇಗಬನ್ನಿರೆಸುತ್ತ ಕೂಗುತಿರೆ ।
ನಕ್ಕುತನ್ನೊಳೆ ಮುನಿಪ ನಸುವುಂ
ಕಕ್ಕುಲತೆಗೆಡೆಗುಡದೆ ಮುಂದಕೆ
ಸೊಕ್ಕಿಧಾವಿಪ ಗೂಳಿಯೆಡೆಗೇ ನುಗ್ಗಿದನು ಜವದಿ ॥೫॥

ಬೆಚ್ಚಿ ಹಲ್ಗಳನಡುವೆ ಸಾಲ್ಗೆಯ
ಕಚ್ಚಿನಡುಗುತ ಹಲರುನಿಂದರು
ಹುಚ್ಚತನ್ನಯಸಾವ ತಾನೇ ಕೂಗುತಿಹನೆಂದು |
ಮುಚ್ಚಿ ಕಂಗಳ ಹಲರು ನಿಂದರು
ಸಚ್ಚರಿತ ವಿಚಲಿಸದೆ ನಡೆದಿರೆ
ಚಚ್ಚಿಗೊರಸಿಂ ನೆಲವ ನುಗ್ಗಿತು ಗೂಳಿ ರೋಷದಲಿ ||೬||

ಅರರೆ ಸೋಜಿಗವೆನುತ ಭೀತರು
ನೆರೆದುನೋಡುತ್ತಿರಲು ಯತಿಭೂ
ವರನ ಸನಿಯಕೆ ಬಂದಕೂಡಲೆ ಗೂಳಿ ತಟ್ಟನೆಯೇ |
ಸರಿದು ಪಕ್ಕಕೆ ಮುದುರುತೋಡಿತು
ಕರತಳಂಗಳ ಹೊಯ್ದು ಸುತ್ತಣ
ನರಸಮೂಹಂ ಭಾಪುಭಾಪೆನುತಿತ್ತು ಮುನಿವರನ ||೭||

ಶಾಂತಿ ಹರಡಿದಮೇಲೆ ವಿನಯವ
ನಾಂತು ಜನಬೆಸಗೊಳಲು ಯತಿಭೂ
ಕಾಂತ ಹಾಯಲು ಬಂದಿರಲ್ತದ್ವೃಷಭ ಕೋಡುಗಳ |
ಸಾಂತ ಜಗ್ಗಿಸಿ ದೂಡುತಿರ್ದೆನಿ
ದೇಂ ತುಮುಲಸಂಗರವೊಗಡ ಎನು
ತಾಂತು ಭಕ್ತರ ವಂದನೆಗಳಂ ನಡೆದನಲ್ಲಿಂದ ||೮||

ಒಂದು ನಿಶ್ಚಿತದಿನಕೆ ಮುನಿವರ
ನಂದದಿಂದ ಛಲೇಸರಕೆ ನಡೆ
ತಂದು ರಂಜಿಸೆ ಹಲವುಸಾಸಿರ ರಾಜಪುತ್ರರನು ।
ಒಂದುಗೂಡುತ ಬಂದು ಭಕ್ತಮು
ಕುಂದಸಿಂಹಂ ಸ್ವಾಗತಿಸುತಭಿ
ವಂದಿಸುತ ಯತಿವರನ ಬಿಜಯಂಗೈಸಿದನು ಮನೆಗೆ ॥೯॥

ಒಂದುದಿನ ಯತಿವರನು ಭಕ್ತಮು
ಕುಂದ ಸಿಂಹನು ತನ್ನ ನಂದನ
ಚಂದನಗೆ ಮುಳಿದಿರ್ಪನೆಂಬೀ ಸಂಗತಿಯಕೇಳಿ ।
ನೊಂದು ಚಿತ್ತದಿ ತನ್ನಭಕ್ತನ
ನಂದೆ ನಂದನನೊಡನೆ ಬರಮಾ
ಡೊಂದು ಹಾರ್ದಿಕ ಬೋಧನವನೀತೆರದಿ ಸಲ್ಲಿಸಿದ ॥೧೦॥

ತಂದೆಯಧಿಕ ಮೃದುತೆಹೊಂದುವು
ದೊಂದು ಧರ್ಮವು ಕಿರಿಯರಜ್ಞತೆ
ಯಿಂದ ಕಿರಿತನವೆಸಗೆ ಹಿರಿಯರು ತಮ್ಮ ಹಿರಿತನವ ।
ಎಂದುಮುಳಿಯಲೆ ಬಾರದೈ ನಿಜ
ನಂದನಗೆ ಮುಳಿದಿರಲು ಮನೆಯಾ
ನಂದವೆಲ್ಲವು ಧೂಳಿಯಪ್ಪುದು ಭಕ್ತಕೇಳೆಂದ ॥೧೧॥

ಹರಿದಹುರಿಯನು ಹೊಸೆಯಲಪ್ಪುದು
ಬಿರಿದಭಿತ್ತಿಯ ಬೆಸೆಯಲಪ್ಪುದು
ಮುರಿದಮೂರ್ತಿಯ ಮರಳಿ ಮೆರೆಯಿಸಬಹುದು ಮರುದಿರುಹಿ
ಅರಿಯಿದಂ ಹೃದಯಂಗಳೊಡೆದರೆ
ಮರಳಿ ಸೇರಿಸಲಾಗದದರಿಂ
ಮರೆದುಕೋಪವ ಮಗನ ಮನ್ನಿಪುದೆಂದನಾಮುನಿಪ ||೧೨||

ಈ ತೆರದಿ ಪಿತಸುತರ ಕೇಳಿತನ
ವಾತಪೋಧನ ತಿಳುಹಿ ಹತ್ತಿರ
ಕಾತರುಣಪುತ್ರನನು ಕರೆಯುತ ತಂದೆಯಂಕದಲಿ |
ಪ್ರೀತಿಯಿಂ ಕುಳ್ಳಿರಿಸಲಾತನು
ಜಾತಜನಕರ ಕೋಪಹರಿದುದು
ಧೌತವಾಯ್ತಾ ಹೃದಯಗಳು ನಿಜಬಾಷ್ಪಜಳದಿಂದ ||೧೩||

ಪರಮುನಿರ್ಮಮನಾದೊಡಂ ಪರ
ದಿರವಿಗೈಹಿಕದಿರವೆ ಸುದೃಢ
ತರದ ತಳವೆಂದರಿತ ಯೋಗಿಜನೇಶನೀತೆರದಿ |
ಅರುಹಿ ಸಾಂಸಾರಿಕ ಸುಖಂಗಳ
ತಿರುಳ ನಿಜಭಕ್ತರಿಗೆ ಕಲಿಸಿದ
ಪರವನಿಹದಲೆ ನಿಲಿಪನೀತಿಯ ವೇದವಿಧಿಯಿಂದ ||೧೪||

ಬಳಿಕ ಯತಿವರ ಹಲಪುರಂಗಳ
ಸುಳಿದು ಬೋಧಿಸಿ ಕರ್ಣವಾಸದ
ಪೊಳಲಿಗೈತಂದೊಡನೆ ರಜಪೂತರಿಗೆ ವಿಧಿಯಿಂದ |
ತಳೆಸಿ ಜನಿವಾರಗಳ ಮದುವೆಯ
ನೆಳೆತನದಿ ಮಾಡದಿರಿ ಗೃಹಿಗಳು
ಕಳೆಯಿರೈ ಸಂಯಮದ ಜೀವನವೆಂದು ತಿಳುಹಿಸಿದ ||೧೫||

ಕರ್ಣವಾಸಕೆ ಶರದದಲಿ ತಾಂ
ಪೌರ್ಣಿಮಾ ಸ್ನಾನವನು ಗೈಯಲು
ಕರ್ಣಸಿಂಹ ಬರೌಲಿವಾಸಿಗ ಮತ್ತೆನಡೆತಂದು |
ಸ್ವರ್ಣಕಾಂತಯತೀಶನಿಳಿದಿಹ
ಪರ್ಣಕುಟಿಯ ಸಮೀಪಮೇ ಬಹು
ವರ್ಣರಂಜಿತಮಪ್ಪ ಬೀಡಾರವನು ವಿರಚಿಸಿದ ||೧೬||

ಒಂದುದಿನ ನಡುರಾತ್ರಿ ತನ್ನಯ
ಮಂದಿಮೂವರ ಕರದೊಳಸಿಯೊಂ
ದೊಂದ ಪಿಡಿಯಿಸಿ ಹಿಂದಿನಪಮಾನಗಳ ಕಿಚ್ಚಿನಲಿ |
ಇಂದೆಸಾಧಿಸಿಕೊಲ್ಲಿರಿ ದಯಾ
ನಂದನಂ ನೀವೆಂದು ಕಳುಹಲು
ಬಂದರಾ ಸೇವಕರು ಸಪ್ಪಳಗ್ಯೆಯದಂದದಲಿ ||೧೭||

ಕಳಕಳಿಪ ತಂಗದಿರ ತಿಂಗಳ
ಬೆಳಕಿನಿಂ ಕೂಲಗಳ ಹೊಳೆಬಿಳಿ
ಮಳಲರಾಸಿಯ ತೊಳೆಯುತಿರ್ದನು ನೋಡೆಪಕ್ಕದಲಿ |
ಸುಳಿಸುಳಿದು ಕಲಕಲಿಸಿ ಬಲುಬೊ
ಬ್ಬುಳಿಯ ವಿರಚಿಸಿ ನೊರೆಯ ತೇಲಿಸಿ
ಜಳದ ತುಂತುರ ತಟಕೆ ತೂರುತಲಿತ್ತು ದೇವನದಿ ||೧೮||

ಎಲ್ಲಕಡೆ ನೀರವತೆ ರಾತ್ರಿಯ
ನಲ್ಲನೊಬ್ಬನನುಳಿದು ನೋಡುವ
ರಿಲ್ಲ ಮತ್ತಿನ್ನೊಬ್ಬರಾಯೆಡೆ ಮಂದಮಾರುತನ |
ಸೊಲ್ಲನುತ್ತರಿಸುತಿದೆ ತರಗೆಲೆ
ಚೆಲ್ಲಿ ಮಂದಸ್ಮೇರಗಳ ಯತಿ
ವಲ್ಲಭಂ ಧ್ಯಾನಸ್ಥನಾಗಿಹ ನಿಜಕುಟೀರದಲಿ ||೧೯||

ವಾರಣನ ದಂತಂಗಳೆನಿತೇ
ತೋರವಾದೊಡಮೇನುಮರಿಕಂ
ಠೀರವನ ಕಂಡೊಡನೆ ಬೆದರದೆ ಬೆನ್ನ ತೋರಿಸದೆ |
ನೇರದಿಂ ಕರವಾಳವಿಡಿದಾ
ಮೂರುಜನರೈತಂದೊಡಂಗಂ
ಭೀರಯತಿಪನ ಕಂಡು ಹಿಂದ್ಯೆದಿದರು ಕಂಪಿಸುತ ||೨೦||

ಕಳುಹೆ ಮತ್ತಾ ಕರ್ಣಸಿಂಹನು
ತಳೆದ ಖಡ್ಗದ ಸೇವಕರುಗಳು
ಬಳೆದ ಭಯದಿಂ ಬೀಳುತೇಳುತ ಬರ್ಪುದನು ಕಂಡು |
ಒಳಗೊಳಗೆ ನಗುನಗುತ ಮೊಗದಲಿ
ಮುಳಿಸಮೆರೆಸುತ ಧೂರ್ತರಂ ಭಯ
ಗೊಳಿಸೆ ಹೂಂಕರಿಸಿದನು ಯತಿಭೂಕಾಂತ ಬಿರುಸಿಂದ ||೨೧||

ಕಾಲಮೇಘದ ಸಿಡಿಲಿನೊಲು ಯತಿ
ಪಾಲ ಹೂಂಕರಿಸೊಮ್ಮೆ ಈಪರಿ
ಕಾಲ ನೆಲಕಪ್ಪಳಿಸೆ ಕೊಲ್ಲಲುಬಂದ ಸಾಸಿಗರು |
ಜೋಲುಮೊಗದಿಂದುರುಳಿ ನಿಜಕರ
ವಾಲಗಳನೆಲಕೊಗೆದು ಮೂರ್ಛೆಯ
ನೋಲಗಿಸಿದರು ಬಾಯ್ಗಳಿಂ ಸುರಿಸುತ್ತ ಜೊಲ್ಲಗಳನು ||೨೨||

ಕಳೆಯೆ ಹಲತಾಸುಗಳು ತಾವ್ಮ
ತ್ತಿಳಿದು ಮೇಲೇಳುತ್ತಲಾಜನ
ಕಳವಳಿಸಿ ಹಿಂದಿರುಗಿ ನೋಡದೆ ಹಳ್ಳಕೊಳ್ಳಗಳ |
ಬಳಸುಗಳ ಗಮನಿಸದೆ ಭಯವಿ
ಹ್ವಳರು ಗಡಗಡ ನಡುಗುತೋಡಿದ
ರುಳಿವುದಳಿವುದ ಮನಕೆ ತಾರದೆ ಬಿಗಿದ ಭೀತಿಯಲಿ ||೨೩||

ಹೂಂಕರಿಪ ಗರ್ಜನಕೆ ಬೆಚ್ಚುತ
ಲೇಂಕುಘಟನೆಯಿದೆಂದು ನಿದ್ದೆಯ
ಸೋಂಕವರ್ಜಿಸಿ ಜಗ್ಗನೇಳುತ ಭಕ್ತ್ರಕೈಥಿಲನು ।
ತಾಂ ಕತೆಯ ಕೇಳದುರಿ ಗುರುವರ
ನೂಂಕಿ ರಾತ್ರಿಯ ಹುದುಗುತೆನೆ ಸ್ಮೇ
ರಾಂಕವದನದ ಯತಿಪ ನಿರ್ಭಯತನದಲಿಂತೆಂದ ||೨೪||

ಈ ಜಗದಿ ರಕ್ಷಣೆಗೆ ಸನ್ಯಾ
ಸೀಜನರು ಗುಹೆದುರ್ಗದಲಿ ಮರೆ
ಮಾಜರ್ರೈ ಕ್ರೈಥಿಲನೆ ನೀನಂಜದಿರು ವಾಸ್ತವದೆ ।
ಆ ಜಗತ್ಪತಿಯೊರ್ವನೇ ತ್ಯಾ
ಗೀ ಜನರ ರಕ್ಷಕನು ಬಯಪೆನೆ
ಗೋಜ ತೀರಿಪೆ ಕಸಿದವರ ಶಸ್ತ್ರವನೆ ಕೇಳೆಂದ ||೨೫||

ಮುಂದೆ ನಡೆದಾ ಬಳಿಕ ಮುನಿವರ
ಬಂದು ಪಟನಾಪುರಕೆ ಬೋಧಿಸ
ಲೊಂದುದಿನ ಬುಧನೊರ್ವ ಯತಿಪರೆ ಭಾಗವತದೊಳಗೆ ।
ಸಂದಿಹುದು ಹದಿನೆಂಟುಸಾವಿರ
ಸುಂದರ ಶ್ಲೋಕಂಗಳೀ ಜೆಡ
ಗಿಂದ ವ್ಯಾಸರಬಿಟ್ಟು ಬರೆವವರಾರೊ ಗಡಯೆಂದ ||೨೬||

ಎಂದು ಪಂಡಿತನೆನಲು ಯತಿವರ
ಮುಂದಹಾಸದಿ ಭಾಗವತದೊಳ
ಗಿಂದು ತಾ ಹದಿನೆಂಟುಸಾಸಿರ ಶ್ಲೋಕ ಕಲ್ಪನೆಯ |
ಗೊಂದಲದಲಿರುವಂತೆ ನಾವೀ
ಗೊಂದು ಮೂವತ್ತೆಂಟು ಸಾವಿರ
ಸುಂದರ ಶ್ಲೋಕಗಳನೊರೆವೆವು ಬರೆದುಕೊಳಿರೆಂದ ||೨೭||

ಜೋಡು ಹಾವುಗೆಗಳು ಪರಸ್ಪರ
ಕೂಡಿ ನುಡಿವುದನೀಗ ಕಲ್ಪನೆ
ಮಾಡಿ ನಾವ್ ಶ್ಲೋಕಗಳನೊರೆವೆವು ಬರೆದುಕೊಳಿರೆಂದು |
ಹಾಡತೊಡಗಿದ ವಿಬುಧಲೇಖನಿ
ಯೋಡದಾಯಿತು ಹೆಣೆವ ಕಲೆಯನು
ನೋಡಿ ದೈವೀಪುರುಷರೇ ತಾವೆಂದನಾ ವಿಬುಧ ||೨೮||

ಧೀರ ಮುನಿವರನಿಂತು ಧರ್ಮವ
ಸಾರಿ ಹಲದಿನಮಾ ಬಳಿಕ ಮುಂ
ಗೇರನಗರವ ಹಾದು ಭಾಗಲಪುರವ ಸೇರುವೊಡೆ |
ಏರಿ ಹೊಗೆವಂಡಿಯನು ವಾಹನ
ಸೇರಿದೊಡನೆ ಜಮಾಲಪುರವಂ
ನೇರದಿಂ ಕೆಳಗಿಳಿದು ತೊಡಗಿದನಂದು ಶತಪಥಿಸೆ ||೨೯||

ಜ್ಞಾನಿಜನಭೂಕಾಂತ ಬರಿ ಕೌ
ಪೀನವೊಂದನೆ ಧರಿಸಿ ತಾ ಮು
ದ್ದಾನೆಯೊಲು ಗಂಭೀರ ಗತಿಯಿಂ ಗಾಳಿ ಸೇವಿಸುತ |
ಮೌನದಲಿ ಸುಳಿದೇಸನೋ ಸು
ಜ್ಞಾನದಿಂ ಚಿಂತಿಸುತಲಿರೆ ದು
ಜ್ಞಾನಿ ಸತಿಯೊಡನಾಂಗ್ಲ ಶಿಲ್ಪಿಯದೊರ್ವನೈತಂದ ||೩೦||

ಯತಿವರನ ಕಂಡಾಂಗ್ಲ ಶಿಲ್ಪಿಯ
ಸತಿಯಳಾರೀ ಚಿತ್ತ್ರಲೆಯ ದು
ರ್ಮತಿಯೆನುತ ಖತಿಗೊಳಲು ಶಿಲ್ಪಿಯು ಬಂಡಿನಿಲುವನೆಯ |
ಪತಿಯ ಸನಿಯಕೆ ಪೋಗಿ ಚಿತ್ತ್ರಲೆ
ಶತಪಥಿಪ ನರನಿವನ ನೀವಭಿ
ಮತಿಸಿ ಬೇರೆಡೆ ಕಳುಹಿರೆಂದನು ಬಿಗಿದ ಬಿಂಕದಲ ||೩೧||

ಬಂಡಿನಿಲುವನೆಯೊಡೆಯ ಯತಿಭೂ
ಮಂಡಲಾಧೀಶ್ವರನ ಪದದೊಳ
ಖಂಡವಿನಯದಿ ಪರಮಹಂಸರೆ ದಯೆಯುಶಾಸನದಿ |
ಮಂಡಿಸಿರಿ ತಾಪತ್ತ್ರ ಹೊರಡಲು
ಬಂಡಿ ಸಮಯಂ ಬಹಳವಿಹುದೆನೆ
ಕಂಡು ಚಿತ್ತ್ರದೊಳಿಲ್ಲವಂ ಮುನಿನಾಥನಿಂತೆಂದ ||೩೨||

ನಿಮ್ಮನೀಪರಿಯೆಮ್ಮನರುಹಲು
ನಮ್ಮೆಡೆಗೆ ಕಳುಹಿದಗೆ ತೋಟದಿ
ನಿಮ್ಮಯಾದಮುಹವ್ವರೇಡನದಲ್ಲಿ ಲಜ್ಜಿಸದೆ |
ಒಮ್ಮತದಿ ಚಿತ್ತಲೆಯೆ ತಿರುಗಿದ
ಓಮ್ಮಹಿಯ ಯುಗದವರು ನಾವೆಂ
ದೊಮ್ಮೆ ಪೇಳಿರಿ ಪೋಗಿರೆಂದನು ನಗುತ ಮುನಿನಾಥ ||೩೩||

ತಿಳುಹುತೀಪರಿ ಮುನಿಜನೋತ್ತಮು
ಸುಳಿವುದಂ ನಿಲ್ಲಿಸದೆ ನಗುತಿರೆ
ಮುಳಿದು ಭರದಿಂದಾಂಗ್ಲಶಿಲ್ಪಿಯು ನಿಲುವನೆಯ ಪತಿಯ |
ಬಳಿನಡೆದು ಸಿಡಿಸಿಡಿದು ಮತ್ತುಂ
ಹಳಿಯೆ ನಿಲುವನೆಯೊಡೆಯ ಗುಣನಿ
ರ್ಮಳಮುನೀಶನ ಮೈಮೆಯೊರೆದನು ನಯದಿನೀತೆರದಿ ||೩೪||

ಅರರೆ ಹೊರಗಟ್ಟುವೆನೆ ಬೀದಿಯ
ತಿರುಕನೀ ಸನ್ಯಾಸಿಯಲ್ಲೈ
ಧರೆಯುಲೆಂದುಂ ನಮ್ಮ ನಿಮ್ಮಂತಹಪ ಲೆಕ್ಕಿಸದೆ |
ಮೆರೆವ ಪರಮ ಸ್ವತಂತ್ರ ಯತಿಭೂ
ವರನೆನುತ ನಿಲುವನೆಯ ಪತಿಯಂ
ದರುಹಲಾಂಗ್ಲನು ಯತಿಯ ಪೆಸರೇನೆಂದು ಬೆಸಗೊಂಡ ||೩೫||

ನಾಮವು ದಯಾನಂದ ಸರಸತಿ
ಯೀ ಮಹಾತ್ಮನದೆಂಬ ವಚನ
ಸ್ತೋಮ ಕಿವಿದೆರೆವೊಗಲು ತತ್ಕ್ಷಣವಾಂಗ್ಲಸಜ್ಜನನ |
ರೋಮವೆದ್ದುದು ಕಂಗಳಿಂದವಿ
ರಾಮಮಾನಂದಾಶ್ರುಸುರಿದುದು
ನಾಮಹಿಮರಿವರಲ ಎನುತ ನಡೆತಂದ ಜವದಿಂದ ||೩೬||

ಹೇ ಮಹಾಮುನಿ ತಮ್ಮ ಪಾವನ
ನಾಮ ಪರಿಚಿತವೆಮಗೆ ದರ್ಶನ
ಕಾಮನೆಯ ಬಹುದಿನದಿ ತಳೆದಿಹೆವೀಶದಯದಿಂದ |
ಸ್ವಾಮಿ ದರ್ಶನವಾದುದೀದಿನ
ನಾ ಮಹಾಸೌಭಾಗ್ಯಶಾಲಿಯಿ
ದೀ ಮಹಿಳೆ ಮತ್ಸತಿಯಳೆನ್ನುತ ಪಾದಕೆರಗಿದನು ||೩೭||

ಪದಕೆ ಮಣಿದನನೆತ್ತಿ ತಿಳಿನಗೆ
ವದನದಲಿ ಮಿಂಚುತಿರೆ ಮುನಿವರ
ಮುದದಿ ಮೈದಡವುತ್ತಲೊಳ್ಳಿತು ಸುಖಿಸಿರೆಂದೆನುತ |
ಹೃದಯದಾಶ್ವಾಸನವನೀಯುತ
ಪದುಳದಿಂ ಹಲಧರ್ಮ ವಚನವ
ನುದಹರಿಸಿ ಹರಸಿದನು ದಂಪತಿಗಳನು ದಯದಿಂದ ||೩೮||

ತೆರಳಿ ಮುಂಗೇರಿಂದ ಭಾಗಲ
ಪುರಕೆ ವೈದಿಕ ಧರ್ಮಬೋಧನ
ಪರ ಮುನೀಶ್ವರ ರಂಜಿಸುತ್ತಿರಲೊಂದುದಿವಸದಲಿ |
ಧರುಮ ಚರ್ಚೆಯನೆಸಗೆ ಯತಿಭೂ
ವರನ ಸನಿಯಕೆ ಬಂದರೊಂದೆಡೆ
ನೆರೆದು ಕ್ರೈಸ್ತ ಮಹಮ್ಮದೀಯರ ಮತದ ಬೋಧಕರು ||೩೯||

ವಾದ ಮಧ್ಯದಲೊರ್ವ ತರುಣಂ
ರೋದಿಸಲು ಮುನಿಪಾಲ ನಿನಗೇ
ನಾದುದೆಂದೆನಲಾತ ಬರಿದೇ ಕ್ರೈಸ್ತ ಸಾಸಾದೆ |
ಹಾ! ದಯಾಕರ ಮೊದಲೆ ನನಗೀ
ಬೋಧನಂ ಸಿಕ್ಕಿರೆ ಸನಾತನ
ಮಾದ ಧರ್ಮವನುಳಿಯುತಿರ್ದೆನೆ ಹಾಯೆನುತ ನುಡಿದ ||೪೦||

ಒಂದುದಿನ ಮುನಿರಾಜನುತ್ಸವ
ಮೊಂದ ನೋಡಲು ಸುರನದೀತಟ
ಕೆಂದು ನಡೆಯುತ ತಮ್ಮಯ ಪುರೋಹಿತ ಜನಂಗಳಿಗೆ |
ತಂದೆಯರು ನಿಜಕನ್ನೆಯರನಾ
ನಂದದಿಂ ದಾನದಲಿ ಕೊಡುವುದ
ನಿಂದು ನಿಟ್ಟಿಸಿ ಕುಳಿತನೊಂದೆಡೆ ನೊಂದಮನದಿಂದ ||೪೧||

ಹಿಂದಿನಿರುಳಲಿ ಮುನಿವರ ದಯಾ
ನಂದ ಭೋಜನವೆಸಗದಿರ್ದುದ
ನಂದನ ದ್ವಿಜ ಕಂಡು ಸೋಜಿಗದಿಂದ ನಯದಿಂದ |
ವಂದಿಸುತ ಗುರುದೇವರೇತಕೆ
ಹಿಂದಿನಿರುಳೂಟವಸು ಬಿಟ್ಟಿಹಿ
ರೆಂದು ಕೇಳಲು ಶೋಕದಿಂದಾ ಯತಿಪನಿಂತೆಂದ ||೪೨||

ಕಂಡವ್ಯೆ ನಾವ್ನಿನ್ನೆ ಪೂಜಕ
ಮುಂಡಳಿಗೆ ತಂದೆಯರು ನಲಿವಿಂ
ತಂಡದಲಿ ನಿಜಕನ್ನೆಯರ ಸಹ ದಾನಗೈದಪುದ |
ಭಂಡತನವಲೆ ಸಮ್ಮದೀ ಭೂ
ಖಂಡವಿನಿತಜ್ಞಾನದೊಳಗಿರ
ಲುಂಡು ನಿದ್ರಿಪ ಚಿತ್ತವೆನಗಾಯ್ತಿಲ್ಲ ಕೇಳೆಂದ ||೪೩||

ಸರಿಸಿ ಮಾಸವನೊಂದ ಭಾಗಲ
ಪುರದಿ ದಿನವುಂ ಸಂಜೆ ಪೈಗಂ
ಬರ ಮತೀಯ ಕ್ರೈಸ್ತ ಮಂದಿಗಳೊಡನೆ ಚರ್ಚಿಸುತ |
ನೆರೆನೆರೆದು ಬರ್ಪಗಣಿತದ ಸಾ
ಸಿರಕೆ ವೇದಾರ್ಥಗಳನರುಹುತ
ತೆರಳಿದಂ ಕಲಕತ್ತೆಗೆನ್ನುತ ಯತಿ ದಯಾನಂದ ||೪೪||

ತೈಲ ವಿದ್ಯುದ್ವಾಷ್ಪ ಹರಿಸಂ
ಚಾಲಿತದ ಬಗೆಬಗೆಯ ವಾಹನ
ಜಾಲದಿಂ ಗಜಬಜಿಪ ಬಿತ್ತರದರಸುವೀದಿಗಳ |
ನೀಲ ಗಗನವನಿರಿವ ಸೌಧದ
ಸಾಲುಗಳ ಮತಮತದ ಹಲ ದೇ
ವಾಲಯದ ಕಲಕತ್ತೆಗೈದಿದನಾ ದಯಾನಂದ ||೪೫||

ಮೋದದಿಂದ ಸುರೇಂದ್ರನಾಥ ಪ್ರ
ಮೋದಕಾನನದೊಳಗೆ ಸುಜನಪಿ
ನೋದಯತಿಪನನಿಳುಹಿಸೆ ದಯಾನಂದ ಸರಸತಿಯು |
ವೇದವೇತ್ತನು ಬಂದನೆಂಬುದ
ನಾದರಿಸಿ ಸಾಸಿರದಿ ಮನುಜರು
ಪೋದಪರು ಮುದದಿಂದ ಮುನಿಪನ ಮಹಿತದರ್ಶನಕೆ ||೪೬||

ಶಾಂತಿ ಕಿರಣವ ಸೂಸಿ ವಿದ್ಯು
ತ್ಕಾಂತ ಮುನಿವರನೊಂದುದಿನ ಕೆಳೆ
ಯಾಂತ ಭಕ್ತಾವಳಿಗೆ ಧರ್ಮದ ಗೂಢ ತತ್ವಗಳ |
ದಾಂತನರುಹುತ್ತಿರಲು ವರ ಸಂ
ಭ್ರಾಂತನೊರ್ವನು ತಿಳಿಯ ನಗೆಗಳ
ಕಾಂತಿಗಳ ಹೊಮ್ಮುತ್ತ ಯತಿಪನ ಬಳಿಗೆ ನಡೆತಂದ ||೪೭||

ಮೊಗದಿ ಮಿಂಚಿನ ಹೊಳಪು ತನುವೊಳು
ತೆಗೆದ ತೇಜದ ತೊಳಪು ಹೃದಯದಿ
ಮಿಗುವ ಮೋಹನಮುಮತೆ ಕೇಳುವ ಮನುಜಸಂಕುಲಕೆ |
ಹೊಗರ ಹೊಮ್ಮಿಪ ಹದದ ಸಿಹಿನುಡಿ
ಸೊಗವ ಬೀರುವ ಹದೆಯ ರಂಜಿಸೆ
ನಗುತ ಭಗವನ್ ಭೋನಮೋ ಎಂದೊರೆದನಾತರುಣ ||೪೮||

ವಂದಿಸಿದ ತರುಣನನು ವದನದಿ
ಮಂದಹಾಸವಬೀರಿ ಯತಿಪರ
ನಂದು ಮರುವಂದಿಸುತ ನುಡಿಸಲು ಬಳಿಯೆ ಕುಳ್ಳಿರಿಸಿ |
ಚೆಂದದಿಂದಾ ತರುಣನೆಳೆನಗೆ
ಯಿಂದ ಕೇಶವ ಚಂದ್ರಸೇನನ
ವಂದಿತರೆ ಕಾಣ್ಕಂಡಿರೇನೆಂದೆನುತ ಬೆಸಗೊಂಡ ||೪೯||

ತರುಣ ನಗುತಿಂತೆನಲು ಯತಿಭೂ
ವರನು ನಸುನಗೆಯಿಂದ ಹೌದೆನೆ
ಬೆರಗಿನಿಂ ತೇಜಸ್ವಿಯುವಕನು ಪೂಜ್ಯ ಮುನಿಕಾಂತ |
ಅರರೆ ಕೇಶವ ಚಂದ್ರಸೇನರು
ತೆರಳಿಹರೆ ಬೇರೆಡೆಗೆ ನೋಡಿದ
ಪರಿಯದೆಂತೆನೆ ಯತಿಪನೀಪರಿಯಿಂದ ಮರುನುಡಿದ ||೫೦||

ಅಹುದಹುದು ವಾಸ್ತವದಿ ನಾವ್ಕಂ
ಡಿಹೆವವರನೀ ಸ್ಥಳದಿ ತೋಟದ
ಲಿಹರು ನೀವೇ ತಿಳಿಯೆ ಕೇಶವಚಂದ್ರಸೇನರೆನೆ ।
ಅಹುದು ತಾವಿದನರಿತ ಪರಿಯೆಂ
ತಹುದೊ ಗಡಯೆನೆ ಯತಿಪ ನಿಮ್ಮಂ
ತಹರು ಕಲಿಕತ್ತೆಯಲಿ ಮತ್ತಿನ್ನಿರುವರಾರೆಂದ ॥೫೧॥

ಪರಮಹಂಸನ ತರ್ಕತೈಕ್ಷ್ಣ್ಯ ವ
ಬೆರೆದ ಬೌದ್ಧಿಕ ಬಲವ ನಿಟ್ಟಿಸಿ
ಪರಮ ವೇದ ವಿಶಾರದಾಗ್ರಣಿಯಾಂಗ್ಲ ಭಾಷೆಯನು ।
ಅರಿಯನೈಸಲೆ ನನ್ನ ಸಂಗಡ
ಬರುತಲಿರ್ದ ವಿಲಾಯತಿಗೆ ತಿಳಿ
ದಿರಲು ಗಡಯೆಂದೊರೆದ ಕೇಶವಚಂದ್ರನೊಂದುದಿನ ॥೫೨॥

ಆತನಿಂತೆಂದೊಡನೆ ಸುಗುಣೋ
ಪೇತ ಯತಿವರ ಪರಮಶೋಕದ
ಮಾತಿದಲೆ ಹಾ ಬ್ರಹ್ಮಸಾಮಾಜಿಕರ ನಾಯಕನು ।
ಹಾತೊರೆವ ಜನರಿಂಗೆ ತಿಳಿಯದ
ಮಾತಿನಲೆ ಬೋಧಿಸುವ ಸಂತತ
ನೀತಿಯೆತ್ತಣದೆಂದು ನುಡಿದನು ಬೀರಿ ನಸುನಗೆಯ ॥೫೩॥

ಬಳಿಕ ಮತ್ತೊಂದುದಿನ ಕೇಶವ
ನಿಳೆಯ ಪೂಜ್ಯನ ತಾನ್ಸಭಾಸ
ದ್ವಳಯದಲಿ ಸಂಸ್ಕೃತವ ನುಡಿಪಿರಿ ಮುಂದಿಸಂದೋಹ |
ತಿಳಿಯರದ ಭಾಷಾಂತರಿಪ ಜನ
ತಿಳಿಪರಿನ್ನೊಂದರ್ಥವದರಿಂ
ದುಳಿದದಂ ರಾಷ್ಟ್ರೀಯ ವಾಣಿಯ ನುಡಿವುದೊಳಿತೆಂದ ||೫೪||

ಕೊನೆಗೆ ಕೇಶವ ಚಂದ್ರಸೇನನು
ಮುನಿವರರೆ ತಾವ್ ಪಲವು ಸಾಸಿರ
ಜನದ ಸಭೆಗಳೊಳ್ಬೈದಿ ಬೋಧಿಪಿರದರ ಕತದಿಂದ |
ತನುವ ಸಿಂಗರಿಸುವುದು ಶುಭಯುತಿ
ಜನದ ವಸ್ತ್ರದಿನೆಂದು ಸೂಸುತ
ವಿನಯದಿಂ ಪ್ರಾರ್ಥಿಸಿದನಾ ಯೋಗೀಶ್ವರನ ಪದದಿ ||೫೫||

ಅನುದಿನಂ ತಪ್ಪದೊಲು ತನ್ನಯ
ಸನಿಯಕ್ಕೈತಂದುಕ್ತ ಧರ್ಮವ
ಮನನ ಮಾಡುವ ಚತುರ ಕೇಶವಚಂದ್ರನಿಂತೆನುತ |
ವಿನಯದಿಂ ಪ್ರಾರ್ಥಿಸಲು ತದ್ಯತಿ
ಜನಪನೊಳ್ಳಿತೆನುತ್ತಲಾತನ
ಮನದ ಬಯಕೆಗಳೆರಡನುಂ ತೀರ್ಚಿದನು ಮುದದಿಂದ ||೫೬||

ಓವ ರಜನೀಕಾಂತನಿಂದ ವಿ
ಭಾವರಿಗೆ ಸೊಗಸಹುದೊಮೇಣು ವಿ
ಭಾವರಿಯು ಕತದಿಂದ ರಜನೀಕಾಂತ ಸೊಗಸುವನೋ |
ಆವುದೆಂಬಂದದಲಿ ಯತಿವರ
ಕಾವಿಯಿಂ ಬೆಳಗುವನೊ ಮೆರೆವುದೊ
ಕಾವಿಯೋ ಯತಿಯಿಂದಲೆನೆ ಕಾಷಾಯಪಂ ತಳೆದ ||೫೭||

ಆಶುಗತಿಯಿಂ ಪುರದಿ ಸಂತಜ
ನೇಶ ಕೀರ್ತಿಲತಾಸುದತಿ ನಿಜ
ಪಾಶದಿಂ ವಿದ್ವಾಂಸರೆಲ್ಲರ ಬಂಧಿಸುತ್ತಿರಲು |
ಕೇಶವಂ ನಿಜಸದನದೊಳಗುಪ
ದೇಶವೊಂದನು ವಂಗಬಂಧುಗ
ಳಾಶಿಸಲು ನೇಮಿಸಿದ ನೆರೆದುದು ಹಲಸಹಸ್ರಜನ ||೫೮||

ಅದುವರಂ ಪಾಶ್ಚಾತ್ಯ ವಿದ್ಯಾ
ಮದದ ವಂಗೀಯಜನ ಬರಿಸ
ಕ್ಕದವ ವಿದ್ಯೆಯು ಕಲಿತ ಧಾರ್ಮಿಕ ಗುರುಗಳಿಂ ಮನಕೆ |
ಮುದಮುದಿಸದೆಂದರಿದೊಡಂ ನುತ
ಪದ ಯತೀಶನ ಭಾಷಣದಿನು
ನ್ಮದಿಸಿದಂದದಿ ಜಯವ ಘೋಷಿಸುತಿತ್ತು ಮುನಿವರನ ||೫೯||

ಮಾನವರ ಲೋಕದಲಿ ಬುದ್ಧ್ಯಭಿ
ಮಾನಿಯೆನೆ ವೇದಗಳ ಧರ್ಮ
ಜ್ಞಾನಿಯೆನೆ ಪರಮಾತ್ಮನಾತ್ಮಜ್ಞಾನ ವಿದ್ಯೆಗಳ |
ದಾನಿಯೆನೆ ಸುಚರಿತ್ರ ಕುಲ ಸ
ನ್ಮಾನಿಯೆನೆ ನೆರೆದೀನಸುಖಸಂ
ಧಾನಿಯೆನೆ ಯತಿವರನೆ ಸರಿಯೆನುತಿರ್ದುದಾಮಂದಿ ||೬೦||

ಒಂದುದಿನ ಮುನಿವರ್‍ಯನುಪವನ
ದೊಂದು ವಿಮಳಸ್ಥಾನದಲಿ ಬಳಿ
ವಂದ ಸಾಸಿರಮಂದಿ ಭಕ್ತರ ಮಧ್ಯೆ ರಂಜಿಸಿರೆ |
ಒಂದು ಸೌಮ್ಯ ವ್ಯಕ್ತಿ ಕಂಗಳ
ಮುಂದೆ ನರವೈಯಾಂತ ಶಾಂತಿಯೆ
ನಿಂದುದೆಂಬಂದದಲಿ ಬಳಿ ನಡೆತಂದುದೊಲವಿಂದ ||೬೧||

ಎಳೆಯ ಮಗುವಿನ ಭಾವ ಸೂಸುವ
ಹೊಳೆಮೊಗದಿನಾತ್ಮಿಕದ ಶಾಂತಿಯ
ಕಳೆಗಳಂ ಚೆಲ್ಲುತ್ತಲರೆತೆರೆದಿರ್ದ ಕಂಗಳಲಿ |
ಕೆಳಬಳವ ನೋಡುತ್ತ ನಿಜಕರ
ಗಳನು ಜೋಡಿಸಿ ಬಾಹ್ಯವಂ ಮರೆ
ದೊಳಗದೇನನೊ ಹುಡುಕುತೊಳಗೈತಂದುದಾ ವ್ಯಕ್ತಿ ||೬೨||

ರಚಿಪವನೆ ತಾನಾದೊಡಂ ಖರ
ರುಚಿಯ ಹಗಲೈತರಲು ಪೂರ್ವ
ಪ್ರಚುರ ಪೀಠದಿನೇಳುವಂದದಿ ಯತಿಜನೇಶ್ವರನು |
ಉಚಿತತರಮೆಂಬಂತೆ ಪೀಠದಿ
ವಿಚಲಿಸುತ ಮೇಲೆದ್ದು ಜಗ್ಗನೆ
ರುಚಿರವಚನಗಳಿಂದ ಭಗವನ್ ! ಬನ್ನಿರೊಳಗೆಂದ ||೬೩||

ಪರಮಗುರುಗಳಿ ಕೇಳಿರಿವರೇ
ಪರಮಹಂಸರು ರಾಮಕೃಷ್ಣರು
ನಿರುಕಿಸಿ ದಯಾನಂದ ಸರಸತಿಯಿವರು ಯತಿವರರು |
ಪರಮವೈದಿಕರೆನುತ ಕೇಶವ
ನೊರೆಯಲವದಿರು ನಯದಲಿ ಪರ
ಸ್ಪರರ ವಂದಿಸಿ ಕುಳಿತುಕೊಂಡರು ಶಾಂತಭಾವದಲಿ ||೬೪||

ಒಬ್ಬ ವಿಶ್ವಂ ಸತ್ಯವೆನಲಿ
ನ್ನೊಬ್ಬ ಕನಸೆಂದವನು ದೇವರ
ನೊಬ್ಬ ಜೀವರಿನನ್ಯನೆಂದೆನಲೆರಡನೆಯ ಸಂತ |
ಒಬ್ಬನೇ ಸದ್ರೂಪ ಭಾವಿಸ
ಲಿಬ್ಬರೆಂದಿಗುಮಿಲ್ಲವೆಂದವ
ನೊಬ್ಬದಿಯೊಳೇ ಕಲಿತರಿರ್ವರು ಬಿಸಿಲುಮಳೆಯಂತೆ ||೬೫||

ವೇದದರ್ಥವಮುಗುಚಿ ತಾ ಸಂ
ಪಾದಿಸಲು ಹೊಸದೊಂದು ಪಂಥವ
ನೀ ದಯಾನಂದಂ ಪ್ರಯತ್ನಿಪ ತರ್ಕವಾಪದಲೆ ।
ಪೋದಪುದು ದಿನಪೀತನಿಗೆ ಬೇ
ರಾದ ಬಗೆಯಿಲ್ಲೆಂಡು ಕಾಳಿಯ
ಗಾಧ ಭಕ್ತಂ ರಾಮಕೃಷ್ಣನು ನುಡಿದ ನಗುನಗುತ ||೬೬||

ದೇವನೊಬ್ಬನೆ ಬಲ್ಲನೆನ್ನಯ
ಭಾವನೆಯ ಸತ್ಯಾರ್ಥನಿರ್ಣಯ
ಗೈಪ ಕಾಮನೆಯುಳಿದು ಬೇರಿನ್ನೊಂದು ನನಗಿಲ್ಲ ।
ನೀವು ನುಡಿವುದು ನಿಮಗಿರಲಿ ವೇ
ದಾವಗತಮತ ನಮಗೆ ಸಾಕೆಂ
ದೋವಿ ನಗುನಗುತೆದ್ದ ಯತಿವರ ಮುಗಿದು ಕೈಗಳನು ||೬೭||

ತಾಂದ್ರವಿತಮಾನಸನು ವರ ದೇ
ವೇಂದ್ರನಾಥ ಠಕೂರ ಯತ್ಯವ
ನೀಂದ್ರ ಬ್ರಹ್ಮಸಮಾಜ ಸಂಸ್ಥಾವಾರ್ಷಿಕೋತ್ಸವಕೆ ।
ಸಾಂದ್ರಚಿತ್ತದಿ ಬಹುದೆನುತ ವಿಜಿ
ತೇಂದ್ರಿಯನ ಬೇಡಲ್ಕೆ ಮುನಿಭೂ
ಪೇಂದ್ರ ನಡೆದಂ ಬ್ರಹ್ಮಸಾಮಾಜಿಕರ ಮಂದಿರಕೆ ||೬೮||

ಮಂದಿರಕೆ ಯತಿವರ್ಯನೈತರ
ಲಂದು ಸೇರಿದ ಹಲವು ಸಾಸಿರ
ಮಂದಿ ಸಾಮಾಜಿಕರು ಗೌರವದಿಂದ ರವದಿಂದ |
ಒಂದೆಸಲ ಮೇಲೆದ್ದು ಭಗವನ್
ವಂದಿಸಿದೆವೆಂದೆನಲು ಯತಿವರ
ಮಂದಹಾಸದಿ ಮುಗಿದು ಕೈಗಳನಸ್ತು ಶುಭವೆಂವ ||೬೯||

ನೆರೆದರಿಗೆ ಪರಮಾತ್ಮ ಪೂಜೆಯ
ಪರಿಯರುಹಿ ಸದ್ಧರ್ಮಬೋಧವ
ಕರುಣಿಸುತಲಾ ಬ್ರಹ್ಮಸಾಮಾಜಿಕರನೆಲ್ಲರಸು |
ಪರಮಭಕ್ತರನೆಸಗಿ ಗೌರವ
ಪರನೆನಿಸಿ ತಾನಿಳಿದ ತಾಣಕೆ
ತಿರುಗಿಬಂದನು ಹರಸಿ ವಂದಿಸಿ ತತ್ಸಭಾಜನರ ||೭೦||

ಮುನಿಪನೀಪರಿ ಮೂರು ತಿಂಗಳ
ತನಕ ಕಲ್ಕತ್ತೆಯಲಿ ಬೋಧಿಸಿ
ವಿನುತದೇವನು ಭೂಮಿಗಿಳಿಯನು ಜೀವನವನಲ್ಲ |
ಜನುಮದಿಂ ವರ್ಣಗಳು ಬಾರವು
ಜನಿತ ವಿಗ್ರಹಪೂಜೆ ತಾಂ ಜಡ
ತನದ ಕಾರಣ ಭಾಗವತ ವ್ಯಾಸೋಕ್ತವಲ್ಲೆಂದ ||೭೧||

ಬಳಿಕ ಹುಗಲಿಗೆ ನಡೆದು ಯತಿವರ
ನಿಳಿಯೆ ತಾರಾಚರಣನಿತರರ
ಛಳದಿ ಪಾದಿಸಿ ಸೋಲನೊಪ್ಪುತ ತನ್ನ ದೃಗ್ಜಳದಿ |
ತೊಳೆದು ಮುನಿಪದಗಳನು ಭಗವನ್
ತಿಳಿಯೆ ಸತ್ಯವೆ ತಮ್ಮನುಡಿ ಪರ
ರಿಳಿಸೆ ಪಾದಕೆ ನಿಂತೆ ಮನ್ನಿಸಿರೆಂದು ಬೇಡಿದನು ||೭೨||

ಇಂತು ವಂಗಪ್ರಾಂತ್ಯ ಮಾನವ
ರಂತರಂಗದ ಸರಸಿಗಳಲತಿ
ಸಂತಸದ ಬೆಳದಿಂಗಳಿರಚುತ ಸತ್ಯಭಾವನೆಯ |
ಚಿಂತನದ ಕುಮುದಗಳನರಳಿಸು
ತಂ ತೊಳಗಿದಂ ದಿವ್ಯಜೀವನ
ಸಂತ ವನಧಿಸುಧಾಕರಂ ತವೆ ಹರಸೆ ಪರಮಾತ್ಮ ||೭೩||

|| ಇಂತು ಹದಿನಾಲ್ಕನೆಯ ಸಂಧಿ ||



# ಹದಿನೈದನೆಯ ಸಂಧಿ

ಸೂಚನೆ—ತನ್ನ ಮಡುಪೆ ಚೈಸಿಂದು ಘಾತಕ
ರನ್ನು ಸೀಶಂ ಕ್ಷಮಿಸಿ ಮೋಕ್ಷದ
ಹೆಮ್ಮೆಯಂ ಸಹ ಜರೆದು ಪೂರ್ತ್ಯರ್ಜನವ ಖಂಡಿಸಿದ ||

ಮುಂದೆ ಕೇಳಿರಿ ಪಯಣಗತಿಯಲಿ
ಒಂದು ಯತಿವರ ಕಾಸಗಂಜಿಗೆ
ಬಂದು ವೈದಿಕಪಾಠಶಾಲೆಯಲತುಳ ಮುದದಿಂದ |
ಅಂದದಿಂ ವಿದ್ಯಾರ್ಥಿಗಳಿಗುಂ
ಸಂದ ಗುರುಜನಕುಂ ನಿಜಾಶ್ರಯ
ದಿಂದಲಾತ್ಮಿಕಜೀವನದ ನವತೆರದಿ ಕರುಣಿಸಿದ ||೧||

ದಿನವು ಶಿಷ್ಯರ ಮಧ್ಯೆ ಕುಳ್ಳಿ
ರ್ದನುವಿನಿಂ ತಾ ಸ್ವತಃ ತಮ್ಮಯ
ತನುಬಲವ ವರ್ಧಿಸಲು ಹಲವಿಧಮಲ್ಲವಿದ್ಯೆಗಳ |
ಮನವಿನೋದಿಪ ತೆರದಿ ಕಲಿಸುತ
ತಿನುವ ಸಮಯದಿ ನಿಂದುನಗಿಸುತ
ಮುನಿಜನೇಶ ಜಗದ್ಗುರುವು ಬಾಲಕನವೊಲ್ಮೆರೆದ ||೨||

ಆ ಯತೀಶ್ವರ ಹಲದಿನವ ತರು
ವಾಯ ನಡೆದಾಲೀಗಢಕೆ ತಾಂ
ರಾಯಜಯಕೃಷ್ಣಾಖ್ಯಭಕ್ತನ ದಿವ್ಯ ಭವನದಲಿ |
ಈಯುತುಪದೇಶಗಳ ರಂಜಿಸ
ಲಾಯಿತೆಲ್ಲೆಡೆ ಕೀರ್ತಿಗಾಯನ
ಜೀಯ ಜೀಯೆನುತಲ್ಲಿ ನೆರೆದುದು ಹಲ ಸಹಸ್ರಜನ ||೩||

ಹಬ್ಬುತಿರೆ ಯತಿಕೀರ್ತಿ ದಿನದಿನ
ಕುಬ್ಬಿದುದು ಭಕ್ತಾಬ್ಧಿ ಪಂಡಿತ
ರಬ್ಬರಿಸುತ್ತೈತಂದು ನಸುಹೊತ್ತಿನಲಿ ಸಿರಬಾಗಿ |
ಅಬ್ಬ ಎನ್ನುತ ಪೋಪರಾಲಯ
ದೊಬ್ಬದಿಗೆ ಮೋಣೇಸುಮುಹುಮುದ
ಕಬ್ಬದವರ್ಕೈತಹರು ವಾದಿಸಲನುದಿಸವು ಸಂಜೆ ||೪||

ಒಂದುದಿನ ಬುಧನೊರ್ವ ದೇಗುಲ
ದೊಂದು ಜಗುಲಿಯನೇರಿ ಕೆಳಗಡೆ
ನಿಂದ ಯತಿವರನೊಡನೆ ವಾದಿಸುತಿರಲು ಮಂದಿಗಳು |
ಅಂದವಗೆ ಕನಲುತ್ತಲೀಪರಿ
ಯಿಂದ ಯತಿಪನ ಹಂಗಿಸಲು ಬೇ
ಡೆಂದು ಪೇಳ್ದೊಡಮಲ್ಲಿ ಮೆರೆದನು ಮೂಢಪಂಡಿತನು ||೫||

ಜನರು ಮುಳಿವುದ ಕಂಡು ತದ್ಯತಿ
ಜನಪ ತಮ್ಮದಿರೇಕೆ ಮುಳಿವಿರಿ
ಮನೆಯನೇ ತಾವಡರಿ ನಿಲ್ಲಲಿ ಪಂಡಿತೋತ್ತಮರು |
ನನಗಿದೇನಪಮಾನ ಮೇಲಿರಿ
ಮನುಜ ದೊಡ್ಡವನಹನೆ ನೋಡಿರಿ
ಜನರೆ ಪಾಯಸ ಮರದಮೇಗಡೆ ಕುಳ್ಳಿಹುದನೆಂದ ||೬||

ತರುಣನುದ್ಧವಸಿಂಹ ಸೊಗಸಿಂ
ಧರಿಸಿ ಹೊಳೆವ ವಿದೇಶಿವಸ್ತ್ರವ
ಪರಮ ನಯದಿಂ ತನ್ನ ತಂದೆಯ ಕೂಡುತೊಂದು ದಿನ |
ಪರಮಹಂಸನ ನೋಡಲೈತಂ
ದೆರಗೆ ಮುನಿವರ ಪೈದಡವಿಕರ
ಸಿರಿಸಿ ಸಿರದಲಿ ನೋಡುತವನುಡುಪುಗಳನಿಂತೆಂದ ||೭||

ತಮ್ಮ ನೀನೀವೇಷ ಧರಿಸಲು
ನಿಮ್ಮವರ ಮಧ್ಯದಲಿ ಗೌರವ
ಹೊಮ್ಮಿದುದೆ ನಿಜಪಿತನ ನಿಟ್ಟಿಸು ಸರಳತನದಿಂದ |
ತಮ್ಮ ದೇಶದ ವಸ್ತ್ರವಿಸರವ
ತಮ್ಮ ರೀತಿಯಲುಟ್ಟಿಹರು ಮ
ತ್ತಮ್ಮಮತೆ ಸನ್ಮಾನಮವರನೆ ಸೇವಿಸುವುದೆಂದ ||೮||

ಒರಟೆರಲಿ ನಯಮಿರಲಿ ಹೊರಗಣ
ಮೆರುಗಿನಲಿ ಮನವಿಡದೆ ನಿಜದ
ಕ್ಕರೆಯ ತೊರೆಯದೆ ತನ್ನದೇಶದ ವೇಷಭೂಷಣವ |
ಪರಮಗೌರವದಿಂದ ಕಾಂಬುದೆ
ತರುಣ ಶೋಭಾಜನಕವೈಸಲೆ
ತಿರುಳಿದಾತ್ಮೋನ್ನತಿಯ ಪಥವೆಂದೊರೆದನಾ ಯತಿಪ ||೯||

ವಿಹಿತ ಕರ್ಮವಿಚಾರಿ ಸ್ವೈಯದ
ಮುಹಮುದಂ ಮುಸ್ಲಿಮ ಜನಂಗಳ
ಮಹಿತಕೀರ್ತಿಯ ವಿಶ್ವ ವಿದ್ಯಾನಿಲಯ ಜನ್ಮದನು |
ಮಹಿಮಪೂಜಿತ ಯತಿಯೆಡೆಗೆ ನಯ
ಸಹಿತ ನಡೆತಂದೊಂದುದಿನ ಸ
ನ್ನಿಹಿತ ಕಾರ್ಯದಿ ಮುನಿಪ ಮುಳುಗಿರೆ ನಿಟ್ಟಿಸುತ ನಿಂದ ||೧೦||

ಗೌರವಾನ್ವಿತ ಸ್ವೈಯದಂ ಬಳಿ
ಸಾರಿ ವಂದಿಸೆ ಯತಿವರಂ ಮನ
ಸಾರ ಮರುವಂದಿಸುತ ವದನದಿ ಮಂದಹಾಸವನು |
ಬೀರಿ ನಮ್ಮ ಕುಟೀರದಲಿ ಸುಖ
ದೋರೆ ಪೀಠಗಳಿಲ್ಲ ಕಷ್ಟವ
ಸ್ವೈರಿಸುತ ಬರಿನೆಲದೆ ಕೂಡಿರಿ ಮನ್ನಿಸುವುದೆಂದ ||೧೧||

ಮುನಿಪನಿಂತೆನೆ ಸ್ಫೈಯದಂ ಸಲೆ
ವಿನಯದಿಂ ತಮಗೆಣೆಯಸಂತರ
ಸನಿಯ ನೆಲದಲಿ ಕುಳಿತುಕೊಳುವುದೆ ನಮ್ಮ ಸದೃಶದ |
ಜನಕೆ ಶೋಭಾಜನಕವ್ವೈಸಲಿ
ಜನಿಸುವುದು ಸುಖಕೂಡವಿದರಿಂ
ದೆನುತ ಕುಳಿತನು ಬಳಿಕ ಮುನಿಪರನವಗೆ ಬೋಧಿಸಿದ ||೧೨||

ಸುಳಿದು ಹಲವೆಡೆಗಳಲಿ ಭಕ್ತಾ
ವಳಿಗೆ ಯತಿವರ ಬೋಧಿಸಿರೆ ಪಳ
ಗೆಳೆಯ ರಂಗಾಚಾರ್ಯ ಮಧುರಾಮಂಡಲಂಗಳಲಿ |
ಸುಳಿಸುಳಿದು ಮುಗ್ಧರಿಗೆ ಕಂಠಿಯ
ತುಳಸಿಮಾಲೆಯನಿತ್ತು ವೈಷ್ಣವ
ಕುಳವ ಬೆಳೆವುದ ಕೇಳಿ ಮಧುರೆಗೆ ನಡೆದ ಜವದಿಂದ ||೧೩||

ಮುಂದಕಾಲಿಸಿ ಬಾಲರೆ ದಯಾ
ನಂದ ರಂಗಾಚಾರ್ಯ ಪಂಡಿತ
ನಂದು ನೆಲಸಿದ ಮನೆಯ ಹಿಂದಣದೊಂದು ತೋಟದಲಿ |
ನಿಂದು ಮೂರ್ತ್ಯರ್ಚನವ ದೇವ ವ
ಸುಂಧರೆಯೊಳವತರಿಪನೆಂಬುದ
ನಿಂದು ಸಾಧಿಪ ಸಾಸಿಗರು ಬರಲೆಂದು ಘೋಷಿಸಿದ ||೧೪||

ನೆರೆದ ಹಲಸಾಸಿರದ ಮಧ್ಯದಿ
ಪರಮಹಂಸನು ಬಿಚ್ಚುನುಡಿಯಿಂ
ಪರಮದೇವನ ದೇಪಧಾರಣ ಮೂರ್ತಿ ಪೂಜೆಗಳ ।
ಜರೆದು ಖಂಡಿಸಿ ವೈಷ್ಣವರ ಮತ
ದಿರವಮುರವನೆ ಕಡಿಯುತಿದ್ದೊಡ
ಮರಿದು ಪಿಟ್ಟಿನಲಿಲ್ಲ ರಂಗಾಚಾರ್ಯ ಗುರುರಾಯ ॥೧೫॥

ಆ ವಿನುತ ಯತಿ ವೈಷ್ಣವರ ಗುರು
ದೇವ ರಂಗಾಚಾರ್ಯರಿಗೆ ತಾ
ನೋವಿ ಪತ್ರವ ರಚಿಸಿ ವೇದದಿ ಮೂರ್ತಿ ಪೂಜನವ ।
ತಾವು ಶಾಸ್ತ್ರಾರ್ಥದಲಿ ಸಿದ್ಧಿಸಿ
ರಾವು ವಾದಿಸಲುದ್ಯತರು ದಯ
ಗೈವುದೆನ್ನುತ ಕಳುಹಿಕೊಟ್ಟನು ಪರ ನಿಮಂತ್ರಣವ ॥೧೬॥

ಸುಳ್ಳು ನೆಪಗಳರಚಿಸಿ ದಿನಗಳ
ತಳ್ಳಿ ರಂಗಾಚಾರ್ಯ ಮಂದಿಗ
ಳಳ್ಳೆದೆಯನವನೆಂಬುದರಿತರು ವೈಷ್ಣವರ ಮತದ ।
ಪೊಳ್ಳು ಹೊರವರೆ ಗುರುವು ಮೌನವ
ದೊಳ್ಳಿತೆಂದಿರೆ ಯತಿಯ ಕೀರ್ತಿಯ
ಬಳ್ಳಿಸುಪ್ಪದಯಾವನೀಜಂಗಳನು ಹಬ್ಬಿದುದು ॥೧೭॥

ತಮ್ಮ ಗುರುವಿನ ದುರ್ಗತಿಗೆ ಚಿ
ತ್ತಮ್ಮುಳಿದು ಕುದಿಯುತ್ತ ಮುನಿವರ
ನಮ್ಮಹಿಯೊಳಿಲ್ಲೆನಿಸೆ ರಂಗಾಚಾರ್ಯ ಗುರುವರನ |
ಒಮ್ಮತದ ಶಿಷ್ಯದಿರು ಯತ್ನಿಸು
ತಮ್ಮರೆಯೆ ಮುನಿವರನ ಜೀವನ
ನೆಮ್ಮದಿಗೆ ಚಿಂತಿಸುತಲಿರ್ದರು ಭಕ್ತಜನ ಮನದಿ ||೧೮||

ಒಂದುದಿನವೈನೂರು ಜನರೊಂ
ದೊಂದು ಕೋಲನು ಹಿಡಿದು ಯತಿಯನು
ಕೊಂದೆ ತೀರುವೆವೆಂದು ಮನಬಂದಂತೆ ನಿಂದಿಸುತ |
ಬಂದು ಬಿಡಾರವನು ಮುತ್ತಲು
ನಿಂದ ರಾಜನ್ಯಜನ ಬಾಗಿಲ
ನಂದು ಮುಚ್ಚಪ್ಪಣೆಯ ಬೇಡಿತು ಧೂರ್ತದಂಡನಕೆ ||೧೯||

ಮಾಳಿಗೆಯ ಮೇಲೇರಿ ಮುನಿಜನ
ಮೌಳಿ ತನ್ನೆಡೆವಂದು ನಯದಿಂ
ಖೂಳರನು ದಂಡಿಸುವೊಡಾಜ್ಞೆಯ ಕೇಳ್ವ ಭಕ್ತರಿಗೆ |
ತಾಳಿರೈ ಮುನಿಯದಿರಿರೀ ಮೂ
ಡಾಳಿಯಾಲಸ್ಯವನು ವರ್ಜಿಸಿ
ಧಾಳಿಯಿಟ್ಟಹುದೊಂದು ಲಾಭಮೆಯಲ್ತೆಗಡಯೆಂದ ||೨೦||

ವರಯತಿಯ ಬೋಧನಕೆ ಭಕ್ತರು
ನೆರೆದಿರಲು ತನ್ಮುನಿಯ ಲಜ್ಜಿಸೆ
ದುರುಳನೊಬ್ಬನು ಮುಷ್ಯವಿಕ್ರೀತನನು ಕಟುಕನನು |
ಕರೆಸಿ ಜನಮರಿವಂತೆ ಋಣವನು
ಹರಿಸಿ ಹೇ ಸ್ವಾಮಿಗಳೆ ನೀವೆಂ
ದರುಹಿ ಕೂಗಿರೆನುತ್ತ ಬೋಧಿಸಿ ಸಭೆಗೆ ಕಳುಹಿಸಿದ ||೨೧||

ತದ್ಯತೀಶ್ವರ ವೇದಧಾರ್ಮಿಕ
ವಿದ್ಯೆಗಳ ಭಕ್ತರಿಗೆ ತಿಳುಹಿಸ
ಲುದ್ಯಮಿಸಿ ಮಹತೀಸಭೆಯ ಮಧ್ಯದಲಿ ರಂಜಿಸಿರೆ |
ಸದ್ಯದಲೆ ಋಣತೀರ್ಚೆರೆನ್ನುತ
ಮದ್ಯದವನುಂ ಕಟುಕನುಂ ಕೃತ
ವಿದ್ಯಮುನಿಪನ ಕುರಿತು ಕೂಗಿದರಂದು ಮೌಢ್ಯದಲಿ ||೨೨||

ಈಪರಿಯಿನಾ ಮರುಳರರಚಲು
ಕೋಪಮಿಕ್ಕಿತು ಜನಕೆ ಮೂರ್ಖಾ
ಲಾಪವೆನ್ನುತ ಸೈರಿಸೆಲ್ಲರ ಯತಿಪ ಭಾಷಣವ |
ಸೈಪಿನಿಂ ಮುಗಿಸೊಡನೆ ಹತ್ತಿರ
ಕಾಪುರುಷರಂ ಕರೆದು ಗಡನಿಮ
ಗೀಪರಿಯ ಮತಿವಿತಕೆಂದೌಂಕಿದನು ಕೊರಳುಗಳ ||೨೩||

ಇಂತು ಕೈಗಳಿನದುಮಿ ಕಂಠಗ
ಳಂ ತವೆ ಮುನೀಶ್ವರನು ನಿಮುಗಾ
ರಿಂತೆಸಗೆ ಪೇಳ್ದರೆನೆ ಮಾಂಗೀರಾಮನಾಜ್ಞೆಯಲಿ |
ಸಂತವರ ಧನದಾಸೆಯಿಂ ನಾ
ವಿಂತು ಗೈದೆವು ಮುಳಿವುದರಿದಿರ
ಲಿಂತೆಸಗುತಿರಲಿಲ್ಲವೆಂದರು ನಡುಗುತಾಜನರು ||೨೪||

ಮನ್ನಿಸಪರಂ ಕಳುಹೆ ಯತಿಪರ
ನುನ್ನತಿಯನ್ನೈದಿದುದು ಕೀರ್ತಿಗ
ಳನ್ನಗಂ ಹಲಮೂಢಮಾನವರೊರ್ವರೀರ್ಷ್ಯೆಯನು |
ಚೆನ್ನೆ ಯತಿಗೆ ಕಳಂಕ ಭಕ್ತ ಜ
ನನ್ನರಿವ ಸಭೆಗೈದಿ ತಹುದೆನೆ
ಬಿನ್ನಣಂಗಳ ಬಿತ್ತರಿಸುತಲಿ ಬಂದಳಾ ಒಳಿಗೆ ||೨೫||

ತುಂಬಿನೆರೆದುದು ಮಂದಿಯತಿಸೂ
ತ್ಯಂಬೆಳೆದ ಗಂಭೀರ ಭಾವದಿ
ಸುಂಬರಿಸಿ ಸುಜ್ಞಾನವೆಳಕಂ ಮೌಢ್ಯತಿಮಿರವನು |
ಹಿಂಬದಿಗೆ ಸರಿಸುತಿರೆ ಮೂಢನಿ
ತಂಬಿನಿಯು ನಡೆತಂದಳಲ್ಲಿಗೆ
ತುಂಬುಯೌವನಮದದಿ ಮೈಮರೆಯುತ್ತ ಮೋಹದಲಿ ||೨೬||

ಹೆಪ್ಪುಗಟ್ಟಿದ ಬೆಣ್ಣೆ ಜೆಂಕಿಯ
ನಪ್ಪೆ ಬಂದರೆ ಕರಗಿ ಹರಿಯದೆ
ತಪ್ಪ ತಿಳಿದಳು ತರುಣಿ ಯತಿಪನ ನೇತ್ರತೇಜವನು |
ಒಪ್ಪುತಿಹ ಸೌಮ್ಯಾಕೃತಿಯ ಕಂ
ಡಪ್ಪಿದಳು ಕೆಳನೆಲವನಾನನ
ಕಪ್ಪುವಿಡಿಮುದು ಹೃದಯನಡುಗಿತು ನೆನೆದ ಪಾತಕಕೆ | ೨೭||

ತುಂಬಿವರಲಾಹೃದಯ ಸುರಿದಿರೆ
ಕಂಬನಿಗಳಾ ತರುಣಿ ದನಿಗಳ
ನುಂಬ ಗದ್ಗದದೊಡನೆ ಭಾಷಣಕಾರ್ಯಮುಗಿದೊಡನೆ |
ಮುಂಬರಿದು ಕೆಳಕುರುಳಿದಳು ಚಿ
ತ್ತಂ ಬಿಗಿಯೆ ದುಃಖದಲಿ ಗುರುವರ
ನಂಬಿ ತಾಪವ ನೆನೆದ ಪಾಪವ ಮನ್ನಿಸುವುದೆನುತ ||೨೮||

ಮುಂದಿಹದನೇನೆಂದು ಸೋಜಿಗ
ದಿಂದ ನಿಂದಿರೆ ಯತಿಜನೇಶ್ವರ
ನಂದುನಾಲ್ಯಾನನವ ನೋಡದೆ ನಯನನಳಿನಗಳ |
ಹೊಂದಿಸೆದೆಯೊಳು ತಂಗಿ ವಿಭುದಯ
ದಿಂದ ನಿನ್ನೀ ಭದ್ರ ಚಿತ್ತಮೆ
ಮುಂದೆ ಸಂತತಮಿರಲಿ ಶೋಕಿಸಬೇಡ ಹೋಗೆಂದ ||೨೯||

ಮತ್ತೆ ಯತಿಭೂಪಂ ಪ್ರಯಾಗಕೆ
ಚಿತ್ತವಿಸಲೋಪ್ಯೋಪವನದಲಿ
ಬಿತ್ತರಿಸಿ ನಿಜಕುಟಿಯ ಮುದ್ರಿಸಿ ಹಸ್ತಪತ್ರಕವ ।
ಚಿತ್ತಸಂಶಯಪರರು ನಮ್ಮೆಡೆ
ಗಿತ್ತ ಬಂದಪುದೆಂದು ಘೋಷಿಸ
ಲತ್ತ ಭಕ್ತರ ನೆರವಿ ಸೇರಿತು ಹಲವುಸಾಸಿರದಿ ॥೩೦॥

ಬಂದು ಸುಂದರಲಾಲ ಮೊದಲಹ
ಸುಂದಿಗಳು ಯತಿವರನ ಕುಟಿಗಿ
ನ್ನೊಂದುದಿನ ಗುರುದೇವ ಭಗವದ್ಧ್ಯಾನಪರನಾಗಿ ।
ಒಂದುಕಡೆ ಕುಳ್ಳಿಹುದನೀಕ್ಷಿಸಿ
ಒಂದೆ ನೀರವರಾಗಿ ಸರಿದ್ಯೆ
ತಂದು ಕೈಸಾಲೆಯಲಿಕುಳಿತರು ಹಾರ್ದಮುನಿವರನ ॥೩೧॥

ಕೊಂಚ ಸಮಯದಿ ಯತಿಪ ಹೊರವಂ
ದಂ ಚತುರ ಭೂದೇವನೊಬ್ಬನು
ಸಂಚರಿಪ ಬಕಭಕ್ತಿಯಿಂದನಿತರಲಿ ಕಾಲ್ಗೆರಗಿ ।
ವಂಚನದ ಸಿಹಿಯುಣಿಸನರ್ಪಿಸಿ
ಕೊಂಚ ಕೊಳಿರೆನೆ ಮುನಿಜನೇಶ್ವರ
ಮಿಂಚಿಸುತ್ತಿಳನಗೆಯ ಕೈಲದ ಪಿಡಿಯುತಿಂತೆಂದ ॥೩೨॥

ಸ್ವಲ್ಪ ನೀ ಕೊಳ್ಳೆನುತ ಶುಭ ಸಂ
ಕಲ್ಪ ಯತಿ ಭೂದೇವನಿಗೆ ಕೊಡ
ಲಲ್ಪಮತಿಯುದ ತಿನದೆ ನಿಂದಿರೆ ಯತಿಪಗರ್ಜಿಸುತ |
ಬಲ್ಪನಿಂ ಭುಂಜಿಸೆಯುದೇಕೆನು
ತಲ್ಪಿಸಿಯೆ ಕೋಪವನು ಪಿರಚಿಸೆ
ತಲ್ಪಮಾದುದು ನೆಲವು ಭೂಸುರ ಬಿಳ್ದ ಕಂಪಿಸುತ ||೩೩||

ಕರಪಿಡಿದು ಮೇಲವನನೆಬ್ಬಿಸಿ
ಪರಮಹಂಸನು ಸಿಲಿಸೆ ತದ್ಭೂ
ಸುರನು ಭಯದಿಂ ನಡುಗುತಿರ್ದನು ಮುನಿಪನಾಸಮಯ |
ಬೆರಸಿ ವಿಷವಂ ತಿಂಡಿ ತಂದಿಹ
ಮರುಳನಿವನೆಮಗೆನುತ ಪೇಳ್ದೊಡ
ನರರೆ ಬಹುದಂ ನೋಳ್ಪರಿಪರೆನುತಿತ್ತು ಭಕ್ತಜನ ||೩೪||

ಕನಲಿ ಸುಂದರಲಾಲನೀ ಧೂ
ರ್ತನನು ಶಾಸಕಜನಕೆ ಕೊಟ್ಟಪೆ
ನೆನುತವನ ಕರವೆಳೆಯೆ ಮುನಿಭೂಕಾಂತ ದಯೆಯಿಂದ |
ಮುನಿಯ ಬೇಡೈ ತಮ್ಮ ಪಾಪದಿ
ನೆನಿತು ಕಂಪಿಸುತಿಹನು ನೋಡೀ
ಮನುಜನಕ್ಕಟ ಶಿಕ್ಷೆ ದಕ್ಕಿತು ಸಾಕುಸಾಕೆಂದ ||೩೫||

ಬಳಿಕ ಕರುಣಾವನಧಿಮುನಿ ಬರ
ಸೆಳೆದು ತನ್ನೆದೆಗಪ್ಪಿ ಕಟುವಿಷ
ವೊಳಿತ ತಿಂಡಿಯನಿತ್ತ ವಿಪ್ರನನಂಜದಿರುತಮ್ಮ |
ಮುಳಿಸೆನಗೆ ನಸುವಿಲ್ಲ ಚಿತ್ತವ
ತೊಳೆದುಸುಖದಿಂ ಬಾಳುನಡೆಯೆನು
ತಳುವ ನಿಲಿಸಿದನಿಕ್ಷುವಗಿದರೆ ಸಿಹಿಯನೇ ಕೊಡದೆ ||೩೬||

ಆದಿನಂಗಳಲೊರ್ವವೃದ್ಧತ
ಪೋಧನಂ ಗಂಗಾತಟದಿ ನೆಲೆ
ಗೈದು ತಾನು ವಯಸ್ಸಿನಲಿ ಬಹು ಹಿರಿಯನಾಗಿರಲು |
ಆ ದಯಾನಂದಯತಿ ಸ್ವಪ್ರಿಯ
ನಾದ ಕತದಿಂ ವತ್ಸಪದ ಸಂ
ಬೋಧನದಿ ನುಡಿಸುತ್ತಲಿರ್ದನು ಸ್ನೇಹಭಾವದಲಿ ||೩೭||

ಒಂದುದಿನ ತಿರುಗಾಡಲು ದಯಾ
ನಂದ ಪೋಗಿರಲಾ ವಯೋವೃ
ದ್ಧಂ ದಡದಿ ಕುಳ್ಳಿರ್ದು ನೀ ನಿವೃತ್ತಿಮಾರ್ಗದಲೆ |
ನಿಂದಿರುತ್ತ ಪರೋಪಕಾರದ
ಗೊಂದಲಕೆ ಬೀಳದಿರೆ ಜನ್ಮವಿ
ದೊಂದರೊಳಗೇ ಮುಕ್ತನಾಗುತಲಿರ್ದೆ ಕೇಳೆಂದ ||೩೮||

ಮಂದಿಮೋಹದ ಗೊಂದಲದಿ ನೆಲೆ
ನಿಂದ ಕತದಿಂ ವತ್ಸ ನೀನಿ
ನ್ನೊಂದು ಜನ್ಮವ ತಳೆದೆ ಮೋಕ್ಷವಗಳಿಸಲಾದಪುದು
ಎಂದನು ವಯೋವೃದ್ಧನದ ಕೇ
ಳಂದು ಹುಸಿನಗೆ ಸೂಸುತ ದಯಾ
ನಂದ ಭಗವನ್ ನನಗೆ ಮೋಕ್ಷದ ಚಿಂತೆಯಿಲ್ಲೆಂದ ||೩೯||

ನಂಬಿ ಕಿವಿಗುಡಿರ್ಸ್ಯ ಮಹಾತ್ಮನ್
ತುಂಬಿದೀ ದೇಹದಲಿ ಮೋಕ್ಷದ
ಹಂಬಲವೆ ನನಗಿಲ್ಲವಾವಾರ್ತ ಜನಕೋಟಿಗಳ |
ಕಂಬನಿಗಳಂ ತೊಡೆಯೆ ನಿಂದಿಹೆ
ಬೆಂಬಲಕೆ ನಾನವರು ಸುಖವವ
ಲಂಬಿಸಲು ಸಾಕೆನಿತೆ ಜನ್ಮಗಳಿರಲಿ ನಮಗೆಂದ ||೪೦||

ಜನ್ಮಸಾಸಿರ ಬರಲಿ ಚಿಂತಿಸೆ
ಸನ್ಮನುಷ್ಯನ ತೆರದಿ ಸಂತತ
ಚಿನ್ಮಯಪ್ರಭು ಪುತ್ರಕೋಟಿಯ ಶೋಕಹರಿಸುತ್ತ |
ಸನ್ಮತಿಯೊಳಾನಿರಲು ತಾನೇ
ತನ್ಮಯತೆಯಿಂ ಮುಕ್ತನಾದಪೆ
ಮನ್ಮನದ ಹಂಬಲಿದನಾಲಿಸಿರೆಂದನಾ ಮುನಿಪ ||೪೧||

ಎಲ್ಲರೋಪಾದಿಯಲಿ ತಾ ಗುರು
ಪಲ್ಲ ವಿರಜಾನಂದ ಮಾನವ
ರೆಲ್ಲ ಶೋಕದಲಿರಲು ಮೋಕ್ಷವ ತಾನು ಸಾಧಿಸುವ |
ಸೊಲ್ಲ ನಿಜಶಿಷ್ಯರಿಗೆ ಬೋಧಿಸ
ಲಲ್ಲ ನಾಂ ಗುರುಕೀರ್ತಿ ಕೆಡಿಸುವ
ನಲ್ಲವೆಲ್ಲರ ಮೋಕ್ಷವೆನ್ನಯ ಮೋಕ್ಷವಹುದೆಂದ ||೪೨||

ಬಳಿಕ ಮುಂಬಾಪುರಿಯ ಭಕ್ತರ
ವಳಯ ಬೇಡಿದೊಡೊಳ್ಳಿತೆನ್ನುತ
ಕಳೆದು ಹಲದಿನಗಳನು ಯತಿವರ ಹಲಪುರಂಗಳಲಿ |
ಸುಳಿಯಿಸುತ ಧರ್ಮಪ್ರಭೆಯ ಕಳೆ
ಗಳನು ಕೊನೆಗೈತಂದ ಪಶ್ಚಿಮ
ದಿಳೆಯ ದೇಶವ ಥಳಕುಗಳ ಬೊಂಬಾಯಿ ಪತ್ತನಕೆ ||೪೩||

ಹೊಗೆಯಬಂಡಿಯ ನಿಲುವನೆಗೆ ಮುದ
ಮಿಗಲು ಹಲಸೂರ್ಮಂದಿ ಭಕ್ತರು
ಸೊಗದಲೈತಂದಿಳಿದ ಯತಿಭೂಪಾಲನನು ಕಂಡು |
ಬಗೆಬಗೆಯ ಸತ್ಕಾರ ವಿಭವವ
ಸೊಗಸಿನಿಂ ಕರೆದಿಳಿಸಿದರು ಜಗ
ಜಗಿಪ ತಾಣದಿ ವಾಲುಕೇಶ್ವರದೊಂದು ಭವನದಲ ||೪೪||

ಬಂದೊಡನೆ ಮುನಿಪಾಲ ಸಂಗತಿ
ಮುಂದಿಯಲಿ ಹಬ್ಬಿದುದು ಸಾಸಿರ
ವೊಂದು ಸೇರಿದುದಿಳಿವ ಕಡೆಯಲಿ ಕೇಳೆ ಧರ್ಮವನು |
ಸಂದೆಗವನುಳ್ಳವರು ಯತಿಯೆಡೆ
ಬಂದು ಹರಿಸುವುದೆಂದು ಘೋಷಣ
ಮುಂದು ನಡೆದುದು ಮೂರು ಭಾಷಾಸ್ತೋಮ ಮುದ್ರಣದಿ ||

ಎಲ್ಲ ಕಡೆಯುಂಡದಲಿ ತತ್ಪುರ
ದಲ್ಲಿ ಸಹ ಮತಪಂಥವಾದಿಗ
ಳಲ್ಲಿ ಮಿಕ್ಕಿತು ರೋಷ ಭಕ್ತರು ಹಲರು ಯತಿವರನ |
ವಲ್ಲಭನ ಮತವೊಂದ ಖಂಡಿಸಿ
ರೆಲ್ಲ ಮತಗಳ ಸುಮ್ಮನುಳಿದವು
ದಿಲ್ಲಿ ಹಿತವೆಂದರುಹೆ ನಕ್ಕನು ಮುನಿ ದಯಾನಂದ ||೪೭||

ಜಳಧಿ ತೆರೆಮುಸಗುವಲಿ ಕೆಡಿಸದೆ
ಮಳಲ ಮನೆಗಳನೆಲ್ಲ ಸಲೆ ಮು
ಕ್ಕಳದು ಹಿರಿಯರದೆಂದು ಬಗೆವುದೆ ತಸ್ಯತೀಶ್ವರನು |
ಅಳಿಸನೇ ಪೊಳ್ಳುಡಿಯನಾರೊಳೆ
ಬೆಳೆದಿರಲಿ ವಾದಿಸುತ ಪಂಥಿಗ
ಳೊಳಗೆ ಖಂಡಿಸುತಿರ್ದ ಮಿಥ್ಯಾಮತಸಮಾಕುಲವ ||೪೮||

ಮುನಿಪ ವೈಷ್ಣವ ಮತದಿ ಪೇಳಿದ
ತನುಮನಧನಂಗಳ ಸಮರ್ಪಣ
ಜನಿತವಿಧಿ ಖಂಡಿಸಲು ಜೀವನನೆಂಬ ಗೋಸಾಯಿ |
ಮುನಿದು ಯತಿವರನಡುಗೆಗೈಯುವ
ಮನುಜನಂ ಬಲದೇವ ಸಿಂಹನ
ಸನಿಯ ಗೋಪ್ಯದಿ ಕರೆದು ತೋರಿಸಿದಂ ಪ್ರಲೋಭನವ ||೪೮||

ಏನನಾದೊಡಮೆಸಗಿ ಯತಿಯಂ
ನೀನು ಸಾಯಿಸೆ ನಿನಗೆ ಕೊಟ್ಟಪೆ
ನಾನು ಸಾವಿರ ರೂಪ್ಯಕಂಗಳನೆನುತ ಗೋಪ್ಯದಲಿ |
ಆ ನರಂಗದ ಬರೆದುಕೊಡುತಲಿ
ತಾನು ರೂಪ್ಯಕಮೈದನಾಗಳೆ
ಮೌನದಿಂ ಕೈಗಿತ್ತು ಕಳುಹಿದನಂದು ಗೋಸಾಯಿ ||೪೯||

ಪ್ರಾಣಘಾತದ ಸಂಚ ನಡೆಯಿಸಿ
ಬಾಣಸಿಗಬರೆ ಯೋಗವಿದ್ಯೆಯು
ಜಾಣ ಯತಿಯಾತನ ಮನೋಗತವಂತರಕ್ಷದಲಿ |
ಕಾಣುತೆಲೆ ಬಲದೇವ ಸಿಂಹನೆ
ಮಾಣು ಗೋಸಾಯಿಗಳ ನೇಣಗೆ
ಗೋಣ ಸಿಕ್ಕಿಸೆ ಹೋದೆಯಲ್ಲವೆ ಸತ್ಯವನುಹೆಂದ ||೫೦||

ಸಂಚನೆಲ್ಲವ ಮೊದಲೆ ತತ್ಸ
ತ್ಯಂಚರ ಮುನೀಶ್ವರನು ತಿಳಿದಿರೆ
ವಂಚನದಿ ಫಲವಾಗದೆಂಬುದನರಿತ ಬಾಣಸಿಗ |
ಕೊಂಚವುಂ ಬೈತಿಡದೆ ಮೇಲುದ
ದಂಚ ಕಂಬನಿಯಿಂದ ನೆನೆಸುತ
ಸಂಚಲಿತ ಭೀತಿಯಲಿ ಪೇಳಿದನೆಲ್ಲ ಕಂಪಿಸುತ ||೫೧||

ಕಂಪಿಸುತ ಭಯದಿಂದ ಬಾಣಸಿ
ಗಂ ಪುಸಿಯದಂತೆಲ್ಲವರುಹುತ
ಸಿಂಪಡಿಸಿ ಕಂಬನಿಯ ಜಳವನು ಯತಿಪದಾಂಬುಜಕೆ |
ಪೆಂಪಳಿದು ನೆಲಕುರಳೆ ಯತಿಭೂ
ಪಂ ಪರಿವ ದಯೆಯಿಂದಲೆತ್ತುತ
ಲಿಂಪುದನಿಯಿಂ ನುಡಿಸಿ ಪ್ಪೈದಡವುತ್ತಲಿಂತೆಂದ ||೫೨||

ಕೇಳಿದೈ ಬಲದೇವ ಸಿಂಹನೆ
ಬಾಳನಿದ ಕೊನೆಗಾಣಿಸಲು ಕರ
ವಾಳಹಿರಿದನು ಕರ್ಣಸಿಂಹನು ರಾತ್ರಿಸಮಯದಲಿ |
ಖೂಳರಂ ಕಳುಹಿಸಿದನಿತ್ತರು
ವೀಳಯದಿ ವಿಷವೆಮಗೆ ಧೂರ್ತರು
ಧಾಳಿ ಯೆಸಗಿದರಾದೊಡಂ ನಾವ್ಸಾಯಲಿಲ್ಲೆಂದ ||೫೩||

ಭಾವಿಸದರಿಂ ವತ್ಸನೇ ಬಲ
ದೇವ ಸಿಂಹನೆ ವಿಶ್ವನಾಥನ
ಪಾವನಂ ಸಂಹರಿಸನಾ ಮಾನವನ ನಾಯುಸಲು |
ಆವನುಂ ಸಹ ಶಕ್ತನಲ್ಲವು
ಸಾವುದಿಲ್ಲೀ ಸಾರಿಸಹ ನಾ
ಪಾವಗಂ ನೀನಿದನು ಮರೆಯದಿರೆಂದನಾ ಯತಿಪ ||೫೪||

ಜೀವನಂಪಾತಕದ ಬಗೆಬಿಡ
ದಾಪಿನುತನಂ ಕೊಲಲು ಮಲ್ಲರಿ
ಗೀವುತಲಿ ಹಲವಿಧ ದುರಾಶೆಯ ನಾಲ್ವರನು ಕಳುಹೆ |
ತೀವಿಯಿಂದೊಂದುದಿನ ಮುನಿಜನ
ಭೂವರಂ ಸಂಜೆಯಲಿ ಸಾಗರ
ಕೋವಿ ನಡೆದಿಹ ಸಮಯ ಬೆಂಬತ್ತಿದರು ಪಾಪಿಗಳು ||೫೫||

ಸೃಷ್ಟಿ ಸೊಬಗನು ನಿಟ್ಟಿಸುತ ನಡೆ
ದಷ್ಟುದೂರಕೆ ಬೆನ್ನಹಿಂಗಡೆ
ದುಷ್ಟಕೃತರುತಿರಲು ಯತಿಜನಭೂಪಧೂಕಾಂತ |
ಕಷ್ಟಕೆಳಸಿದರಲ್ತೆ ಪಾಪಕೆ
ತುಷ್ಟಿಯೆಲ್ಲಿಯದಕಟ ಸುಮ್ಮನ
ನಿಷ್ಟಬಗೆದಿಹರೆಂದೆನುತ ಹಿಂದಿರುಗಿ ನೋಡಿದನು ||೫೬||

ಕಾದ ಕಬ್ಬಿಣದಂತೆ ಕಡುಗೆಂ
ಪಾದ ಕಂಗಳನರಳಿಸೀಕ್ಷಿಸು
ತಾ ದುರುಳರಂ ಯತಿಪ ಮುಖಭಂಗಿಯನು ಕೆರಳಿಸುತ।
ಪಾದದಿಂದೊಂದುಸಲ ಕುಟ್ಟುತ
ಮೇದಿನಿಯ ನೀವೆನ್ನ ಕೊಲ್ಲಲು
ಕಾದು ಬಯಸುವಿರೇನೆನುತ ಸಿಡಿಲಂತೆ ಗರ್ಜಿಸಿದ ॥೫೭॥

ನಡುಗುತಾ ದುರ್ಜನರು ಹಿಂಬದಿ
ನಡೆದರೊಮ್ಮೆಲೆ ಧಾವಿಸುತ ಬರಿ
ಯೊಡಲ ನೆಪ್ಪಿಮೆದರಾಯ್ತು ಪಾಪದ ಹೊಲಸು ಚಿತ್ತವನು।
ಕೆಡಿಸದೇ ಜೀವನನು ತನ್ನಯ
ಕೆಡಕುಬುದ್ಧಿಗೆ ಬೆದರಿ ಬೇರೆಡೆ
ನಡೆದ ಬೊಂಬಾಯಿಯನೆ ವರ್ಜಿಸಿ ಬಿಗಿದ ಭೀತಿಯಲಿ ॥೫೮॥

ಬಂದು ಬೇಡಿದ ಕೃಷ್ಣರಾಮುಗೆ
ಮಂದಹಾಸವ ಸೂಸುತ ದಯಾ
ನಂದ ನಾವ್ ಸಂಸ್ಕಾರವಿಧಿಯಂ ಬರೆಯೆ ನೇಮಿಸಿದ।
ಮಂದಿಯಿರ್ಪರ ಕಳುಹಿದೆವು ನೀ
ವಿಂದವರ ಕಾರ್ಯವನು ನಿರ್ವಹಿ
ಸೊಂದೆ ಮನದಿಂ ನಮ್ಮಬಳಿಯಿರಿರೆಂದು ಮರುನುಡಿದ ॥೫೯॥

ಮಧುರವಾಣಿಯಲಿಂತು ಯತಿಯೆನೆ
ಬುಧನು ಹಿಂದಿನ ಜನವಿಸರ್ಜನ
ವಿಧಿಗೆ ಕತಮೇನೆಂದು ನಯದಿಂ ಬೆಸಗೊಳಲ್ಮುನಿಪ |
ಅಧಮರವದಿರು ಭಕ್ತರೊಬ್ಬರ
ಸುಧನಮಂ ಮರ್ಸ್ಯಯಿಪೆ ದುಃಖದಿ
ವಿಧಿಸಲಾದುದು ದಂಡವವರಿಗೆನುತ್ತ ವಿವರಿಸಿದ ||೬೭||

ಇನಿತವರ್ಣಿಸಿ ಕೃಷ್ಣರಾಮುಗೆ
ಮುನಿಪನೀ ದಿನಗಳಲಿ ವಿಪ್ರರು
ಧನದ ದಾನವ ಕೊಂಡುತಿಂಬರು ಹುಸಿಮಹಾತ್ಮ್ಯಗಳ |
ಜನಕರುಹಿ ಜೀವಿಸುವರದರಿಂ
ಮನಮೆ ಬಲುಕೊಳಕಾದುದೀಹುಲು
ಜನರು ದುಷ್ಕೃತಿಯಿಂದೆ ತೇಜಂಗುಂದುತಿಹರೆಂದ ||೬೮||

ವಿಗ್ರಹಾರಾಧನೆಯ ನೀತಿ ಸ
ಮಗ್ರವಂ ಬೊಂಬಾಯಿನಲಿ ಕ
ಟ್ಟುಗ್ರತರದಿಂ ಯತಿಪ ಖಂಡಿಸೆ ಪೌರಸಭ್ಯರಲಿ |
ವ್ಯಗ್ರತಾ ಪ್ರಸರಣಮುದಿಸೆ ಸ
ತ್ಯ ಗ್ರಹಣ ಕಾಮದಲಿ ವೇದದ
ಲಗ್ರಪೀಠವ ಪಡೆದ ಯತಿಪನ ಸಭೆಯ ರಚಿಸಿದರು ||೬೯||

ಸಾಗರವೆ ಪೊರಹೊಮ್ಮಿದೊಲು ಜನ
ರಾಗ ಲಕ್ಷದಿ ನೆರೆಯೆ ಯತಿಪ ಸ
ರಾಗದಿಂ ಸಭೆಗೈದಿ ಮೊದಲಲಿ ಪರಮದೇವನನು ।
ರಾಗದಿಂ ಸಂಸ್ತುತಿಸಿ ನಮಿಸಿ ಸ
ಭಾಗತರ ವೇದಗಳ ಮತದನು
ರಾಗಿಗಳೆ ನೀವ್ಕೇಳಿರೆನ್ನುತಲಿತ್ತ ಭಾಷಣವ ॥೬೩॥

ಬೊಂಬೆ ಜಡಮಿರೆ ನೀವಿದೀಶ್ವರ
ನೆಂಬಿರೇ ದೇವಸಹ ಜಡನಹ
ಮುಂಬರಿದು ವಿಭುಗೆಣೆಯನವ ಮಗದೊಬ್ಬದೇವನನು ।
ನಂಬುವಿರೆ ಪರಮಾತ್ಮ ಭಾವವೆ
ಹಿಂಬದಿಗೆ ಬೀಳ್ದಪುದು ವಿಭುವಂ
ಶಂ ಬಹುದು ಬೊಂಬೆಯೊಳಗೆಂದೊಡಖಂಡನಿರನೆಂದ ॥೬೪॥

ಭಾವದೊಳೆ ಭಗವಂತನಿಹನೆನೆ
ನಾವು ಕೇಳ್ದಪೆವೀಗ ಪೇಳಿರಿ
ನೀವೆ ಭಾವಿಸೆ ಕಾಷ್ಠಖಂಡದಲಿಕ್ಷುದಂಡವನು ।
ಭಾವಿಸಲು ಮಣ್ಣಿನಲಿ ಶರ್ಕರ
ಭಾವವಂ ಬಾಯ್ಸಿಹಿಯಹುದೆ ನೀ
ವಾವಬಗೆ ಸಂಶಯವ ಹರಿಪಿರೊ ಚಿಂತಿಸುವುದೆಂದ ॥೬೫॥

ಬಿಸಿಲುಕುದುರೆಯೆ ನೀರೆನುತ ನರ
ಸೊಸೆದೆನಿತೊ ಭಾವಿಪನು ಕಂತಪ
ಪುಸಿವ ದಾಹಪದೇಕೆ ಹಿಂಗದು ಭಾವನಾಬಲದಿ |
ಎಸೆವ ನಂಬುಗೆ ಭಾವನೆಯೊಳಂ
ಹುಸಿಯಿರದೆ ಶುಭಸತ್ಯವಿರ್ದಪು
ಮುಸಿರುವೊಡದನಿವಾರ್ಯವೆಂದನು ಸಂತಭೂಕಾಂತ ||೬೬||

ಜೀವಮಿಹತಾಯ್ತೆಂದೆ ಸೋದರ
ಪಾವಭಾವಡರಾದಿಗಳ ಬೆಸ
ಕೈವುದಂ ಮರೆಯುತ್ತ ಹಸಿವಂ ದೋಗಪೋಕಪಲಿ |
ಸೋವಮಾನವಕುಲಪ ಕಂಗಳಿ
ಸೋವಿನೋಡದೆ ಜೀವವಿಲ್ಲದ
ದೇವಮೂರ್ತಿಯ ಪೂಜಿಸಿದೊಡೇನಹುದೊಗಡಯೆಂದ ||೬೭||

ತನ್ನ ತಾ ರಕ್ಷಿಸಲು ಸಾಗದೆ
ಮುನ್ನ ಪುಡಿಪುಡಿಯಾದ ವಿಗ್ರಹ
ಪನ್ನೆ ನಂಬುತ ಮುಸಲರಡಿಯಾಳ್ತನವ ಕೈಗೊಂಡು |
ಬನ್ನ ಬಟ್ಟಾ ಸೋಮನಾಥನ
ಖಿನ್ನಭಕ್ತರ ಮೂಢಬುದ್ಧಿಯ
ನಿನ್ನೆಗಂ ಮರೆತಿಲ್ಲ ಭಾರತಿಯೆಂದನಾ ಯತಿಪ ||೬೮||

ಒಮ್ಮೆಪೇಳಿರಿ ಮೂರ್ತಿಪೂಜೆಯ
ಹೆಮ್ಮೆಯೇವುದು ಪೌರುಷವ ಮನು
ಜಮ್ಮರೆದು ಕಲ್ಬೊಂಬೆಯೆದುರಲಿ ದೀನಭಾವದಲಿ |
ನಮ್ಮ ಪಾಲಕ ನೀನೆನುತ ಕೆಡೆ
ದುಮ್ಮಳಿಪ ಮೌಢ್ಯವನು ಬಿಟ್ಟಿರಿ
ಹೊಮ್ಮಿದುನ್ನತಿ ಯಾವುದಕ್ಕಟ ಪೇಳಿ ನೀವೆಂದ ||೬೯||

ಎಲ್ಲೆಡೆಯೊಳಿಹ ಸರ್ವಶಕ್ತನ
ಕಲ್ಲೊಳಗೆ ಬಿಗಿದರ್ಚಿಸುತ ಹೂ
ಚೆಲ್ಲಿ ನೈವೇದ್ಯಗಳನರ್ಪಿಸಿ ಗಂಟೆಬಾರಿಸುತ |
ಭುಲ್ಲವಿಸೆ ನೀವೀವ ವಸ್ತುಗ
ಳಲ್ಲಿ ವಿಭುವಿಲ್ಲೇನು ನಿಮ್ಮೀ
ಬಲ್ಲತನಮುಪಮಾನಮಾಡದೆ ದೇವಗಕಟೆಂದ ||೭೦||

ಅದರಿನೀದಿನದಿಂದ ಮೌಢ್ಯವ
ಸಡೆದು ಮೂರ್ತಿಗಳೊಗೆದು ನಿಮ್ಮ
ಹೃದಯ ಮಂದಿರಗಳಲಿ ಹೊತ್ತಿಸಿ ಜ್ಞಾನದೀಪಗಳ |
ಉದಿತಭಕ್ತಿಯ ಹೂವನರ್ಪಿಸಿ
ಮುದದಿ ಸರ್ವಾತ್ಮಕನ ಪೂಜಿಸಿ
ರಿದುವೆ ವೈದಿಕಧರ್ಮವೆಂದಾಯತಿಪ ಘೋಷಿಸಿದ |೭೧||

ಇಂತಪುಹಿ ಮೂರ್ತ್ಯರ್ಚನದ ನೆಲೆ
ನಿಂತ ಘಾತಕ ತರದ ಹಾನಿಗ
ಳಂತುಟಂ ಹೃದಯಂಗಳಳುಕುವ ತೆರದಿ ವರ್ಣಿಸುತ |
ಸಂತ ಏರಪುಸೆ ಕೊನೆಯಪದಪ
ಸ್ವಂತ ನೀರವಮುರ್ವ ಜನಲ
ಕ್ಷಂ ತೆಗೆದು ಜಯನಾದವೆಸಗಿತು ಯತಿಜನೇಶ್ವರನ ||೭೨||

ಆಂತರ್ಂನಿತೋ ಸಾಸಿರದಜನ
ರಾಂತರಿಕ ನೇತ್ರಗಳಸಂಘನು
ತಾಂತರಂಗಳ ಕಟ್ಟ ಕೀಳುತ ಮೂರ್ತಿಸಾಸಿರದ |
ಸೋಂತುಪಂ ತಪೆ ಸಾಗರಹೃದ
ಯಾಂತರಾಳದಿ ಮುಲಗಿಸಲ್ಕ್ಯತಿ
ಕಾಂತನಾಮುದಲದುವೆ ಕೋಳಾಹಳವಿಭಾಡಿಸಿತು ||೭೩||

ಮುಂಬಯಿಯ ಜನ ಸಾಸಿರಪ ಹುರಿ
ದುಂಬಿಸಿದ ಯತಿಪಾಲ ಸತ್ಯವ
ತುಂಬಿದೆದೆಯಪರಪ್ಪ ಭಕ್ತರು ಹಲಪು ಬಳಿವಂದು |
ನಂಬಿ ತಮ್ಮಯ ತತ್ವಗಳನವ
ಲಂಬಿಸಿದ ಸಜ್ಜನರಮುಂಡಳ
ವಂ ಬಿಗಿಯೆ ಸತ್ಸಂಗವೊಂದಿರಲೆಂದದೊಂದುದಿನ ||೭೪||

ಇಂತು ವಿನಯಂಗೈದು ಭಕ್ತರು
ಸಂತವರ ಗುರುದೇವ ಸೊಗಮಿಗು
ವಂತೆ ತಾವೇ ತಮ್ಮಸಂಸ್ಥೆಗೆ ನಾಮವೊಂದರಸಿ |
ಮುಂತಿಳಿಸಿರೆನೆ ಮುನಿಪ ಮೌನದಿ
ನಿಂತು ಕಂಗಳ ಮುಚ್ಚಿ ಹಲಚಣ
ವಂತರಿಂದ್ರಿಯವಿಷಯಸಮುದಾಯಾನುಗತನಾದ ||೨೫||

ಕಂಗಳಂ ಮುಚ್ಚಿಂತು ಬಾಹ್ಯದ
ಸಂಗಮಂ ಮರೆಯುತ್ತ ಹಲಚಣ
ಸಿಂಗರಿಸಿ ಮುನಿಪಾಲ ಮೌನಮನಂತರದಿ ನಯದಿ |
ಅಂಗವಡೆದಿರೆ ಶಾಂತಿ ನಿಜಸ
ತ್ಸಂಗಮಾಸ್ಯಸಮಾಜವೆನ್ನುತ
ಕಂಗೊಳಿಸಲೀ ಜಗದಲೆಂದನು ನಲಿಯೆ ಭಕ್ತಜನ ||೨೬||

ಕವಿದ ಮೂರ್ತ್ಯರ್ಚನದ ತಿಮಿರವ
ಸವರುತೀಪರಿ ಸತ್ಯವನನಿಧಿ
ಜವದಿ ತಟಗಳ ಮೀರಿಹರಿಯುತ ಶಾಂತಿವೀಚಿಗಳ |
ಭವದಿ ಪೀಡಿತ ನರರಿಗೆರಚಿರೆ
ಭುವಿಯು ಸಂತಹೃತ್ಕುಮುದ ಬಾಂ
ಧವ ಸುಧಾಕರನಿಂತು ತೊಳಗಿದ ಹರಸ ಪರಮಾತ್ಮ ||೨೭||

|| ಇಂತು ಹದಿನೈದನೆಯ ಸಂಧಿ ||



# ಹದಿನಾರನೆಯ ಸಂಧಿ

ಸೂಚನೆ—ಕಲ್ಮಳಿಯೊಳಂ ನಲಿದು ಮಾಧವ
ಗೊಲ್ಮೆಯಂ ಬೀಡುತ್ತ ಗುರುವಿನ
ಬಲ್ಮೆ ಬಣ್ಣಿಸಿ ತೆರೆದನಾರ್ಯಸಮಾಜವಂ ನಯದಿ ||

ಕತೆಯನಾಲಿಸಿ ಮುಂದೆ ತಾಂ ಸೂ
ರತಕೆ ನಡೆದಾ ಯತಿಪ ವಲ್ಲಭ
ಮತವ ನಾರಾಯಣನ ರಾಮಾನುಜನ ಪಂಥಗಳ |
ಚತುರತನದಿಂ ಟೀಕಿಸಲು ಜನ
ತತಿಯುಲೊಪ್ಪನು ಕನಲಿ ನಿಪ್ಮಯ
ಮತವೆ ಸುಳ್ಳೆಂದೆನುತ ಗಲಭೆಯ ರಚಿಸಿದಂ ಭರದಿ ||೧||

ಸಂತವಿಡುತಾತನ ಯತೀಶ್ವರ
ನೆಂತು ವಾಣಿಜ್ಯದಲಿ ಕೊಳುವವ
ರಂ ತಣಿಸಿ ನೀವ್‌ಶಾಂತಿಯಿಂ ವರ್ತಿಸುವಿರವರೊಡನೆ |
ಅಂತೆ ಧರ್ಮಗ್ರಾಹಕರೊಳುಂ
ಸಂತಸದಿ ವರ್ತಿಸಿ ಪರೀಕ್ಷಿಸ
ಲುಂ ತವವಕಾಶಗಳ ಕಲ್ಪಿಸಿರೆಂದು ಬೋಧಿಸಿದ ||೨||

ವಂಚಕವೇಶ್ವರ ನರ್ಮದಾಶಂ
ಕರನ ಸದನದಿ ಮರಳಿ ಯತಿಭೂ
ವರನ ಶುಭಧರ್ಮೋಪದೇಶದ ನೇಮಪಳವಡಲು ।
ತೆರತೆರದ ಮಾನವರು ಹಲಸಾ
ಪಿರರು ನೆರೆದರು ಕಲಹ ಚಿಂತಾ
ಪರರು ಸಹ ಸೇರಿದರು ಹಲಬರುಭಂಗಿಸಲು ಸಭೆಯ ॥೩॥

ಭಾಷಣದ ಮಧ್ಯದಲಿ ಸಜ್ಜನ
ಭೂಷಣಂ ತಾಂ ಮತಮತಾಂತರ
ದ್ವೇಷಗಳ ವರ್ಣಿಸಲು ಕಲ್ಗಳ ಚೂರುಗಳನೆಸೆದು ।
ದೂಷಿತಾತ್ಮರು ಹಲರು ಯತಿಪನ
ರೋಷದಿಂ ನೋಯಿಸುತ ನಿಂದಿಸಿ
ಭೀಷಣಕೃತಿಯಿಂದ ಜರ್ಜರಗೊಳಿಸಿದರು ಸಭೆಯ ॥೪॥

ಛಿದ್ರಿಸುತ ಕೂಟವನು ಮೂಢೋ
ಪದ್ರವಿಗಳಾಯತಿಯ ನೋಯಿಸ
ಲು ದ್ರವಿತಚಿತ್ತದಲಿ ಭಕ್ತರು ಭಾಷಣವನಿಂದು ।
ಅದ್ರಿಸಮನಿಶ್ಚಲರ್ ನಿಲಿಪುದೆ
ಭದ್ರವೆಂದೆನೆ ತಿಳಿನಗೆಯ ಶುಭ
ಮುದ್ರೆಯಿಂದಿಂತೊರೆದ ಭಕ್ತರಕುಲಕೆ ಮುನಿನಾಥ ॥೫॥

ಭ್ರಷ್ಟಚರಿತರೊ ನಷ್ಟಮತಿಗಳೊ
ದುಷ್ಟಭಾವದೊ ಮನುಜರಿಷ್ಟಾ
ನಿಷ್ಟರೆಲ್ಲರು ನಮ್ಮ ಸೋದರರಲ್ತೆಯಿಪರೆಸೆಪ |
ಇಷ್ಟಿಕಾಶ್ಮಗಳೆಲ್ಲ ಪುಷ್ಪ
ವೃಷ್ಟಿಯೋ ನಮಗಲ್ತೆ ಗೋತ್ರಾ
ದಷ್ಟೆ ಕಾಲಕೆ ನಿಲಿಪೆವೆನ್ನುತ ಬೋಧಿಸಿದ ಯತಿಪ ||೬||

ತೆರಳಿ ಬ್ರೋಚಿಗೆ ಯತಿಪನಿರೆ ಬುಧ
ವರನು ಮಾಧವರಾಯ ತ್ರ್ಯಂಬಕ
ಬರಿದೆ ಮೂರ್ತ್ಯರ್ಚನವ ಸಾಧಿಪೆನೆಂದು ಗರ್ವಿಸುತ |
ಕೆರಳಿ ತಾನೊಂದುದಿನ ಯತಿಭೂ
ವರನಿಳಿದ ಕಡೆಗೈದಿ ಶಾಸ್ತ್ರಸ
ಮರಕೆ ನಿಂದನು ಹಲವುನೂರ್ಜನ ಶಿಷ್ಯರೊಡಗೂಡಿ ||೭||

ಹೊತ್ತು ಹಲವೇ ನಿಮಿಷ ಕಳೆದಿರ
ಲೊತ್ತಯಿಂ ಮುನಿಭೂಪ ವಾದದ
ಲೆತ್ತಿದಾಪ್ರಶ್ನೆಗಳನುತ್ತರಿಸಲ್ಕೆ ಸಾಗದಿರೆ |
ಚಿತ್ತದೊಳವಂದುದನೆ ನುಡಿಯುತ
ಮತ್ತನಂದದಿ ನಿಂದಿಸುತ ಬೆರ
ಳೆತ್ತಿ ಬೆದರಿಸೆ ಬಗೆದ ಯತಿಪನ ಮರುಳು ಮಾಧವನು ||೮||

ಮುಗ್ಧಮಾಧವನಿಂತು ಯತಿಜನ
ಸ್ನಿಗ್ಧರಾಧೀಶ್ವರನ ತರ್ಜನಿ
ಧಿಗ್ಧರಣದಿಂ ಹಂಗಿಸುವುದನು ಕಂಡು ಬಲದೇವ |
ಧಗ್ಧಗನ್ನುತಲುರಿದು ಕೋಪದಿ
ದಗ್ಧನಾಗುತೆ ಮರುಳೆ ಮಾತೆಯ
ದುಗ್ಧನೆನೆದುಕೊ ಜೋಕೆ ಸಭ್ಯನ ತೆರದಿ ನುಡಿಯೆಂದ ||೯||

ಇಂತೆನುತ ಬಲದೇವ ಗರ್ಜಿಸೆ
ನಿಂತ ಮಾಧವ ನಡುಗಿಹೋದನು
ಸಂತ ದಯೆಯಿಂ ಭಕ್ತ ಬಲದೇವನನು ಬಳಿಕರೆದು |
ಸಂತಪಿಸಿ ಹೇವತ್ಸ ನೀ ಮುನಿ
ಸಂ ತಳೆಯುತಿಹುದಾರ ಮೇಲ್ಕೈ
ಹಂತ ಸೋದರರಲ್ತೆ ಮಾಧವರೆಮಗೆ ಪೇಳೆಂದ ||೧೦||

ತಮ್ಮನಾದೀ ಸೋದರರ ಹಿತ
ವಮ್ಮನದೆ ಚಿಂತಿಸಿಯೆ ಹಗಲಿರು
ಳಮ್ಮರುಕದಿಂ ಕಳೆವೆವಲ್ಲವೆ ಧರಿಸು ಶಾಂತಿಯನು |
ಸುಮ್ಮನೆಯೆ ಧರ್ಮಪ್ರಚಾರಕ
ಗಮ್ಮಹಿಯಸಮಸಹನಶೀಲತೆ
ಯಮ್ಮರೆಸಬೇಕಯ್ಯ ನಿಂದೆಯ ಗಣಿಸಬೇಡೆಂದ ||೧೧||

ಬಂದು ಜೇಠಾಲಾಲನೆಂಬುವ
ನೊಂದುದಿನ ನೀವ್ ಶಾಸ್ತ್ರವಚನಗ
ಳಿಂದ ವಿಗ್ರಹಪೂಜನವ ಮಂಡಿಸಿದ ಪಕ್ಷದಲಿ ।
ಇಂದೆ ಶಿವನವತಾರವೇ ನೀ
ವೆಂದು ನಂಬುವೆವೆಂದು ಒಹುನಯ
ದಿಂದ ಪೇಳಲು ಯತಿಪ ನಸುನಗುತಾತಗಿಂತೆಂದ ॥೧೨॥

ಒಂದೆ ಕಾಶೀಭೂಪನುಂ ಮುದ
ದಿಂದ ವಿಶ್ವೇಶ್ವರನ ಪದವಿಯು
ದೊಂದು ಲೋಭವನೆಮಗೆ ತೋರಿದನಾದೊಡೇಂ ವತ್ಸ ।
ಸಂದ ಸಾಂಸಾರಿಕದ ವಾಸನೆ
ಯಿಂದ ಪರವಶರಾಗಿ ನಾಪ್ಪಡೆ
ವೆಂದುಮಾ ಸತ್ಯವನು ಕೇಳೆಂದನು ದಯಾನಂದ ॥೧೩॥

ಮರಳಿ ಜೇಠಾಲಾಲ ಯತಿಪರ
ಸರಳಸಂಸ್ಕೃತ ಸತತನುಡಿಪಿರಿ
ಮೆರೆವ ಯುಕ್ತಿಗಳಿಂ ಪ್ರಮಾಣಗಳಿಂ ವಿಪಕ್ಷಗಳ ।
ಸರಿಸಿ ಬಾಯ್ಮುಚ್ಚಿಪಿರಿ ಬೇರೆಯ
ಪರಮಪಂಡಿತರೊಂದೆ ಶಬ್ದವ
ಕುರಿತು ಹಲದಿನ ಕಳೆವರಂತೇ ತಾವೆಸಗಿರೆಂದ ॥೧೪॥

ಎನಲು ತನ್ನರನಿಂತು ಮುನಿಪರ
ಜನಪ ಸೇವೆಗೆ ನಮ್ಮ ಜೀವನ
ವನಿತು ಮುಡುಪಿರೆ ಹಕ್ಕಿಯಂದದೆ ಚಿಲಿಪಿಲಿಯನೆಸಗ |
ದಿನನಿಹುದೆ ಗಡ ಕೆಲಸವಿಲ್ಲದ
ಮನುಜನೇ ಮಣಮಾಗಿಪ ಒಪ್ಪ
ಜ್ಞನರಿ ಸರಳದಿ ನುಡಿಯಬಲ್ಲವು ಪಕ್ಷಿ ಕೇಳೆಂದ ||೧೩||

ಕರೆದು ನಿಜಪದ್ಯಾರ್ಥಿಯೊರ್ವನ
ಪರಮಗುರು ತಾನೊಂದುದಿನ ನೀ
ರ್ತರಲು ಪೇಳಿದೊಡವನು ನಾಂ ದ್ವಿಜ ನೀರ ತೊತ್ತುಪುದು |
ತರವಡೆನಗಲ್ಲೆನುತ ಮದದಿಂ
ದೊರೆಯೆ ಮುನಿಪರ ಸಂಜೆಗೆಲ್ಲರ
ಕರೆದು ಕೂಡಿಸಿ ಶಿಷ್ಯಸಂಕುಲಕಿಂತು ಘೋಷಿಸಿದ ||೧೪||

ಯಾರಬಳಿ ನರ ಬಾಳುತಿರ್ಪನ
ದಾರಬಳಿ ವಿದ್ಯೆಯನು ಕಲಿಯಲು
ಸೇರಿಪನೊ ತಿಳಿದಾತನಾಜ್ಞೆಯನೆಂದು ವ್ಯಸಾರದು
ಮೀರಬಾರದು ನಾನು ಮಧುರಾ
ಪೌರ ವಿರಜಾನಂದ ಗುರುವಾ
ದಾರವಿಂದದಿ ಕಲಿತ ರೀತಿಯನಿಂದೊರೆವೆನೆಂದ ||೧೫||

ಸ್ಮರಣ ಶಕ್ತಿಯು ವಿನಯಭಾವದ
ಸರಳಜೀವನದಿಂದ ನಾಂ ಗುರು
ವರತ ಸಂಪ್ರೀತಿಯನು ಗಳಿಸಿರೆ ನನ್ನೊಡನೆ ಕಲಿವ |
ತರುಣರೀರ್ಷ್ಯೆಯ ತಳೆದು ದಂಡೀ
ಶ್ವರರ ಕರುಣೆಯನೆನಗೆ ತಪ್ಪಿಸೆ
ತರತರದ ಕುಹಕಗಳಗೈದರು ಪಾಪಚಿಂತಕರು ||೧೮||

ಒಂದುದಿನ ಗುರುದೇವ ವಿರಜಾ
ನಂದರಡಿಗಳೊಳವದಿರು ದಯಾ
ನಂದ ತಮ್ಮೆದುರಿನಲಿ ಬಹುಬಗೆ ಭಕ್ತಿ ಬೀರುವನು |
ಹಿಂದೆ ಕೋಲನು ಪಿಡಿದು ತಾವ್ನಡೆ
ವಂದದಿಂ ಕಣ್ಮುಚ್ಚಿ ನಡೆದವ
ನಂದೆನುತ ಹುಸಿದುಗುಡದಿಂ ರಚಿಸಿದರು ನಾಟಕವ ||೧೯||

ಈ ಕಪಟ ಫಲವಾಗಿ ಕೋಪೋ
ದ್ರೇಕದಲಿ ದಂಡೀಶ ಗುರುಲೋ
ಕೈಕದೇವರು ನನ್ನ ನಿಂದಿಸಿ ಕೊಂಡು ಕೋಲೊಂದ |
ಸಾಕು ಬೇಕೆನುವಂತೆ ತಾಡಿಸಿ
ನೂಕಿದರು ಮಠದಿಂದಲಾದೊಡ
ಮೇಕಿದೆತ್ತಣದೆನುತ ಕೇಳ್ದವನಲ್ಲ ನಾನೆಂದ ||೨೦||

ಎಂದೆನುತ ಮುನಿಪಾಲ ವಸ್ತ್ರವ
ಹಿಂದೆ ಸರಿಸುತ ಭುಜದಮೇಗಡೆ
ನಿಂದ ಗಾಯದ ಕಲೆಯತೋರಿಸಿ ಶಿಷ್ಯ ಸಂಕುಲಕೆ |
ಒಂದಿನಿತು ಗುರುದೇವರಲಿ ಮುನಿ
ಹಿಂದ ನುಡಿದವನಲ್ಲ ವಿರಜಾ
ನಂದರುಪಕಾರಗಳ ನೆನೆಯುವ ಚಿಹ್ನವಿದೆಯೆಂದ ||೨೧||

ಇಂತು ತನ್ನಗರದಲಿ ಮುನಿವರ
ನಿಂತು ಹಲದಿನ ಭಕ್ತಜನಗಳ
ಪಿಂತಣದ ಬಯಕೆಯೊಳಗಹಮುದಬಾದಿಗೈತಂದು |
ನಿಂತೊಡನೆ ಹೊಗೆಬಂಡಿ ಬಂದಿರ
ಸಂತಸದಿ ನುಡಿಸುತ್ತ ಭಕ್ತಜ
ನಂ ತೆಗೆದುಹೂಡಿರ್ದ ಕಾದುರಿಯ ಬಂಡಿಗೇರಿದನು ||೨೨||

ತಾನಿಳಿವಕಡೆ ಹೋಗುತಿಹ ಮಾ
ರ್ಗಾನುಸರಣದ ತನ್ನ ಸಂಗಡ
ಮೇ ನಯದಿ ಪಾಪನದಿ ಕುಳ್ಳಿದ ಸೇಠನೊಂದೆಸೆಗ |
ಸಾನುನಯ ಬೆರಳೆತ್ತಿ ತೋರುತ
ತಾನು ರಚಿಸಿದ ಗುಡಿಯ ಯತಿಪಗೆ
ನಾನೆರಡುಲಕ್ಷಗಳ ವ್ಯಯಿಸಿದೆನೆನಲು ಮುನಿನೊಂದ ||೨೩||

ಧನಿಕ ಗುಡಿಯನು ಬಣ್ಣಿಸುತ್ತಿರೆ
ಮುಸಿಪ ಕರದಿಂತಟ್ಟಿ ಬಂಡಿಯ
ಜನದಲಿಂತುಟವಿದ್ಯೆಯಿರುವುದರಿಂದಲೇ ನಮಗೆ |
ಇನಿತುದುರ್ಗತಿಯೊದುದಿನಿತೇ
ಧನವ ವಿದ್ಯಾಲಯಕೆ ಕೊಟ್ಟಿರ
ಲೆನಿಬರೋ ವೇದಜ್ಞರ್ಕೃತಮತಿರ್ದರಲೆಯೆಂದ ||೨೪||

ಪೌರಜನಗಳ ಬೋಧಿಸುತ ಮುನಿ
ಪೀರ ಬಸಯೀಪುರದಲಿರೆ ಗಡಿ
ಯಾರವಂ ಸೇವಕನದೊರ್ವನು ಕದಿಯಲೊಂದುದಿನ |
ಬೇರೆ ಕೆಲಸಿಗರಾಗ ಹಿಡಿದಾ
ಚೋರನಂ ಯತಿರಾಜಗೊಪ್ಪಿಸಿ
ದೂರ ಕಳುಹಿಸಿ ಶಾಸಕರ್ಗಳಿಗೆಂದು ಪೇಳಿದರು ||೨೫||

ರೋದಿಸುತಲಾ ಚೋರ ಯತಿಪನ
ಪಾದಕುರುಳಿದನವನ ಕಂಡೊಡ
ನಾ ದಯಾಕರನೆದೆ ಕರಗಿ ಸಂಪ್ರೀತಿಯಿಂದವನ |
ಮೈದಡವಿ ಮೇಲೆತ್ತಿ ವತ್ಸನೆ
ರೋದನಕೆ ಕತವಿಲ್ಲ ಮೌಢ್ಯದ
ಲಾದುದಾಯಿತೆನುತ್ತಲಾಲಂಗಿಸಿದನಾತನನು ||೨೬||

ಏಕೆ ರೋದಿಪೆ ತಮ್ಮನೇ ವ
ಲ್ಮೀಕ ಬಗೆವುದು ನಮ್ಮ ಕಾರ್ಯವೆ
ಸಾಕು ಸರ್ಪವ ಕೊಂದರಾಯಿತು ಜಾಡ್ಯಭಾವವನು |
ನೀಕಳೆಯೆ ಸಾಕೆನುತ ಯತಿ ಲೋ
ಕೈಕ ನಾಯಕನವನನವ್ಪುತ
ಶೋಕ ಪರಿಪಿದ ಮರನು ನೆರಳೆಲ್ಲರಿಗ ಕೊಡದಿಪನೆ ||೨೭||

ಈ ತೆರದಿ ಹಲದಿವಸ ಬೋಧಿಸು
ತಾ ತಪೋಧನ ಭಕ್ತಜನಗಳ
ವಾತ ನಡೆಯಿಸಿ ಮುಂಬಯೀಪುರಕೈದಿ ಸಾತ್ವಿಕ್ಕ್ಮ |
ರೀತಿನೀತಿಗಳರುಹಿ ಸದ್ಧ
ರ್ಮಾತುರರ ಚಿತ್ತಗಳ ಬೆಳಗುತ
ಜಾತಿಹಿತಕೆಚ್ಚರಿಸಿ ತುಂಬಿದ ಸತ್ಯ ಜೀವನವ |೨೮||

ಒಂದುದಿನ ಸಂಜೆಯಲಿ ಮುನಿಪಾ
ಲಂ ದಣಿವನಾರಿಸಲು ಬಗೆಬಗೆ
ಯಿಂದ ಸೊಬಗನು ಬೀರುತಿಹವಾರಿಧಿಯ ತಟಕೈದಿ |
ಮುಂದಮುಂದ ಸಮೀರ ಸೇವನ
ದಿಂದ ನಲಿಯುತ ವಿಶ್ವಕರ್ತನ
ಸುಂದರ ಸೃಷ್ಟಿಯನು ನಿರುಕಿಸುತಲ್ಲಿ ಪ್ರೈಮರೆದ ||೨೯||

ಹಗಲೊಳನ್ಯರ ಹಿತಪಸಾಧಿಸಿ
ಗಗನಮಣಿ ಮಿಗುವಾಯಸದಿ ಮನೆ
ವೊಗಲು ಬಾಗಿಲ ಬಳಿಯೆ ಸಂಧ್ಯಾಸುದತಿಯುದಿರುಗೊಳೆ ।
ಬಗೆದು ತೆರೆಯನು ಸರಿಸ ಮಿಗೆ ನಾ
ಚುಗೆಯ ಕತದಿಂ ಚೆಲ್ವಮುಖ ಕಂ
ಪುಗಿದುದೆನೆ ಸಲೆ ಸಂಜಗಂಪಂಬರದಿ ಪಸರಿಸಿತು ॥೩೦॥

ಜಳನಿಧಿಯ ತೆರೆತೆರೆಯ ಪೋಲು
ಜ್ವಳಿಪ ಕಿರಣದ ಬೆಳಕು ಮೂಡಿರೆ
ಬಳಲಿ ಸದನಕೆ ಬರ್ಪರಪಿಯುಂ ಸ್ವಾಗತಿಸಲೆಂದೆ ।
ಬೆಳಗಿಸಿದ ದೀಪಾವಳಿಯವೊಲು
ಪೊಳೆಯುತಿರೆ ಬಿಜ್ಜಣವನಿಡುವೊಲು
ಸುಳಿಯುತಿರೆ ತಂಗಾಳಿ ಮೆಲ್ಲನೆ ದಿನಪ ಕಳಗಿಳಿದ ॥೩೧॥

ಕೊಂಚ ಸಮಯದವರೆಗಮಾಗಸ
ದಂಚು ಸೊಗಸಿತು ಸಂಜೆಗಂಪಿಂ
ಸಂಚರಿಸಿದಾಯಾಸ ಹರಿಸಲು ತಾವರೆಯಮಿತ್ರ ।
ಮಂಚದಲಿ ಮಲಗಿದನು ಹೊಳೆಹೊ
ಸ್ನಂಚ ಜಲದಪ ಹೊದೆದು ಚೆಲ್ವಜ
ಲಂಚರಂಗಳು ಸೇವೆಗೈದುವು ಸುತ್ತ ಸುಳಿಸುಳಿದು ॥೩೨॥

ಜೈಗಿಸಲಿ ಕೆಲಮೆರೆವ ಜಲಧಿಯು
ಮೇಗಣಂ ಶೈತ್ಯವನು ನೆರೆಕೊಂ
ಡಾಗಮಿಸ ಮೃತಲೋಕ ಹೆಚ್ಚಿಪ ಕತದಿ ಮಾರುತನು |
ಆಗ ಮಲ್ಲಲೆಯುತ್ತ ತುಂತುರ
ಸಾಗತರ ಮೇಲೆರಚಿ ಮೆರೆದಿರೆ
ತ್ಯಾಗಿ ಸ್ವೈಕತದಾಸಿಯಲಿ ಕುಳ್ಳಿದನು ಶಾಂತಿಯಲಿ ||೩೩||

ಈಯನಂತೋದಧಿಯ ತೆರೆಗಳು
ಮೀಯನಂತಾಂಬರದ ಮೌನವು
ಘೀಯೆಡೆಯ ನಿಷ್ಕಳದ ಬೆಡಗುಂ ದೇವದೇವೇಶ |
ನೋಯುತಿಹರೆದೆಗಳಿಗೆ ಶಾಂತಿಯ
ನೀಯೆ ನಿನ್ನಯ ಪರಮೆಯಲ್ಲವೆ
ಜೀಯ ರಕ್ಷಿಸೆನುತ್ತ ದೇವನ ನೆನೆದನಾ ಯತಿಪ ||೩೪||

ದೇವ ಜಲಧಿತರಂಗ ತವ ಗೀ
ತಾವಳಿಯ ಹಾಡುತಿದೆ ಗಗನಂ
ಭಾವಿಸಲು ಮೌನದಲಿ ನಿನ್ನಯ ಹಿರಿಮೆ ಹಾಡುತಿದೆ |
ಕಾವುದೈ ಪರಮಾತ್ಮನನ್ನೆದೆ
ಗೀವುದೈ ತವ ಸಾಗರಾಂಬರ
ದಾ ವಿಶಾಲತೆಯೊಂದನೇ ಸಾಕೆಂದು ಬೇಡಿದನು ||೩೫||

ದೇವ ರೋಕಾಭಾವ ಸಜ್ಜನ
ಕಾವ ಸತ್ಸುಖಭಾವ ಸೂಲಿ
ಸಾವ ಯೋಗಿಗಳಾವ ಸಿದ್ಧಳಭಾವ ಭಾವಿಪರೋ ।
ಆ ಪರಾತ್ಮನೆ ಯೀವುದ್ಯೆ ನವ
ಜೀವನವ ನಮ್ಮೀ ವಸುಂಧರೆ
ಗಾವಗಂ ಪ್ರಭೊ ಎನುತ ಮೈಮರೆದನು ದಯಾನಂದ ||೩೬||

ಸ್ವಸ್ತಿ ನೀಡು ನಮಸ್ತೆ ಪತನೆ ನ
ಮಸ್ತೆ ಲೋಕ ಸಮಸ್ತನಾಥ ನ
ಮಸ್ತೆ ಸಂಕಟನಿಸ್ತರಣನೆ ನಮಸ್ತೆ ಧಾರ್ಮಿಕರ ।
ಮಸ್ತಕೇಶ ನಮಸ್ತೆ ಸುಖ ಸ
ನ್ಯಸ್ತಜನಪ ನಮಸ್ತೆ ಜ್ಞಾನ ಗ
ಭಸ್ತಿಪುಂಜ ನಮಸ್ತೆ ಎಂದಾ ಯತಿಪ ನುಡಿದನು ||೩೭||

ಸೃಷ್ಟಿ ಸೌಂದರ್ಯವನು ನಿರುಕಿಸು
ತೆಷ್ಟೊ ಹೊತ್ತಿನ ವರೆಗ ಮನಸಂ
ತುಷ್ಟಿವಡೆದಿರೆ ಯತಿಪರಂ ತನ್ನಿಷ್ಟದೇವನನು ।
ತ್ವಷ್ಟನಂ ನುತಿಸುತ್ತ ಪರಪೋ
ತ್ಕೃಷ್ಟ ಚಿತ್ತಸ್ಥಿತಿಯೊಳಿರಲಾ
ಕೃಷ್ಟ ಭಕ್ತರು ಬಂದು ಕುಳ್ಳಿದರಕ್ಕಪಕ್ಕದಲಿ ||೩೮||

ಜಲಧಿಯಂತೆಯೆ ಯತಿವರ ಹೃ
ಜ್ಜಲಧಿಯೊಳಗಂ ದಿವ್ಯಸಂತಸ
ದಲೆಗಳೇಳುತ್ತಿರಲು ಕಂಗಳಿನೊಸರುತಿರೆ ಬಾಷ್ಪ |
ಉಲಿದು ರೋಮಾಂಚಗಳು ಮಿಗುತಿರೆ
ಜಲಜಲಿಪ ಕಾಂತಿಗಳ ಮುಖ ಮುಂ
ಡಲದಿ ನಸುನಗೆ ಮಿಂಚುತಿರೆ ಕಂಡೆರೆವನಾ ಸಂತ ||೩೯||

ಕಂಡೆರೆಯೆ ಮುನಿರಾಜ ಪಕ್ಕದಿ
ಬಂದು ಕುಳ್ಳಿಹ ಭಕ್ತಮಂಡಳ
ವಂದಿಸುತ ಪದಕೆರಗಿ ಜೀಯರೆ ಸೇವಕರಿಗಿಂದು |
ಒಂದೆರಡು ಹಿತವಾಕ್ಯ ಕರುಣಿಸಿ
ರೆಂದು ಬೇಡಲು ಯತಿಪ ನೆರೆದಾ
ಮಂದಿಗಾರ್ಯಸಮಾಜವೇನಾಯ್ತೆಂದು ಬೆಸಗೊಂಡ ||೪೦||

ಮುನಿಪನೀಪರಿ ನುಡಿದುದರ ಫಲ
ವೆನುವೊಲಾರ್ಯ ಸಮಾಜವಂ ಜನ
ಜನಿತವೆನ್ನಿಸಿ ಶುದ್ಧರೂಪವನೊಂದನದಕಿತ್ತು |
ಅನುವಿನಿಂ ವೇದೋಕ್ತ ಧರ್ಮವ
ಜನಕೆ ಸಾರುವ ಪಥವ ನಿರ್ಮಿಸಿ
ರೆನುತ ವಿನಯದಿ ಭಕ್ತಜನ ಬೇಡಿದರು ಯತಿವರನ ||೪೧||

ವಿನಯಿ ಪಾನಾಚಂದ್ರಪಾರಿಖ
ನನುವಿನಿಂ ನಿಯಮೋಪನಿಯಮವ
ನನಿತನುಂ ಹದಗೊಳಿಸೆ ಯತಿಭೂಕಾಂತನನುಮತಿಸೆ |
ಜನಭಣಿತ ಗಿರಗಾವಿನಲಿ ಸ
ನ್ಮನುಜ ಮಾಣಿಕಚಂದ್ರಪನುಪ
ವನಪಲಾರ್ಯಸಮಾಜ ಮೂಡಿತು ಮೊದಲನೆಯ ಸಾರಿ ||೪೨||

ಸುತ್ತೆ ವಿಕ್ರಮವರ್ಷ ಪತ್ತೊಂ
ಬತ್ತು ನೂರರ ಸಂಗಡಮು ಮೂ
ವತ್ತೆರಡು ಸಂದಿರಲು ಚೈತ್ರದ ಶುದ್ಧಪಂಚಮಿಯ |
ಪತ್ತುಗೆಯ ಸಂಜೆಯಲಿ ಜನರೊ
ತ್ತೊತ್ತಿನೆರೆದಿರೆ ಮುನಿಜನೇಶ್ವರ
ಚಿತ್ತವಿಸಿ ಘೋಷಿಸಿದನಾರ್ಯಸಮಾಜದುದ್ಭವನ ||೪೩||

ಮಂಗಳಾನಕ ಮೊಳಗುತಿರೆ ನಿ
ಸ್ಸಂಗಮುನಿ ಜಯಕಾರ ಹೂಮಳೆ
ಸಂಗಡಮೆ ಮೇಲೆದ್ದು ಜಗತಿಯ ಮೂರು ತಾಪಗಳ |
ಭಂಗಪಡಿಸಲು ದಿವ್ಯಸೌಖ್ಯವ
ನಂಗವಡಿಸಲು ತೆರೆವೆವೀ ಸ
ತ್ಸಂಗವಾರ್ಯಸಮಾಜವೆನ್ನುತ ಸಭೆಗೆ ಘೋಷಿಸಿದ ||೪೪||

ವೇದ ಧರ್ಮೋದ್ಧಾರ ಪಾತಕ
ಪಾದಪಾಳಿ ಕುಠಾರ ಸದ್ಗುಣ
ಸಾಧಕರ ಪರಿವಾರ ನವಜೀವನದ ದಾತಾರ |
ಮೋದಪಾರಾವಾರ ಮಿಥ್ಯೋ
ನ್ಮಾದಿಮನುಜಸುಧಾರ ಸತ್ಯಪ
ನೋದಿಜನ ಸಂಸಾರವೀಪರಿ ಜನ್ಮವೆತ್ತಿರಲು ||೪೫||

ವಾಸ್ತವಿಕ ಜಿಜ್ಞಾಸುಗಳ ವರ
ಮಾಸ್ತಿಕೀ ಭಾವನೆಯೊ ಸತ್ಯೋ
ಪಾಸ್ತಿ ಮೂರ್ತಿಯೊ ದೇವಧರ್ಮಜ್ಞಾನವಾಹಿನಿಯೋ |
ನಾಸ್ತಿಕರ ದುರ್ಬುದ್ಧಿ ಚಯ ಸೂ
ರ್ಯಾಸ್ತಮೋ ಧಾರ್ಮಿಕರ ನಿಷ್ಠಳ
ದಾಸ್ತಿಯೋ ತಾನೆನುವೊಲಾರ್ಯಸಮಾಜ ರಂಜಿಸಿತು |೪೬||

ಸದಯಯತಿವರ ನೊಂದರಾಶ್ರಯ
ಸದನವಾಗಲಿ ಪಾಪ ಕಲ್ಮಷ
ಕದನವಾಗಲಿ ಸಂಧಿಯಾಗಲಿ ವಿಮಳದಿಹಪರದ |
ವಿದಿತ ಧರ್ಮಸ್ರೋತವಾಗಲಿ
ಪದುಳಜ್ಞಾನದ ಗಂಗೆಯಾಗಲಿ
ಬದುಕಲಾರ್ಯಸಮಾಜವೆನ್ನುತ ಹರಸಿದನು ಕೊನೆಗೆ ||೪೭||

ಸರ್ವರಂತಃಸಾಕ್ಷಿಯವ ವಿಭು
ವ್ಪೂರ್ವನಂ ಸ್ತುತಿಸುವುದು ವೇದವೆ
ಸರ್ವಧರ್ಮಸ್ತ್ರೋತವಾತ್ಯಸಮಾಜಮುಂದಿರದಿ ।
ಸರ್ವರುಂ ಸಪ್ತಾಹದಂತ್ಯದಿ
ನಿರ್ವಹಿಸುವುದುಪಾಸನೆಯು ಜನ
ಸರ್ವಹಿತ ಸಾಧಿಸುವುದೆಂಬುದೆ ನೇಮವಾಯ್ತದಕೆ ॥೪೮॥

ಕಳೆಯಿಸಾತ್ಯಸಮಾಜಪಂ ಸ್ಥಿರ
ಗೊಳಿಸಿ ಬೊಂಬಾಯೀಪುರವ ಹಿಂ
ದುಳಿದು ಪಯಣದಲಹಮುದಾಬಾದಿನಲಿ ಬೋಧಿಸುತ ।
ಬಳಿಕ ಮೆರೆವ ಬರೋಡೆಯಲಿ ತಾ
ನಿಳಿದು ತುಂಬಿದ ವಿಶ್ವಮಿತ್ರೀ
ಹೊಳೆಯ ತೀರದಲೊಂದು ದೇಗುಲದೊಳಗ ನೆಲಸಿದನು ॥೪೯॥

ನೋಡಿ ಯತ್ಯಾಗಮನ ಶುಭವ ಬ
ರೋಡ ರಾಜ್ಯಾಧೀಶ ಗಾಯಕ
ವಾಡ ಭಕ್ತಿಯ ಭರದಿ ಭೋಜನ ಭಾಷಣಾದಿಗಳ ।
ನಾಡೆ ತಾನೇರ್ಪಡಿಸೆ ಜನ ಮಾ
ತಾಡುತಿರ್ದುದು ಮನೆಮನೆಯೊಳಂ
ಕೂಡಿ ಮುನಿಭೂಕಾಂತ ಕೀರ್ತಿಸ್ಫೂರ್ತಿ ವಾರ್ತೆಗಳ ॥೫೦॥

ಆ ದಯಾನಿಧಿ ಮುನಿವರಂ ವೇ
ದಾಧಿಕಾರವ ಕುರಿತು ಕೂಡಿದ
ಗಾಧ ಸಭೆಯೊಳಗೊಂದುದಿನ ಭಾಷಣವನೀಯುತಲಿ
ವೇದಮಂತ್ರವನೊಂದ ಕೋಮಳ
ಮಾದ ದನಿಯಿಂಪಾಡೆ ಸಭೆಯೊಳ
ಗಾದುದಾಕ್ಷಣ ಬುಧರು ಕೋಳಾಹಳವ ರಚಿಸಿದರು ||೫೧||

ನೆರೆದ ಸಂಭಾವಿತರು ಪಂಡಿತ
ವರರ ಬೆಸಗೊಳಲವರು ಸಭೆಯೊಳ
ಗಿರುವರಲೆ ಮುಸಲಿಮರು ಮೌಲಾಬಕ್ಷಗಾಯಕರು |
ಸರಿದು ಹಲಜನ ಶೂದ್ರರುಂ ಕುಳಿ
ತರಲೆ ಕೇಳುತ ಯತಿಪ ಮಂತ್ರವ
ನೊರೆದನರ್ಥವ ಗೈದನೆನ್ನುತ ರೇಗಿದರು ಕುದಿದು ||೫೨||

ಓವಿ ಕುಳ್ಳಿರಿಸಿದರು ತದ್ಭೂ
ದೇವರಂ ಮಾನಿತರು ಯತಿಜನ
ಭೂವರನು ಭಾಷಣವ ಮುಗಿಸಲು ಪಂಡಿತರು ಹಲರು |
ಆವರಿಸಿ ಶಾಸ್ತ್ರಾರ್ಥ ಸಂಗರ
ಗೈವ ಬಗೆಯಿಂ ಮುಂದೆವರೆ ಯತಿ
ದೇವಭೂದೇವರಲಿ ವಾದವಿವಾದ ಮೂಡಿದುದು ||೫೩||

ಕೇಳಲೋಸುಗ ನೆರೆದು ಕುಳಿತ ನ
ರಾಳಿ ಸುಲಭದೆ ತಿಳಿವವೊಲ್ಮುನಿ
ಮೌಳಿ ಸಂಸ್ಕೃತ ಸರಳತಮುಪೆಸುವಂತೆ ನುಡಿಯುತಿರೆ |
ತಾಳದದ ಪಂಡಿತರು ಜರೆದರು
ಜಾಳಿಸುತಲಿದಕೂಡ ನುಡಿಯೆಂ
ಬಾಳಿಹನೆ ವಿದ್ವಾಂಸತನಪಿದೆ ಸಾಕು ನಿಲಿಸೆನುತ ||೫೪||

ಮುಂದಕೈತಂದೊರ್ವ ಪಂಡಿತ
ನಿಂದುಪಾಧ್ಯರೆ ಭವತಿ ಪಚತಿಗ
ಳಿಂದ ಸಗ್ಗದು ಕಾರ್ಯ ನಿಮ್ಮದುರಿಂದು ನೋಡಿದಿರೆ |
ನಿಂದಿಹರು ದಕ್ಷಣದ ಪಂಡಿತ
ರೊಂದಿನಿಸು ಶಾಸ್ತ್ರೀಯ ವ್ಯೈಮೆಯ
ಮುಂದೆ ಬೆಳಗಿಸವೇಳ್ಪುದೆನ್ನುತ ಹಂಗಿಸಿದ ಯತಿಯ ||೫೫||

ಉದ್ಧತರು ಹಂಗಿಸಲು ಸಾಜದ
ಪದ್ಧತಿಯ ಬಿಟ್ಟೊಗೆದು ಸಂಧಿಸು
ಬದ್ಧ ಜಟಿಲಸಮಾಸಬಹುಲೀಕೃತಪದಾವಳಿಯ |
ಸಿದ್ಧಿಸುತಲತ್ಯಪ್ರಸಿದ್ಧ ವಿ
ಶುದ್ಧ ಸಂಸ್ಕೃತ ವಾಕ್ಪ್ರವಾಹವ
ನುದ್ಧರಿಸಿ ಯತಿಪಾಲ ನುಡಿಯಲು ಮುಂದಿ ಬೆರಗಾಯ್ತು ||೫೬||

ಸಿಕ್ಕನುಡಿಯನು ನುಡಿಯೆ ಮುನಿಪನ
ತಿಕ್ಕಿದಾ ಪಂಡಿತರು ನಾಸಿಕ
ಕಿಕ್ಕಿ ಬೆರಳನು ಬೆರಗುವೋಗುತ ಸರಿದು ಮೂಲೆಯಲಿ |
ಒಕ್ಕಡೆಯಲಳುಕುತ್ತ ಕುಳಿತರು
ಕಕ್ಕುಲತೆ ಎಡೆವಿಡದೆ ಹಬ್ಬಿತು
ಸೊಕ್ಕಳಿದು ಸೋಲೊಪ್ಪಿ ಸರಿದರು ಸಂತ ಸಮ್ಮುಖದಿ ||೫೭||

ಕ್ಷೌರಮಾಡಿಸಿಕೊಳ್ಳುತಾ ಯತಿ
ವೀರ ಕುಳ್ಳಿರಲೊಂದುದಿನ ಬಳಿ
ಸಾರಿ ಪಂಡಿತನೊರ್ವ ಮುನಿಯೇ ತ್ಯಾಗವೇ ಯತಿಗೆ |
ಸಾರ ಧರ್ಮವದಾಗಿರಲು ನೀ
ವಾರಯಿಸವದ ದೇಹದೀ ಶೃಂ
ಗಾರ ಕರ್ಮದಿ ನಿರತರಾಗಿಹಿರೇಕೆ ಗಡಯೆಂದ ||೫೮||

ಎಂದ ನುಡಿಗಳನಾಲಿಸಿ ದಯಾ
ನಂದಯತಿ ಗಹಗಹಿಸಿ ನಗುತಲಿ
ಮಂದಮತಿಯೇ ಕೂದಲಿಡುವುದೆ ನರಗೆ ತ್ಯಾಗವೆನೆ |
ಇಂದು ಕರಡಿಯೆ ಪರಮತ್ಯಾಗಿಯ
ದೆಂದೆನಿಪುದಲೆ ತ್ಯಾಗ ವೈರಾ
ಗ್ಯಂ ಧರೆಯೊಳೀ ನುಡಿಯುಲಿಲ್ಲೈ ತಮ್ಮ ಕೇಳೆಂದ ||೫೯||

ಬಂದು ಬುಧ ಮತ್ತೊರ್ವ ತಾನಿ
ನ್ನೊಂದುದಿನ ಶಾಸ್ತ್ರದಲಿ ತೆರೆನುಡಿ
ಯಿಂದ ನ ಯತೀನಾಂ ಹಿ ದದ್ಯಾತ್ ಕಾಂಚನಮೆನುತ್ತೆ ।
ಎಂದೊಡಂ ತಾವ್ ಧನಪಕೊಳ್ಳುವಿ
ರೆಂದು ಕೇಳಿಹೆವಲ್ತೆ ನಮ್ಮೀ
ಸಂದೆಗವ ಪರಿಹರಿಸಿರೆನ್ನಲು ಯತಿಪನಿಂತೆಂದ ॥೬೦॥

ಆವ ಭಗವದ್ಭಕ್ತರನ್ಯರ
ನೋವಹರಿಸಲು ನಿಜತನುಗಳನು
ನೋವಿ ತೆತ್ತಿಹರವರು ಕೋಟಿಯ ತೂಕ ಕಾಂಚನವ ।
ಈ ವಸುಧೆಯೊಳಗಿಟ್ಟೊಡಂ ಸಹ
ಭಾವಿಸಲಕಿಂಚನರೆ ಸರಿಯೈ
ನೀವರಿಯಿರಿದನೆಂದನಾ ಯತಿವರ ದಯಾಸಂದ ॥೬೧॥

ಬಲ್ಲವರೆ ನೀವಿನ್ನು ನನ್ನಯ
ಸೊಲ್ಲನಾಲಿಸಿ ಸುರನದೀತಟ
ದಲ್ಲಿ ಸುಳಿವಲಿ ಬರಿಯಕೋವಣವೊಂದ ಧರಿಸಿರ್ದೆ ।
ಅಲ್ಲಿ ಕವಡೆಯಕೂಡ ಮುಟ್ಟೆದ
ನಲ್ಲವಾದೊಡಮಿಂದು ನಾಂಜನ
ರೆಲ್ಲರಂ ಸುಖವಡಿಸೆ ತೊಡಗಿಹೆನೆಂದ ನಾಯತಿಪ ॥೬೨॥

ಆದ ಕತದಿಂದಾಲಿಸಿರಿ ನಾ
ವೀದಿನಂಗಳಲನ್ಯರಿಂ ಸಂ
ಪಾದಿಸುತ ಧನವನ್ಯಜನಕೋಸುಗಮೆ ವಿತರಿಸುತ ।
ಗೈದು ಕೂಪಮ್ವೃತ್ತಿಕಾನ್ಯಾ
ಯಾದರವ ಸನ್ಯಾಸ ಧರ್ಮದಿ
ನೋದಿಸುತ್ತಿಹೆವಿದಕೆ ಹೊದ್ದದು ದೋಷ ಕೇಳೆಂದ ॥೬೧॥

ಧನವೆ ಪಾಪದಮೂಲವೆಂಬಿರೆ
ಮನುಜ ಮುಟ್ಟೆದರದನು ಪಾತಕ
ಜನಿಪುದೆಂಬಿರೆ ಧನಿಕರಂತೆಯೆ ಕಾಣೆವಿರಿ ನೀವು ।
ಎನಲು ನಿಮ್ಮನು ನೀವೆ ಪಾತಕಿ
ಯೆನುತ ತಿಳಿವಿರೆ ಪೇಳಿರೆನೆ ಬುಧ
ಮುನಿಪಗೆರಗುತ ಕ್ಷಮಿಸಿ ದುಷ್ಪ್ರಶ್ನೆಯನು ಜೀಯೆಂದ ॥೬೨॥

ಇತ್ತ ಯತಿ ಬೋಧಿಸುತಲಿಂತಿರ
ಲತ್ತ ಬೊಂಬಾಯಿನಲಿ ಸಲಸಲ
ಕೊತ್ತುತಾರ್ಯಸಮಾಜಿಗಳ ಪೌರಾಣಿಕೋತ್ತಮರು ।
ಸುತ್ತಿ ಶಾಸ್ತ್ರಾರ್ಥವನು ಮಾಡಿರೆ
ನುತ್ತ ಪೀಡಿಸುತಿರಲು ಭಕ್ತರು
ಚಿತ್ತವಿಸೆ ಬೇಡಿದರು ಯತಿಪನ ತತ್ವರಕ್ಷಣಕೆ ॥೬೩॥

ಸಜ್ಜನಾಗ್ರಹದಿಂದ ಸಚ್ಚಿ
ದ್ವಿಜ್ಜನೇಶ್ವರ ಬಂದು ವಾದಕೆ
ಸಜ್ಜಿಸುತ ಹೂಂಕರಿಸೆ ಮುಂಬಾಪುರಿಯ ಪಂಡಿತರು ।
ಹೆಜ್ಜೆ ಹಿಂದಿಡುತಡಗಿದರು ಜನ
ರುಜ್ಜುಗಿಸಿ ಬುಧ ಕಮಲನಯನನ
ನುಜ್ಜ ರೇಗಿಸಿ ವಾವಗ್ಗೈಯಲು ನೂಂಕಿದರು ಮುಂದೆ ॥೬೬॥

ಘ್ರಾಮಜೀ ಕಾವಸಜಿಭವನದಿ
ನೇಮದಿಂ ಸಭೆಸೇರೆ ವಿಬುಧೋ
ದ್ದಾಮನೆನಿಸಿದ ಕಮಲನಯನಂ ಶಿಷ್ಯರೊಡಗೂಡಿ ।
ತಾಮೆರೆಯುತ್ತೈತಂದ ಸದ್ಗುಣ
ಧಾಮ ಯತಿವರ ದಿವ್ಯಪೀಠದ
ಲಾ ಮಹಾಸಭೆಯೊಳಗೆಮೊದಲೇ ಬಂದುರಂಜಿಸಿರೆ ॥೬೭॥

ಆಶ್ಚರ್ಯಬೇಚರ ಕಮಲನಯನಾ
ಚಾರ್ಯಪಂಡಿತವರನ ಚರ್ಚಾ
ಕಾರ್ಯವಾರಂಭಿಸಲು ಪೇಳ್ದೊಡನಾತಮೇಲೆದ್ದು ।
ಸ್ಥೈರ್ಯದಿಂ ನೆರೆದಿರ್ಪ ಬುಧರಾ
ದಾರ್ಯದಿಂ ತಂತಮ್ಮಮತದನಿ
ವಾರ್ಯನಾಮವ ಸಾರಬೇಕೆನೆ ಯತಿಪನಿಂತೆಂದ ॥೬೮॥

ಪರಮಪಂಡಿತ ಕಮಲನಯನರಿ
ಕರುಣೆಯಿಂ ತಾಪ್ಸ್ಪಂದು ಪಾದಿಸೆ
ನೆರೆದ ದಿನವಿದು ಮಾಂಗಳಿಕವೆಂದಾಸು ಭಾವಿಸಿಹೆ |
ನೆರೆದಿಹರು ಸಾಸಿರರು ಸುಳ್ದಿಟ
ಪರಿಯೆ ನಿಜಮತನಾಮುಸಾರುಪ
ಪರಿಯದೇತರದೆಲ್ಲಿಯದೊಗಡ ಎಂದನಾಯತಿಪ ||೬೯||

ಎನಿತೊಹೊತ್ತೀತೆರದಿ ನಡೆದಿರಿ
ಜನರು ನಿನಗಿದೊ ಮಂಗಳಾರತಿ
ಯೆನುತ ಹಂಗಿಸೆ ಕಮಲನಯನನನಾತ ನಾಚುತಲಿ |
ಕೊನೆಗೆ ನಿಜವದನವನು ನೆರಗಿನ
ಕೊನೆಯಿನವಚುತ ನಡೆದ ಯತಿಜಯ
ನಿನದಿಸಿತು ತತ್ಸಭೆಯಲಾದಿನ ಬಹಳಸಂಭ್ರಮದಿ ||೭೦||

ಬಳಿಕ ಮುನಿವರ ನೆರೆದ ಸಭಿಕ
ರ್ಗಳಿಗೆ ವಿಗ್ರಹಪೂಜೆ ಖಂಡಿಸಿ
ಕಳಕಳಿಯ ಭಾಷಣವನೊಂದನು ಸಲಿಸಿ ಬಿತ್ತರಿಸಿ |
ಬೆಳಗೆ ವೇದಜ್ಞಾನವಂ ಬಗೆ
ದಳೆದು ಜನಗಳು ಯತಿಪನಂ ಹೂ
ಮಳೆಗಳಿಂ ನೆನೆಯಿಸಿದರಾರ್ಜವದಿಂದ ಜವದಿಂದ ||೭೧||

ಇಂತು ಮುಂಬಾಪುರದಿ ಮಾನವ
ರಂತರಂಗೋಪವನಗಳ ಮಿಗು
ವಂತೆ ಸತ್ಯಜ್ಯೋತ್ಸ್ನ ಪಸರಿಸಿ ಬೆಳಗಿ ವಿಸ್ಮೃತಿಯ ।
ನಿಂತ ತಿಮಿರವ ಕಳೆದು ಸುಹೃದ
ನಂತ ಜಲಧಿಯನೆಳೆದು ಮೆರೆದನು
ಸಂತಕಾಂತಸುಧಾಕರಂ ತವೆ ಪರಸೆ ಪರಮಾತ್ಮ ॥೭೨॥

॥ ಇಂತು ಹದಿನಾರನೆಯ ಸಂಧಿ ॥



# ಹದಿನೇಳನೆಯ ಸಂಧಿ

**ಸೂಚನೆ—ಅರುಹಿ ಸತ್ಯಾರ್ಥಗಳ ಪೂನಾ**
**ಪುರದಿ ಚಾಂದಾಪುರದಿ ಬೋಧಿಸಿ**
**ಬರೆದು ನೇಮುವ ಮುನಿಪ ಲಾಹೋರಿನಲಿ ಬೋಧಿಸಿದ ॥**

ಹೇ ತರಳರೇ ಕೇಳಿ ನ್ಯಾಯುವಿ
ಧಾತನೆನಿಸಿದ ಭಕ್ತಜನ ವಿ
ಖ್ಯಾತ ಗೋವಿಂದಾತ್ಮಭವ ಮಹದೇವ ರಾನಡೆಯು ।
ಆತಪೋಧನಪದದಿ ಬೇಡಲು
ವೀತರಾಗಯತೀಶನಾತನ
ಮಾತನಡೆಯಿಸೆ ಬಳಿಕ ಪೂನಾನಗರಿಗೈತಂದ ॥೧॥

ರಾನಡೆಯೆ ಮೊದಲಪ್ಪ ಭಕ್ತಜ
ನಾನುನಯವಿನಯದಲಿ ವಿಜ್ಞಾತ
ಪೋನಿಧಿಯು ಹದಿನೈದು ಭಾಷಣಗಳನು ತತ್ಪುರದಿ ।
ಮಾನವೈಭವದಿಂದ ವಿತರಿಸಿ
ಮಾನವರ ಮನಗಳಲಿ ವೇದ
ಜ್ಞಾನ ಬೆಳಗಿಸಿ ಕೊಂಡನನುಪಮ ಗೌರವಂಗಳನು ॥೨॥

ಜ್ಞಾನಿಯತಿ ಮುನ್ನಡೆವ ದಿನ ಸ
ಮ್ಮಾನದಿಂದುತ್ಸವವ ವಿರಚಿಸಿ
ರಾನಡೆಯು ಪಲ್ಲಕ್ಕಿಯೊಂದರಲಿಟ್ಟು ವೇದಗಳ |
ಆನೆಯನಲಂಕರಿಸಿ ವಿರಜ ತ
ಪೋನಿಧಿಯ ಕುಳ್ಳಿರಿಸಿ ಹರಿದಿರೆ
ಮಾನವಾಂಬುಧಿ ರಾಜಮಾರ್ಗಂಗಳಲಿ ಕರೆತಂದ ||೩||

ಅತುಳವೈಭವದಿಂದ ನಿಸ್ಸಾ
ಳತತಿ ಮೊಳಗುತ್ತಿರಲು ಹೂಮಳೆ
ಸತತ ಸುರಿಯುತ್ತಿರಲು ಜಯಜಯಜಯದಯಾನಂದ |
ಯತಿಜಯಂ ನಿನಗೆಂಬ ನಾದ
ಸ್ತುತಿ ನಭವನಿರಿಯುತಿರೆ ನಗರದ
ಲತಿಶಯೋತ್ಸವ ಹರಿದುದೆಲ್ಲೆಡೆ ಹಲವುಸಾಸಿರದ ||೪||

ಇತ್ತಲುತ್ಸವ ಮೆರೆಯೆ ಪಾದದ
ಹೊತ್ತಿನಲಿ ಹಿಂಜರಿದ ಪಂಡಿತ
ರೆತ್ತಿಕಟ್ಟಲು ಹಲರು ಕಲಹಪ್ರಿಯರು ಸಂಗರಿಸಿ |
ಅತ್ತ ಯತ್ಯಪಮಾನ ಕಾಮಿಸಿ
ಕತ್ತೆಯೊಂದನು ಸಿಂಗರಿಸಿ ನೆರೆ
ಮತ್ತರಂದದಲೆದುರುವಂದರು ಮುನಿಪನುತ್ಸವಕೆ ||೫||

ಕೊಳಕುಚಿತ್ತದ ಜನರು ಯತಿಪಗೆ
ಕೊಳೆನುಡಿಗಳಾಡುತ್ತ ತಿರುಕನೆ
ಕೆಳಗೆ ಬಾಬಾಯೆನುತ ಕೈಗಳ ತೋರುತಣಕಿಸುತ |
ಕಳವಳಂ ಜನಿಪಂತೆ ಭಕ್ತರು
ಗಳನು ನೂಂಕುತ ನಡೆದುಬಂದಪು
ಮಳೆಯಕತದಿಂದಾದ ಕೆಸರೊಳ್ಸನೊಗೆದು ಕಲ್ಲಗಳನು ||೬||

ರಾನಡೆಯು ಗುರುದೇವ ಸ್ವಾಮೀ
ಹೀನಜನ ದುರ್ನಡೆಯ ವಾರ್ತೆಯ
ಸಾನುನಯು ಶಾಸಕರಿಗಿತ್ತಪೆವೆನಲು ಮುನಿರಾಯ |
ಏನಿದೇನಿದು ಜನರಿವರು ತಾ
ವೇನಗೈದಪರರಿಯರೀ ಬಗೆ
ಬೇನೆಗೌಷಧ ಶಾಂತಿ ಕುದಿಯದಿರೆಂದು ಬೋಧಿಸಿದ ||೭||

ಹಿಂದಿರುಗಿ ಮುಂಬಯಿಯುಲಿರೆ ನಯ
ದಿಂದಲೊರ್ವನು ತಾವು ವಸ್ತ್ರವ
ನೊಂದಿನಿಸು ಬಿಡದಂತೆ ತೂಗಿಸಿ ಕೊಡುವಿರದರಿಂದ |
ಮಂದಮತಿಗಳು ಜಿಪುಣಮುನಿ ತಾ
ವೆಂದರಿವರೆನೆ ಯತಿಪ ನಸುನಗೆ
ಯಿಂದ ಜನರೇನೆಂದೊಡೆನಗೇನಹುದೊ ಪೇಳೆಂದ ||೮||

ಪಾಕ ಮಿಗದಂತಾನೆ ಕೊಡುವೆನು
ಸಾಕನಿತ ಕೆಲಸಿಗರು ರೋಗದಿ
ಶೋಕಿಸರು ಮಿತವಾಗಿ ಭುಂಜಿಸೆ ಕಾರ್ಯಪರರಹರು ।
ಲೋಕದಲಿ ಸಸುಕಡಿಮೆ ತಿಂದರೆ
ತಾಕೆಡನು ಕೃಶಕೃಪಣನಾಗನು
ಹಾಕಲುಚ್ಛಿಷ್ಟವನು ಪರರಿಗೆ ಪಾಪ ಕೇಳೆಂದ ॥೯॥

ವರ ಯತಿಪನಾರ್ಯಾಭಿವಿನಯವ
ಬರೆದು ವರಸಂಸ್ಕಾರ ವಿಧಿಯಂ
ವಿರಚಿಸಾಪುರದಲ್ಲಿ ತದನಂತರದಿ ಹಲವು ಕಡೆ ।
ಅರುಹಿ ವೇದೋಕ್ತಿಗಳ ಲಕ್ನಾ
ಪುರದಿ ವಿಕ್ರಮಸಿಂಹನಾಮಕ
ಪರಮಭಕ್ತನ ಮನೆಯಲಿಳಿದನು ಧರ್ಮ ಘೋಷಿಸುತ ॥೧೦॥

ಆ ಮುನಿಪ ವಾಕ್ಯಪ್ರಬೋಧದ
ನಾಮದಿಂ ವ್ಯಾಕರಣ ವಿದ್ಯೆಯ
ಪಾಮರರುಮರಿವಂತೆ ಪುಸ್ತಕವೊಂದ ವಿರಚಿಸುತ ।
ಆ ಮಹಾಜನಗಳಿಗೆ ವಿತರಿಸೆ
ನೇಮ ಮೀರಿದ ದೋಷ ಹಲವಕೆ
ಧಾಮವಾಯ್ತಾಕ್ಷೇಪಗೈದರು ಕಾಶಿ ಪಂಡಿತರು ॥೧೧॥

ತಮ್ಮ ಗುರ್ವಪಮಾನ ಸ್ಮರಿಸ
ಲಮ್ಮದಿರೆ ಹಲಭಕ್ತಜನಗಳು
ಸುಮ್ಮನಿರದಾ ದೋಷಕುಲವನು ಯತಿಯ ಪುಸ್ತಕದಿ ।
ನೆಮ್ಮಿಸಹ ಸರಿಯೆಂದೆ ಸಾಧಿಸ
ಲೊಮ್ಮೆ ಯತ್ನಿಸುತಿರಲು ಯತಿಭೂ
ಪಮ್ಮುಗುಳುನಗೆಯಿಂದ ಭಕ್ತರನಿಂತು ಬೋಧಿಸಿದ ॥೧೨॥

ಸುಳ್ಳುಮಾತನು ಸಾಧಿಸಲು ಸಲೆ
ಪೊಳ್ಳು ಜಗಳಕೆ ನಿಲ್ಲುವುದು ಜಗ
ಕೊಳ್ಳಿತಲ್ಲೈ ಧಾರ್ಮ್ಮಿಕರ ಕರ್ತವ್ಯತಾನಲ್ಲ ।
ಒಳ್ಳೆತನದಿಂ ನಮ್ಮ ಪುಸ್ತಕ
ಮುಳ್ಳ ದೋಷವನೊಪ್ಪಿಕೊಳೆ ಸಟೆ
ಮುಳ್ಳೆಸರಿ ಧಾರ್ಮ್ಮಿಕರ ಮಾರ್ಗದಲೆಂದನಾ ಯತಿಪ ॥೧೩॥

ಮುಂದೆ ನುಡಿವಲ್ಲೊಂದುದಿನ ಭುವಿ
ವಂದಿತಂ ತತ್ಪ್ರಭುದಯಾಳನ
ಮುಂದೆ ಮಿತ್ರರೆ ನಾಲ್ಕು ವೇದಂಗಳಲಿ ತುಂಬಿರುವ ।
ಸುಂದರದ ಮಂತ್ರಂಗಳೊಳಗೊಂ
ದೊಂದನೇ ಹಿರಿಹಿರಿದು ಬುದ್ಧಿಯ
ಕಂದೆರೆದು ಪರಿಕಿಸಿಹೆ ಮೊದಲಿಂ ತುದಿಯುವರೆಗೆಂದ ॥೧೪॥

ಸೋದರರೆ ಮದ್ವಚನಗಳ ಕೇ
ಳಾದರಿಸಿ ನಂಬುವೊಡಸಂಭವ
ಮಾದ ಮಾತನಯುಕ್ತ ತತ್ವವನೊಂದಿನಿಸು ಕೂಡ |
ವೇದ ನಾಲ್ಕರಲೊಂದೆ ಮಂತ್ರಮ
ಯಾದೊಡಂ ಬಣ್ಣಿಸದು ವಾಸ್ತವ
ಮಾದ ನುಡಿಯಿದನೆಂಬುದರಿತಿಹೆನೆಂದನಾ ಯತಿಪ ||೧೫||

ಆದಿಯೊಳ್ಪರಿಕಿಸಿಯೆ ನಿಜಕರ
ಕ್ಕೈದ ನಾಣ್ಯಂಗಳನು ಚೀಲದಿ
ಮೋದಿ ನಿರ್ಭ್ರಮನಾಗಿ ತುಂಬುವ ವೈಶ್ಯನಂದದಲಿ |
ವೇದಗಳಲೊಂದೊಂದೆ ಮಂತ್ರವ
ನೋದಿ ನಾಂ ಯುಕ್ತಿ ಪ್ರಮಾಣದ
ಲ್ಲೈದೆ ಪರಿಕಿಸಿ ಪೂರ್ಣ ನಿರ್ಭ್ರಾಂತನಹೆ ಕೇಳೆಂದ ||೧೬||

ಆದಕತದಿಂ ಪ್ರಭುವಯಾಲರೆ
ವೇದ ನಾಲ್ಕರ ಸತ್ಯತೆಯಲೆನ
ಗೀ ದಿನದಲೆಳ್ಳಿನಿತು ಸಂಶಯಮಿಲ್ಲ ನರಕುಲಕೆ |
ವೇದಮೇ ಶಾಶ್ವತದ ಸುಖಸಂ
ಪಾದನೆಯ ಸನ್ಮಾರ್ಗ ತೋರಿಪು
ದಾದ ದೈವಿಕ ದೀಪ ದಿಟಮೆಂದನು ದಯಾನಂದ ||೧೭||

ಕಟ್ಟುಪಾಡನು ಹರಿದು ಮಂತ್ರದ
ಲಿಟ್ಟ ಸತ್ಯಾರ್ಥವನು ತನ್ನೆದೆ
ದಿಟ್ಟಿಯೊಳು ತರಬಲ್ಲ ಮಾನವದೀಪಕನೆ ಋಷಿಯ ।
ಪಟ್ಟವೇರಲು ಪಾತ್ರನೆಂಬೀ
ದಿಟ್ಟ ವಾಕ್ಯಾಶ್ರಯದಿ ನೋಡಲು
ಮುಟ್ಟಿದಂ ಋಷಿಪದವನೀಪರಿಯಿಂ ದಯಾನಂದ ॥೧೮॥

ವೇದಸಂಪ್ರಿಯನಿಂದ್ರಮಣಿ ಬುಧ
ನೈದಿ ಬೇಡಲು ಋಷಿ ಮುರಾದಾ
ಬಾದಿಗೈತಂದಿಳಿದು ಜಯಕೃಷ್ಣಾಲಯುವ ಬೆಳಗೆ ।
ಆದುದಾ ಭವನದಲೆ ಸಕಳವಿ
ನೋದದಿಂದಾಂಗ್ಲೇಯ ಭಾರತ
ವಾದಿ ಸಂಘದ ವಾರ್ಷಿಕೋತ್ಸವ ನೆರೆದ ಮಂದಿಯಲಿ ॥೧೯॥

ಕೊನೆಯ ದಿನ ಪಾದರಿಯು ಸೃಷ್ಟಿಯ
ನನುವಿನಿಂ ಚರ್ಚಿಸುತ ವಿಶ್ವಂ
ಜನಿಸಿತೈದು ಸಹಸ್ರವರ್ಷದ ಹಿಂದೆನಲು ತಂದು ।
ಮುನಿಪ ಹೊರಗಿಂ ಕಲ್ಲನೊಂದನು
ಜನರಿಗೆ ಶಿಲೆಯೀ ರೂಪಕೈತರ
ಲೆನಿತು ವರ್ಷಗಳಹುದೊ ಪೇಳಿರಿ ತತ್ವವಿದರಿಂದ ॥೨೦॥

ಆಗ ಬುಧರೀ ಶಿಲೆಗೆ ರೂಪವಿ
ದಾಗೆ ಲಕ್ಷಾಬ್ಧಿಗಳು ಬೇಕೆನ
ಲಾ ಗುರೂತ್ತಮನ್ನೈದೆ ಸಾಸಿರ ವರ್ಷವಿೀಭುವಿಗೆ |
ಸಾಗಿರಲು ಶಿಲೆ ಲಕ್ಷ ವರ್ಷದಿ
ತಾ ಗಳಿಸಿತೆಂತಾಕೃತಿಯು ಗಡ
ನೀಗಿರೀ ಮಿಥ್ಯಾಪ್ರಪಂಚವನೆಂದು ಬೋಧಿಸಿವ ||೨೧||

ರಾಜ್ಞಿ ವಿಕ್ಟೋರಿಯಳ ವಿಭವವು
ನೋಜ್ಞ ಮಹದುತ್ಸವದಿ ವರವೇ
ದಾಜ್ಞೆಯಂ ನರನರಪ ನಿಚಯಕೆ ತಿಳಿಪ ಬಗೆಯಿಂದ |
ಪ್ರಾಜ್ಞ ಋಷಿ ದೇಹಲಿಗೆ ಭಕ್ತರ
ನಾಜ್ಞಪಿಸಿ ನಡೆತಂದು ಸತ್ಯದ
ಯಾಜ್ಞಿಕಾಲಯ ಕುಟಿಯ ರಚಿಸಿದ ನಗರವಂಚಿನಲಿ ||೨೨||

ಬಂದು ಯವನನದೊಬ್ಬ ಸಭೆಯೊಳ
ಗೊಂದುದಿನ ನೀವ್ ಸ್ವಾಯುಗ್ವೈವಿರಿ
ಹಿಂದುಗಳ ಮೂರ್ತ್ಯರ್ಚನವ ಖಂಡಿಸುವಿರೀಕಾರ್ಯ |
ಹೊಂದುವುದು ಮಹಮುದರ ಬೋಧನೆ
ಗೆಂದೆನಲು ಋಷಿ ಎಲ್ಲ ಮತಗಳ
ಸಂದಣಿಯ ವಿಗ್ರಹದ ಪೂಜೆಯ ಖಂಡಿಸುವೆನೆಂದ ||೨೩||

ತಮ್ಮ ಪೌರಾಣಿಕರ ಮೂರ್ತಿಗ
ಳಮ್ಮದುರಲಾದವುದು ಸುಲಭದೆ
ನಿಮ್ಮ ಗೋರಿಮಸೀದಿ ಮೊದಲಹ ತೋರ ಮೂರ್ತಿಗಳ |
ಒಮ್ಮ ನೋಡಿರಿ ಮಹಡಿಮನೆಗಿಂ
ತಮ್ಮಹೋನ್ನತಮಿವನು ಕದಲಿಸ
ಲಮ್ಮದೆನಲಾ ಯವನ ನಿಂದನು ಬಿಗಿದ ಮೌನದಲಿ ||೨೪||

ಇರಲು ಮುಸ್ಲಿಮ ವರ್ಷ ಚಾಂದಾ
ಪುರದಿ ಸೇರಿದ ಜಾತ್ರೆಯಲಿ ಮುಂ
ದರಿದು ಮಹಮದ ಪಂಥ ಹಿಂದೂಧರ್ಮ ವಾದದಲಿ |
ಸರಿಯಲಿಸ್ಲಾಂ ತತ್ವವೆಲ್ಲವ
ನರಿದ ಹಿಂದೂ ಬುಧರ ಕರೆಯಿಸ
ಲುರುತರದ ನಿಶ್ಚಯವತಾಳ್ದನು ಗ್ರಾಮನಾಯಕರು ||೨೫||

ಮರುಸಲದ ಜಾತ್ರೆಯಲಿ ವಾದಿಸೆ
ಪರಮಪಂಡಿತನಿಂದ್ರಮಣಿಯನು
ಕರೆಯಲಾಗ್ರಾಮಸ್ಥರಾತನು ತಪ್ಪದೆಯೆ ತಾನು |
ಬರುವೆನಾದೊಡಮೊಂದು ದೇಶದಿ
ಪರಮ ವೇದಜ್ಞನೆನೆ ಸಾರಿಸಿ
ವರ ದಯಾನಂದರಹರವರನು ಕರೆವುದೊಳಿತೆಂದ ||೨೬||

ಎಂದ ಪಂಡಿತವಾಕ್ಯ ಕೇಳಾ
ಮಂದಿ ನಯದಿಂ ಬಂದುಬೇಡಲು
ಮಂದಹಾಸದಿನವರಿಗಭಯವನಿತ್ತು ಯತಿರಾಜ ।
ಮುಂದರಿಪು ಗೊತ್ತಾದ ಕಾಲಕೆ
ಬಂದು ಚಾಂದಾಪುರವ ಸೇರಿದ
ನೊಂದುಗೂಡಿದ ಹಲ ಸಹಸ್ರರ ಜಯನಿನಾದದಲಿ ॥೨೭॥

ನೆರೆದ ಪಾದರಿ ಮೌಲ್ವಿ ಮೊದಲಹ
ತರತರದ ಮಾನವರ ಹಲ ಸಾ
ಸಿರವ ಕಂಡಿಂದ್ರಮಣಿ ನಡುಗುತ ಪೂಜ್ಯಋಷಿವರರೇ ।
ಉರಿದು ಬೀಳ್ವರು ಮತಮತಾಂತರ
ಪರರು ಬೇಗದಿನದರ ಕತದಿಂ
ತೆರೆದು ಖಂಡಿಪುದೊಳ್ಳಿತಲ್ಲೆನೆ ಮುನಿಪನಿಂತೆಂದ ॥೨೮॥

ಸೋದರನೆ ಕೇಳ್ಸತ್ಯವಚನವ
ನಾದಿ ರೂಪದಿ ನುಡಿವ ಕಾಲದ
ಲೀ ದಯಾನಂದಯತಿ ಯಾರಿಗುಮಂಜುವವನಲ್ಲ ।
ನೀ ದುಗುಡವಂ ತ್ಯಜಿಸು ನಿನ್ನಯ
ಕೂದಲಂ ಸಹವಾವ ಮನುಜನು
ಮೈದಿ ಕೊಂಕಿಸಲಾರ ನಾನಿರೆ ಭೀತಿ ಬೇಡೆಂದ. ॥೨೯॥

ಮರುದಿವಸ ಬೆಳಗಿನಲಿ ಜನತತಿ
ನೆರೆಯೆ ಋಷಿವರ ಮೌಳ್ವಿಗಳು ಪಾ
ದರಿಗಳುಂ ಸಮುಚಿತದ ಪೀಠಂಗಳಲಿ ರಂಜಿಸಿರೆ
ಪರಮ ಪಿತನೇತರಿನದೇತಕೆ
ವಿರಚಿಸಿದನಾವಾಗಲೀ ತೆರ
ತೆರದ ವಿಶ್ವವನರುಹಿರೆಂದನು ಸಭೆಯ ನಾಯಕನು ||೩೦||

ಪಾದರೀ ಸ್ಕಾಟೆಂಬವಂ ಮೊದ
ಲೈದಿ ವಿಭುವಿದ ಶಾಸ್ತ್ರಯಿಂದಲೆ
ಗೈದಿಹಂ ಜಗಸುಖಕೆ ಕಾಲವನರಿಯೆವಾವೆಂದ |
ಮೋದಿ ಮೌಲವಿ ಮನುಜಗೋಸುಗ
ಗೈದನಿದ ವಿಭು ನರನವನ ನುತಿ
ಗಾದ ರಚನೆಯ ಕಾಲ ಬೇಕಿಲ್ಲೆಂದು ವಾದಿಸಿದ ||೩೧||

ಹರ್ಷದನಿ ಮೊಳಗಿದುದು ಪೂಜ್ಯಮ
ಹರ್ಷಿ ಪೀಠದಿನೇಳೆ ವಿಭವೋ
ತ್ಕರ್ಷದಿಂ ಹದಿನೈದು ಸಾಸಿರಜನಕೆ ವಂದಿಸುತ |
ಘರ್ಷಣಕೆ ಕತವಿಲ್ಲ ಶುಭನಿ
ಷ್ಕರ್ಷಗೋಸುಗ ನೆರೆದಸಭೆಗಾ
ಕರ್ಷಣಮೆ ಪರನಿಂದೆ ಸಲ್ಲದು ಶಾಂತಿಬೇಕೆಂದ ||೩೨||

ಇಂತರುಹಿ ಋಷಿರಾಜ ಸೃಷ್ಟಿಯ
ನಂತ ಪರಮಾಣುಗಳ ಪ್ರಕೃತಿ
ಯಿಂತೆಗೆದನುದ್ಭವವಮುಭಾವದಿ ಭಾವಕಳವಲ್ಲ |
ಎಂತು ಕಾರಣಗುಣಮೆ ಕಾರ್ಯದಿ
ನಿಂತಪುದು ನಾಸ್ತಿಯನೆ ಕಾರಣ
ಮಿಂತೆನಲ್ಸೃಷ್ಟಿಸಹ ನಾಸ್ತಿಯೆನಿಪ್ಪುದಲೆ ಎಂದ ||೩೩||

ಸೃಷ್ಟಿಯಂ ನಿಜರೂಪದಿಂದಲೆ
ತ್ವಷ್ಟ ರಚಿಸಿದನೆನಲು ಸೃಷ್ಟಿಯೆ
ತ್ವಷ್ಟರೂಪಮೆನಿಪ್ಪುದದರಲಭೇದ ಸಿದ್ಧಿಪುದು |
ದುಷ್ಟಪಾತಕಿಚೋರ ಮೊದಲಹ
ನಿಷ್ಟ ಪಾತಕವೆಲ್ಲ ವಿಭುವ್ರೊಳೆ
ಪುಷ್ಟಿವಡೆವುದು ಯುಕ್ತಿಶೂನ್ಯವಿದೆಂದ ಋಷಿರಾಜ ||೨೪||

ನೂರುತೊಂಬತ್ತಾರುಕೋಟಿಯ
ಮೀರಿದಿಪ್ಪತ್ತಾರು ಲಕ್ಷಂ
ಸಾರಿ ಮೇಲ್ನಾಲ್ವತ್ತು ಮೇಣೊಂಬತ್ತು ಸಾಸಿರವು |
ತೀರಿತೀ ಸೃಷ್ಟಿಯಲಿ ಗಣನಾ
ಪಾರದರ್ಶಕರೆಮ್ಮವರು ತಿಳಿ
ದೀ ರಹಸ್ಯವ ಹೇಳಬಲ್ಲರೆನುತ್ತ ಘೋಷಿಸಿದ ||೩೫||

ಜೀವಕೋಟಿಯ ಕರ್ಮಫಲಭೋ
ಗಾವಕಾಶಕೆ ನಾಲ್ಕು ಪುರುಷಾ
ರ್ಥಾವಲಂಬನಕೆಂದು ಪರಮನ್ಯಾಯಪರನಾದ |
ದೇವನೀ ಸೃಷ್ಟಿಯನು ರಚಿಸಿದ
ನಾವಗಂ ಪ್ರವಹಿಸುವುದೆನ್ನುತ
ಲಾವರರ್ಷಿಯು ಪೇಳೆ ನೊಳಗಿತು ವೇದಜಯಘೋಷ ||೩೬||

ಇರಲು ಋಷಿವರ ತಪ್ಮ್ಯಜಾಲಕೆ
ನರರು ಬೀಳರು ಸೋಲಿತಮಗೆಂ
ದರಿದು ಪಾದರಿ ಮೌಲ್ವಿ ಮೊದಲಹರುಳಿದು ತತ್ಪುರವ |
ತೆರಳಿದರು ತಾವ್ಯೈದು ದಿನಮಿರೆ
ನೆರೆದ ಧಾರ್ಮಿಕ ಜಾತ್ರೆ ತೀರಿದು
ದೆರಡೆ ದಿವಸಕೆ ಹಲರ ಮಿಥ್ಯಾಘೋಷಣದ ಕತದಿ ||೩೭||

ಒಂದುದಿನ ಋಷಿಯುಂದ್ರಮಣಿಯೊಡ
ನಂದದಿಂ ನುಡಿಯುತ್ತ ನಾವ್ಹಿಂ
ದೊಂದುಸಲ ಪಯಣದಲಿ ಶಾಕ್ತರದೊಂದು ಗುಂಪಿನಲಿ |
ಹೊಂದಿ ಮೈತ್ರಿಯನಿರಲು ಹಲಬರು
ಬಂದು ದೇವ್ಯುತ್ಸವವ ರಚಿಸಿಹೆ
ವೆಂದು ದಯದಿಂ ಬರ್ಪುದೆನ್ನುತಲೆಮ್ಮ ಬೇಡಿದರು ||೩೮||

ದೇವಿಯುತ್ಸವದಲ್ಲಿ ಗುಡಿಯಲಿ
ದೇವರ್ಕೈತರದಿರಲು ನೊಂದಪೆ
ವಾವು ಪೂಜಿಸ ತಮಗೆ ಪೇಳಿವು ಸುಮ್ಮನೈತಂದು ।
ಈವುದುತ್ಸಾಹವನು ನಮಗೆಂ
ದಾ ವಿಡಂಬನಶೂರರೆನ್ನಲು
ನಾವು ನಂಬಾ ಜನರ ನಡೆದೆವು ಕೂಡೆ ಮಂದಿರಕೆ ||೩೯||

ಊರ ಹೊರಗಣ ಘೋರವನದ ಗ
ಭೀರ ಗುಡಿಗೈದಿದೆವು ಶಾಕ್ತರು
ಸೇರಿ ಕುಣಿಕುಣಿದಾಡಿ ದೇವೀಸ್ತವನಗಳ ಹಾಡಿ ।
ಮೀರಿ ಮೆರೆದರು ನಾವು ದೇವಿಯ
ಮೂರುತಿಯ ಮುಗ್ಗುಲಲಿ ನೆರೆಗಂ
ಭೀರನೊರ್ವನು ಖಡ್ಗಧರಿಸಿರ್ದುದನು ನೋಡಿದೆವು ||೪೦||

ನೇರದಿಂದಾವಿಂತಿರಲು ಪೂ
ಜಾರಿ ದೇವಿಗೆ ಬಾಗಿರೆಂದನು
ಧೀರತನದಿಂದಾವು ನಮ್ಮಿಂದೀಪರಿಯ ಕಾರ್ಯ ।
ಧಾರುಣಿಯಲಳವಲ್ಲ ಸರಿಸರಿ
ದೂರಕೆಂದೆವು ಮುಳಿದು ತತ್ಪೂ
ಜಾರಿ ಬಂದೌಂಕಿದನು ಜವದಿಂ ನಮ್ಮ ಕಂಧರವ ||೪೧||

ಬೆರಗುವಡೆದಾ ಕ್ಷಣವೆ ನಾವ್ಕಂ
ದೆರೆದು ನಿಟ್ಟಿಸೆ ಕತ್ತಿಯಾಳ್ಬಳಿ
ಸರಿದು ಕೊರಳಂ ಕೊಯ್ಯಲಿರ್ಪುದ ಕಂಡು ತಿರ್ರ್ರಂದು |
ತಿರುಗವನ ಕರದಿಂದ ಕತ್ತಿಯು
ಹಿರಿದು ಕಸಿದರ್ಚಕನ ಗೋಡೆಗೆ
ಭರದಿ ತಳ್ಳಿದೆವವನು ಬಿದ್ದನು ನಡುಗಿ ಭೂತಳಕೆ ||೪೨||

ಕತ್ತಿಯಂ ಝಳಪಿಸುತ ನಾವ್ತಿಪು
ಹುತ್ತ ಹಿಂದಕೆ ಬರಲು ಬೀಗವ
ನೊತ್ತಿ ಹೆಬ್ಬಾಗಿಲಿಗೆ ಶಾಕ್ತರು ಕೊಡಲಿಹಾರಿಗಳ |
ಎತ್ತಿ ಹತ್ತಿಪ್ಪತ್ತು ಜನಗಳು
ಮುತ್ತಿಕೊಂಡರು ನಾವಸಿಯ ಬೀ
ಸುತ್ತ ಗೋಡೆಯ ಹಾರಿ ನಡೆದೆವು ಕೆಲದ ಕಾನನಕೆ ||೪೩||

ಅಂದಿನಿಂ ಶಾಕ್ತರಲಿ ನಂಬಿಕೆ
ಬಂದುದಿಲ್ಲೆಮಗೆಂದು ಋುಷಿಮು
ತ್ತೊಂದುದಿನ ನಾವ್ಸಂಚರಿಸುತಿರೆ ಕಾನನದಿ ಸಿಂಹ |
ಒಂದು ನಮ್ಮೆದುರಿಂದ ಬಂದುದು
ನಿಂದು ನಾವ್‌ದುರದುರನೆ ಕಣ್ಣುಗ
ಳಿಂದದರ ಮುಖನೋಡಲೋಡಿದುದಂಜಿ ವನಕೆಂದ ||೪೪||

ಒಂದು ನಗರದಿ ವಾಸಿಸಿರಲಿ
ನ್ನೊಂದುದಿನ ಬೀದಿಯಲಿ ಕಡುಮುಳಿ
ಸಿಂದ ಕೊಬ್ಬಿರ್ದೆರಡು ಗೂಳಿಗಳ್ಕೈದೆ ಗುದ್ದಾಡೆ |
ಮುಂದಿ ಬೆದರಿತು ನಾವು ನುಗ್ಗುತ
ಮುಂಪಕವುಗಳ ಕೋಡುಗಳ ಜವ
ದಿಂಪ ತಿರುಹಟ್ಟಿದೆವು ದೂರಕ್ಕೆಂದನಾ ಯತಿಪ ||೪೫||

ಇಂತರುಹಿ ಘಟನೆಗಳ ಮಾನಗ
ಳಂ ತಳೆದು ಋಷಿರಾಜ ಭಕ್ತರ
ಪಿಂತಣದ ಕಾಮನೆಯ ತೀರ್ಚುವ ಬಗೆಯಿನೈತಂದು |
ಸಂತಸದಿ ಪಂಜಾಬ ದೇಶಕೆ
ಮುಂತೆರಳಿ ಲುಧಿಯಾನ ನಗರದಿ
ನಿಂತು ವೇದೋದ್ಘೋಷಗೈದನು ಸೇರೆ ಸಾಸಿರರು ||೪೬||

ಪಾದರೀ ವೆರಿಯೆಂಬವಂ ಬಂ
ದಾದರದಿ ಭಾಗವತ ವರ್ಣಿತ
ನಾದ ಕೃಷ್ಣಮಹಾತ್ಮನೆಂಬುದ ಬುದ್ಧಿಯೊಪ್ಪದೆನೆ |
ಆ ದಯಾನಂದರ್ಷಿ ಬಹ್ವಪ
ವಾದ ಮಿಥ್ಯಾರೋಪ ಧಾರ್ಮಿಕ
ನಾದ ಕೃಷ್ಣಂ ಪರಮಪಾವನನೆನುತಲಿಂತೆಂದ ||೪೭||

ಇನ್ನು ಬುದ್ಧಿಗದೇನ ಪೇಳಲಿ
ಮುನ್ನಮೀಶ್ವರನಾತ್ಮ ಮಾನವ
ನನ್ನು ಪಾರಿವ ರೂಪದಲಿ ತಾಂ ಸೇರಿತೆಂಬುದನು |
ಚೆನ್ನೆನುತ ನಂಬುವಲಿ ಕೃಷ್ಣನ
ಬಿನ್ನಣದ ಲೀಲೆಗಳನೊಪ್ಪಲು
ಬನ್ನಮೇಕೆನೆ ಪಾದ್ರಿ ಮೌನದಿ ನಡೆದನಾಲಯಕೆ ||೪೮||

ಬಳಿಕ ಯತಿಭೂಪಾಲ ಪಯಣಂ
ಬೆಳಸಿ ಲಾಹೋರಪನು ಸೇರುತ
ಲಿಳಿಯೆ ಸೌಧಮದೊಂದರಲಿ ಮುನಷ್ಲಾಲನೆಂಬವನು |
ಹಳಿಯದಿರೆ ತಾವ್ಮೂರ್ತಿಪೂಜೆಯ
ನಿಳೆಗೆ ತಾವ್ಬಿವನೆಂಡೆ ತಿಳಿಪೆವು
ಹಳಿಯೆ ಜನ ಮುಳಿದಪರು ತಮಗೆಂದೊರೆವ ನಯದಿಂದ ||೪೯||

ವರಮುನಿಪನಿದಕೇಳಿ ನಸುನಗು
ತರರೆ ಶಿವಪಟ್ಟವನು ಸಾಧಿಪ
ಹುರುಳು ಕಾಮನೆಯಿಲ್ಲವೈ ನಮಗೀ ಧರಾತಳದಿ |
ಬರಲಿ ಸಂಕಟವೆನಿತೆ ಮುರಿಯೆವು
ಪರಮ ವೇದಾದೇಶಗಳನೆಂ
ದರುಹಲಾತನು ಮುಳಿದು ನಡೆದನು ಸಾಕುಸಾಕೆನುತ ||೫೦||

ದಿನದಿನಕೆ ಬೆಳೆದಿತ್ತು ತದೃಷಿ
ಜನಪನನುಯಾಯಿಗಳ ಮಂಡಳ
ವಿನತಮಸ್ತಕರಾಗಿ ಹಲಜನರೊಂದುದಿನ ಬಂದು ।
ಮುನಿಪರಾರ್‍ಯಸಮಾಜ ನಿಯಮವ
ನನುಗೊಳಿಸಿ ಹೊಸತೆರದಿ ನಿರ್ಮಿಪು
ದೆನಲು ಋಷಿವರ ತಾನೆ ರಚಿಸಿದ ಹತ್ತುನಿಯಮಗಳ ॥೫೧॥

ಉಲ್ಲಸಿತಮನನಾಗಿ ಋಷಿಭೂ
ವಲ್ಲಭಂ ಧ್ಯಾನಸ್ಥನಾಗುತ
ಚಲ್ಲುತಿಹ ಮಾಧುರ್‍ಯಭಾವದಲೀಶ್ವರನೆ ಮೂಲ ।
ಎಲ್ಲ ಸತ್ಯದ ವಿದ್ಯೆಗಂ ಮ
ತ್ತೆಲ್ಲುಗುವ ವಿಜ್ಞಾನ ಜನ್ಯಮ
ದೆಲ್ಲಕೆನ್ನುತ ಮೊದಲ ನಿಯಮವನೊರೆದ ಕಂದೆರೆದು ॥೫೨॥

ಸಚ್ಚಿದಾನಂದ ಸ್ವರೂಪಕ
ನುಚ್ಚ ಸರ್ವವ್ಯಾಪ್ಯನಾದಿಯು
ನಿಚ್ಚನಜರಾಮರ ಪವಿತ್ರನು ನಿರುಪಮಾಭಯನು ।
ಎಚ್ಚರಂ ಕರುಣಾಳ್ವಜನ್ಮನು
ಮಚ್ಚೆಯಿಲ್ಲದನಂತನೀಶ್ವರ
ನೆಚ್ಚುತವನನೆ ಪೂಜಿಸುವುದೆಂದೆರಡನೆಯ ನೇಮ ॥೫೩॥

ವೇದಗಳಖಿಳ ಸತ್ಯವಿದ್ಯೆಯ
ಗಾಧ ಗ್ರಂಥಗಳವನು ಪಠಿಸುವು
ದೋದಿಪುದು ತಾನಾರ್ಯಮಾತ್ರರ ಪರಮ ಧರ್ಮವದು |
ಐದೆ ಸತ್ಯವಕೊಳ್ಳಲಸತ್ಯವ
ಕಾದಿ ವರ್ಜಿಸಲೆಲ್ಲರುದ್ಧೃತ
ರಾದಪುದೆನುತ್ತಾಯ್ತು ಮೂರನೆ ನಾಲ್ಕನೆಯ ನೇಮ ||೫೪||

ನಡಪು ಕಾರ್ಯವನೆಲ್ಲ ಧರ್ಮದ
ಪರಿಯ ಸತ್ಯಾಸತ್ಯ ಸಾರವ
ನರಿದೆ ಗೈದಪುದೆನ್ನುತೈದನೆ ನೇಮ ನೇರ್ಪಡಲು |
ಧರೆಗೆ ಸಂತತ ದೈಹಿಕಾತ್ಮಿಕ
ವರ ಸಮಾಜೋನ್ನತಿಯುಪಕೃತಿ
ದೊರಕಿಸುವುದಾರನೆಯ ನೇಮವದಾಯ್ತನಂತರದಿ ||೫೫||

ಪ್ರೀತಿಯಿಂದೆಲ್ಲರಲಿ ಧರ್ಮದ
ನೀತಿಯಿಂ ಯೋಗ್ಯತೆಯನೀಕ್ಷಿಸಿ
ರೀತಿಯಿಂ ವರ್ತಿಸುವುದೇಳನೆ ನೇಮ ರೂಪಗೊಳೆ |
ಈ ತಿರೆಯಲಳಿಸುತಲವಿದ್ಯೆಯ
ನಾತುರದಿ ವಿದ್ಯೆಯನು ವರ್ಧಿಪು
ದೇ ತಿಳಿಯಲೆಂಟನೆಯದೆನಿಸಿತು ನೇಮ ಮಾಲೆಯಲಿ ||೫೬||

ಹಿಗ್ಗದೆ ಸ್ವೋನ್ನತಿಗೆ ಸಸ್ವರ
ಹಿಗ್ಗಿನಲಿ ಹಿಗ್ಗುವುದು ಭಾವಿಸೆ
ಸಗ್ಗದೊಂಬತ್ತನೆಯದಾದುದು ಸಪ್ತಹಿತಗೈವ |
ಒಗ್ಗು ಕಟ್ಟಳೆಗೆಲ್ಲವುಂ ಸಿರ
ತಗ್ಗುವುದು ಮೇಣ್ವ್ಯಕ್ತಿಹಿತದಲಿ
ನುಗ್ಗಿ ಸ್ವಾತಂತ್ರ್ಯವನು ತಳೆವುದೆ ಹತ್ತನೆಯ ನೇಮ ||೫೭||

ಆದುದುತ್ಸವ ಬಳಿಕ ಸನ್ಮನು
ಜೋದಧಿಯೆ ತಟಮೀರಿ ಹರಿದಿರ
ಲಾ ದಯಾನಂದರ್ಷಿಯಾರ್ಯಸಮಾಜಪಂ ತೆರೆದು |
ಮಾದರಿಯ ಭಾಷಣದಿ ದೊಡ್ಡದು
ವೇದ ಬೋಧನಕಾರ್ಯ ಜನ್ಮವ
ಮೇದಿನಿಯಲಿನ್ನೊಮ್ಮೆ ಕೊಂಡದ ತೀರಿಸುವೆವೆಂದ ||೫೮||

ಒಂದು ಸಾಪ್ತಾಹಿಕ ಸಭೆಗೆ ಋಷಿ
ಬಂದ ಸಮಯದಿ ನೆರೆದ ಭಕ್ತ
ವೃಂದವೀಶೋಪಾಸನಾರತವಿರ್ದು ಗುರುವರನು |
ಬಂದುದನು ಕಂಡೆದ್ದು ಲಗುಬಗೆ
ಯಿಂದ ಸತ್ಕಾರಗಳ ಸಲ್ಲಿಸಿ
ತಂದು ಕುಳ್ಳಿರಿಸಿದರು ತಿಳಿಯದೆ ತಮ್ಮ ತಪ್ಪಿತವ ||೫೯||

ಆ ವಿಭೂಪಾಸನೆ ಮುಗಿಯೆ ಮುನಿ
ದೇವ ಪ್ರಾರ್ಥನೆಗೈವ ಕಾಲದಿ
ದೇವನೊಡನಿಹಪಲ್ತಿ ಭಕ್ತರು ವಿಭುವ ಮೀರಿಸಿದ ।
ಆವನುಂ ಸಹಪಿಲ್ಲವದರಿಂ
ದಾವನೆನಿತೇ ಹಿರಿಯನಾಗಲಿ
ದೇವಪೂಜೆಯಲೇಳ್ವುದನುಚಿತವೆಂದು ಬೋಧಿಸಿದ ॥೬೦॥

ವಿನಯಿಯೊರ್ವ ಸಮಾಜದಧಿವೇ
ಶನದಲಾರ್ಯಸಮಾಜ ಸಂಸ್ಥಾ
ಪನ ಸುಕರ್ತನಿಗೊಂದು ಪದವಿಯ ಭೂಷಣವನಿತ್ತು ।
ಜನದಿ ಗೌರವಿಪುದೆನಲಾರ್ಯರ
ಮನಕೆ ಸೊಗಸಿತು ಸರ್ವರೊಪ್ಪಲು
ಮುನಿಜನೇಶ್ವರನಿಂತು ನುಡಿದನು ನಿರಭಿಮಾನದಲಿ ॥೬೧॥

ನಾನು ಹೊಸಮತವೊಂದ ವಿರಚಿಸಿ
ಮಾನಿ ಗುರುಗದ್ದುಗೆಯ ಮಠವಂ
ತಾನಲಂಕರಿಸಲ್ಕೆ ಹೊರಟವನಲ್ಲ ಸಜ್ಜನರೇ ।
ನಾನು ಮತವಾದಿಗಳ ಬಲೆಯಿಂ
ದೀ ನರರ ಬಿಡಿಸಲ್ಕೆ ಬಯಸೆನು
ಮಾನಗೀನದ ಹಂಗೆ ಬೇಡೆಂದನು ದಯಾನಂದ ॥೬೨॥

ಇಂತು ಸತ್ಯಜ್ಯೋತ್ಸ್ನಯಂ ತವೆ
ಸಂತಸದಿ ಲಾಹೋರ ವಾಸಿಗ
ರಂತರಂಗೋದ್ಯಾನದಲಿ ಪಸರಿಸುತ ಮುಂದಣದ ।
ಹಂತದಮೃತಸರ ನಿವಾಸಿಗ
ಳಂ ತವಿಪ ಬಗೆಯಿಂದ ನಡೆದನು
ಸಂತ ಜಲಧಿ ಸುಧಾಕರಂ ಮಿಗೆ ಹರಸೆ ಪರಮಾತ್ಮ ॥೬೩॥

॥ ಇಂತು ಹದಿನೇಳನೆಯ ಸಂಧಿ ॥



# ಹದಿನೆಂಟನೆಯ ಸಂಧಿ

**ಸೂಚನೆ—ಎಳೆಯರಿಗೆ ತಿನಿಸೆತ್ತುಗಳ ಸಲ**
**ಹಳುವ ಬುಧನಂಕ್ಷಮಿಸಿ ದ್ವೈತವ**
**ತಿಳುಹಿ ಹಿಂದಿಯ ಬೆಳೆಸಿ ಹೆತ್ತರವ್ಮೈವೆ ಬಣ್ಣಿಸಿದ ||**

ಹೇ ತರಳರೇ ಕೇಳಿ ಲವಪುರ
ದಾತುರರನೀತೆರದಿ ಸಂತವಿ
ಸಾ ತಪೋಧನದ್ವೈದುತವ್ಮೃತಸರಕೆ ನಲಿವಿಂದ |
ಭೀತಿಗೊಳದವತಾರ ವಾದವ
ನಾ ತಿಥಿಗಳಂ ಮೂರ್ತಿಪೂಜೆಯ
ತಾ ತೆರೆದು ಖಂಡಿಸಿದ ಹಲಸಾಸಿರದ ಗುಂಪಿನಲಿ ||೧||

ಶಾಲೆಯೊಂದರ ಗುರುವು ತನ್ನಯ
ಬಾಲ ವಿದ್ಯಾರ್ಥಿಗಳ ಕರದಲಿ
ಚೀಲಗಳಲಿಟ್ಟಿಗೆಯ ಚೂರ್ಗ್ಗಳ ತುಂಬಿ ಪಿಡಿಯಿಸುತ |
ಬಾಲಕರೆ ನಾವಿಂದು ಸಂಧ್ಯಾ
ಕಾಲಕೊರ್ವನ ಭಾಷಣಂಗಳ
ನಾಲಿಸಲು ಪೋದಪೆವು ನವ್ಮೊಡಬಹುದು ನೀವೆಂದ ||೨||

ನಾನು ಸನ್ನೆಯ ಗೈದೊಡನೆ ನೀ
ವೇನನುಂ ಚಿಂತಿಸದೆ ತದ್ವ್ಯಾ
ಖ್ಯಾನಕಾರನನಿಟ್ಟಿಗೆಗಳಿಂ ಪೊಡೆಯಿರಾ ಬಳಿಕ |
ನಾನು ತಿಂಡಿಯಕೊಡುವೆನೆಂದ
ಜ್ಞಾನಿಗುರು ಬಾಲಕರಕೂಡೆ ತ
ಪೋನಿಧಿಯ ಭಾಷಣದ ಸಭೆಯಲಿ ಮೆಲ್ಲನೈತಂದ ||೩||

ಕೂಡಿದುದು ಹಲಸಾಸಿರಂ ತಿಳಿ
ಗೇಡಿ ಗುರುವಿನ ಮಾತ ನಡೆಯಿಸೆ
ಕೂಡಿದಾ ಬಾಲಕರು ಕತ್ತಲೆಯಪ್ಪಕಾಲದಲಿ |
ತೀಡುತಿಟ್ಟಿಗೆ ಚೂರ್ಗಳಂ ಚೆ
ಲ್ಲಾಡೆ ಸಭೆಕಂಪಿಸಿತು ಭಾಷಣ
ಮಾಡುತಿರ್ದಾ ಋಷಿಯ ನೊಸಲಿಂ ರಕ್ತ ಚಿಮ್ಮಿದುದು ||೪||

ಜನನಿಕರ ಕದಡಿದುದು ಭಕ್ತರ
ಮನ ವಿಚಳಿಸಿತು ಯತಿಪನೆಳನಗೆ
ಮಿನುಗಿಸೊರಸುತ ನೊಸಲರಕ್ತವ ತನ್ನ ಸೆರಗಿಂದ |
ಕನಲದಿರಿ ನೀವೆನ್ನುತ ಸಭಾ
ಜನರ ಸಂತೈಸಿದನು ಬಾಲರ
ಮುನಿಪನೆಡೆಗೆಳೆತಂದು ನಿಲಿಸಿದರಾಗ ಸೈನಿಕರು ||೫||

ಪಿಡಿಯಲೀಪರಿ ಬಾಲಕರು ಗಡ
ಗಡನೆ ನಡುಗುತಲತ್ತರದ ಕಂ
ಡೊಡನೆ ಮುನಿಪಗೆ ಕರುಣೆಯುದಿಸಿದುದಾತನವರುಗಳ |
ಬಿಡಿರಿ ಮಕ್ಕಳೆ ಭಯವೆನುತ ಬೆಂ
ದಡವಿ ಬರಿದೇ ನನ್ನನೇತಕೆ
ಪೊಡೆದಿರೆನ್ನಿಂದಾದ ತಪ್ಪೇನೆಂದು ಬೆಸಗೊಂಡ ||೬||

ಕಡೆಗೆ ಬಾಲರು ತಮಗೆ ಪೊಡೆದರೆ
ಕೊಡುವೆ ತಿಂಡಿಯನೆಂದು ಗುರುಗಳು
ನುಡಿದರದರಿಂ ಪೊಡೆದೆವೆನ್ನಲು ಯತಿಪ ದಯದಿಂದ |
ಕೊಡರು ಬಹುಶಃ ಗುರುಗಳಾನೇ
ಕೊಡುವೆನೆನ್ನುತ ತರಿಸಿ ತಿಂಡಿಯ
ನೊಡನೆ ಹಂಚಿದನಾಹ! ಎನುತಿರೆ ಮಂದಿ ಸಂದೋಹ ||೭||

ಯತಿಪ ಮತ್ತೊಂದುದಿನ ಜಿಲ್ಲೆಯ
ಪತಿಗೆ ಕಾಂತಿಯ ರತ್ನದಿಂ ಪಿಡಿ
ದತುಳ ಖ್ಯಾತಿಯ ನಕ್ರಗಳನುಂ ತಳೆವ ಜಲಧಿಯೊಲು |
ಚತುರ ಯೋಗೀಶ್ವರರನುಂ ಕಡು
ಪತಿತರಂ ಸಹ ತಳೆದು ಮೆರೆವುದು
ಸತತ ಹಿಂದೂಧರ್ಮ ಕೆಟ್ಟರು ಬಿಡದು ಕೇಳೆಂದ ||೮||

ಮುಂದೆ ಹಲಪುರಗಳಲಿ ಬೋಧಿಸಿ
ಬಂದು ರಾವಲಪಿಂಡಿಗಾ ಋಷಿ
ನಿಂದಿರಲು ಸರದಾರ ವಿಕ್ರಮಸಿಂಹನೊಂದುದಿನ |
ಅಂದದಿಂ ಸದ್ಬ್ರಹ್ಮಚರ್ಯದ
ಸಂದ ಮೈಮೆಯ ಚರ್ಚಿಸೆ ದಯಾ
ನಂದ ಶಾಸ್ತ್ರೋಕ್ತಮಹ ವರ್ಣನೆ ಸತ್ಯಮಹುದೆಂದ ||೯||

ಎಂದೊಡನೆ ತದ್ಭಕ್ತ ತಾವುಂ
ವಂದಿತರೆ ಸದ್ಬ್ರಹ್ಮಚಾರಿಂಗ
ಳಿಂದೆ ಭಾವಿಪೆನಾದೊಡಂ ಸಹ ತಮ್ಮ ದೇಹದಲಿ |
ಇಂದು ಕಾಣೆ ವಿಶೇಷ ಶಕ್ತಿಯ
ನೆಂದು ಬಿನ್ನೈಸಿದನು ಯತಿವರ
ನೊಂದು ನುಡಿಯಂ ಕೂಡ ನುಡಿಯದೆ ನಕ್ಕನೊಂದುಸಲ ||

ಬಂಡಿಯಲಿ ವಿಕ್ರಮನು ಕುಳಿತನು
ಚಂಡ ವಾಜಿಗಳೆರಡು ಜಗ್ಗುತ
ಮಂಡಿಗಳ ನೆಲಕೂರಿ ಮುಗ್ಗರಿಸಿದುವು ಚಕ್ರಗಳು |
ಮುಂಡಳಿಸಿ ಮುಂದರಿಯಲಾರವು
ಬಂಡಿಯುಂಗುಲಕೂಡ ಜರುಗದೆ
ಕೊಂಡ ವಾಘೆಯನೆಳೆಯುತಿರ್ದನು ಬರಿದೆ ಸಾರಥಿಯು ||೧೧||

ಸಾರಥಿಯ ಯತ್ನಗಳು ವಿಫಲಿಸಿ
ತಾ ರಥಂ ನಿಂದಲ್ಲೆ ಕುಲುಕಿತು
ವೀರ ವಿಕ್ರಮಸಿಂಹನೇನಾಶ್ಚರ್ಯವೆಂದೆನುತ |
ಸಾರಥಿಯ ಸ್ಯೈರಿಸುತ ನೆರೆಗಂ
ಧೀರಭಾವದಿ ಹಿಂದೆ ನೋಡಲ
ಪಾರಕೌತುಕವೊಂದ ಕಂಡನು ಭಾಪುಭಾಪೆನುತ ||೧೨||

ಹಿಂದೆ ವಿಕ್ರಮನೋಡೆ ಯತಿವರ
ಹಿಂದಣದ ಗಾಲಿಗಳ ಹಾರೆಯ
ನಂದೆಡದ ಕೈಯಿಂದ ಹಿಡಿದಿಹ ಮಂದಹಾಸದಲಿ |
ಕಂದ ! ಸಂಶಯ ಪೋದುದೇ ನೀ
ನಿಂದು ಕಂಡೆಯ ಬ್ರಹ್ಮಚರ್ಯದ
ಸಂದ ಶಕ್ತಿಯನೆನುತ ಥಟ್ಟನೆ ಕರವ ಸಡಲಿಸಿದ ||೧೩||

ಅದುವೆ ಮೂಡುವ ಬಾಲಸೂರ್ಯನ
ಮುದಿತ ಬಿಂಬವಿದೆನಿಪ ತೇಜದ
ವದನದಿಂ ಸಿಹಿನಗೆಯ ಪೊಂಬೆಳಕುಗಳನುಕ್ಕಿಸುವ |
ವಿದಿತ ಕೀರ್ತಿಯ ವಜ್ರಸಮಕಾ
ಯದ ಮುನಿಯ ಪದಕೆರಗಿ ತವೆಗ
ದ್ಗದದಿ ವಿಕ್ರಮಸಿಂಹ ಭಗವನ್ ! ಕ್ಷಮಿಸಿರೆಂದಿಳಿದ ||೧೪||

ಬಳಿಕ ತತ್ಪುರದಿಂದ ಪಯಣಂ
ಬೆಳಸಿ ಯತಿವರ ಧರ್ಮಸದ್ವ್ಯತಿ
ಗಳನು ವಿರಚಿಸೆ ತಾಂ ವಜೀರಾಬಾದಿಗೈತಂದು |
ಇಳಿದು ಪಂಡಿತ ವಾಸುದೇವನ
ಕಳೆಯ ಪಾದದಿ ಮುರಿಯೆ ದಿನದಿನ
ಬೆಳೆದು ಹಬ್ಬಿತು ಭಕ್ತಮಂಡಳ ಸತ್ಯಬಲದಿಂದ ||೧೫||

ನೆರೆದ ಸಭೆಯೊಂದರಲಿ ಗಲಭೆಯ
ವಿರಚಿಸುತಲಾ ವಾಸುದೇವನು
ದುರುಳರಿಂ ಯತಿವರನನಿಟ್ಟಿಗೆ ಚೂರ್ಗಳಿಂ ಹೊಡೆಸಿ |
ಜರಿದು ನಡೆದನು ಮುಂದಿ ಕುದಿದುದು
ಹರಿವ ತನ್ನೆದೆ ರಕ್ತವಂ ಯತಿ
ವರನೊರಸಿಕೊಳ್ಳುತ್ತ ನಕ್ಕನು ಮಧುರಶಾಂತಿಯಲಿ ||೧೬||

ಒಂದು ಸಾಯಂಕಾಲವದುಮಳೆ
ಬಂದ ಮಳೆ ನಿಂದಿಹುದು ಬಲುಸೊಗ
ಸಿಂದ ಕಾಮನಬಿಲ್ಲು ಭೌತಾಧ್ಯಾತ್ಮ ಮಾರ್ಗಗಳು |
ಒಂದೆಕಡೆಗೂರ್ಧ್ವದಲಿ ವಿಭುವನೆ
ಸಂಧಿಪುದ ಸಾರುತಿಹ ಬೆಡಗುಗ
ಳಿಂದೆರಡುಕಡೆ ಭೂಮಿಯಿಂ ಮೇಲೇಳುತೊಂದಾಯ್ತು ||೧೭||

ಮುತ್ತುಪನಿಗಳು ಹಸಿರುಪುಲ್ಗಳ
ನೆತ್ತಿಗಳ ಸಿಂಗರಿಸುತಿರ್ದುದು
ಸುತ್ತಮುತ್ತಲ ಮರಗಳೆಲೆಗಳ ನೀರಬಿಂದುಗಳ |
ಬಿತ್ತರದ ನೆಲಕುದುರಿಸುತ ಚೆ
ಲ್ವೊತ್ತ ಹೂಗಳ ಸಿಹಿಯಕಂಪನು
ಹೊತ್ತು ಸುಳಿಸುಳಿದಿತ್ತು ಸಂಜೆಯ ಸವಿಯ ತಂಗಾಳಿ ||೧೮||

ಇಂತು ಪ್ರಕೃತಿದೇವಿ ಸೊಬಗಿನ
ಸಂತಸಪದಲಿರೆ ಸಂತವರ ನಲಿ
ವಂತಳೆದು ಸುಳಿದಾಡೆ ನಗರದ ಹೊರಗೆ ನಡೆತಂದು |
ನಿಂತು ಹೊರಹೊರಳುತ್ತ ಪೊಲಗಳ
ಹಂತಗಳ ಭೋರಿಡುತ ದಾಂಟುತ
ಮುಂತೆರಳುತಿಹ ತುಂಬುನೀರಿನ ಕೋಡಿಗಳ ಕಂಡ ||೧೯||

ಕೋಡಿಗಳ ಮೇಣಿಂದ್ರಧನುವನು
ನೋಡಿ ಋಷಿ ನಲಿಯುತಿರೆ ದೂರದಿ
ಗಾಡಿಯೊಂದರ ಚಕ್ರಗಳು ನೆಲಕಿಳಿದು ಹೊಕ್ಕಿರಲು |
ಹೂಡಿದೆತ್ತುಗಳೆರಡ ಬರಿದೇ
ಕಾಡಿ ಹೊಡೆಯುತ ತಿಣುಕುತಿಹ ಕಾ
ಡಾಡಿಯೊಬ್ಬನು ಕಂಡುಬಂದನು ಹೊಳೆವ ಕಂಗಳಿಗೆ ||೨೦||

ಆ ದಯಾನಂದರ್ಷಿಯೀಕ್ಷಿಸ
ಲಾ ದುರುಳನತಿಕೋಪದಿಂ ಕಟು
ಪಾದ ಹೊಡೆತವನೆತ್ತುಗಳಿಗಿಕ್ಕಿದನು ವೃಷಭಗಳು ।
ಸಾಧಿಸದೆ ಮುಗ್ಗರಿಸಿದುವು ಕಂ
ಡೀ ದುಗುಡವಂ ಮೋಣದೊಳ್ಮಿತ್ರಾ
ಪಾದ ಘುನಿಯೆದೆ ಕರಗಿ ಕಂಬನಿಯಾಗಿ ಚಿಮ್ಮಿದುದು ॥೨೧॥

ಭರದಿ ಯತಿವರ ಬಂಡಿಯಿದ್ದೆಡೆ
ತೆರಳಿ ನೊಂದೆತ್ತುಗಳ ಪಣೆಗಳ
ಕರದಿ ಸವರುತ ಬೆನ್ನುಗಳ ತಡವುತ್ತಲಕ್ಕರೆಯ ।
ಸರಿಯನೇ ಸುರಿಸುತ್ತ ಗಾಡಿಯ
ನರಸನಿಳುಹಿದ ಯೋಗಿ ಜನರಿಗೆ
ಪರರ ದುಃಖವೆ ದುಃಖವಲ್ಲವೆ ಭೇದವೆತ್ತಣದು ॥೨೨॥

ಬಳಿಕ ಯತಿವರ ಹೊದೆದ ವಸ್ತ್ರವ
ನಿಳುಹಿ ಪಶುಗಳ ಬಿಚ್ಚಿ ವಜ್ರವ
ಹಳಿವ ಪುಷ್ಟಿಯ ಕರಗಳಿಂ ನೊಗವಿಡಿದು ಕೆಸರಿನಲಿ ।
ಕುಳಿತ ಚಕ್ರಂಗಳನು ಕದಲಿಸಿ
ಚಳಿಸಿ ಲೀಲಾಜಾಲವೆನೆ ಹೊರ
ಗೆಳೆದು ತಂದನು ಬಂಡಿಯಂ ಕೃಷಿಗಾರ ಬೆರಗಾಗೆ ॥೨೩॥

ಆಲಿಸಿರನಂತರದೆ ಗುಜರಾ
ಸ್ವಾಲ ಪುರಕ್ಕೈತಂದು ಋಷಿವರ
ಸೋಲಿಸುತ್ತೀಸಾಯಿಪಾದರಿಗಳನು ವಾದದಲಿ ।
ಓಲಗಿಸಿ ವೇದೋಕ್ತ ಧರ್ಮವ
ಪಾಲಿಸಲು ಬೋಧಿಸಿರೆ ಪಾಸವ
ಜಾಲಮುಘ್ಯವಲೊರ್ವ ನರ ವನಿದೆಗೆದು ಓದಿಸಿದ ||೨೪||

ಓದಿಸುತಲಾ ವ್ಯಕ್ತಿ ನಡೆತಂ
ತಾ ದಯಾನಂದರ್ಷಿಗೆರಗಿ ಪ್ರ
ಮಾದಮಾದುದು ನನ್ನ ಕೈಯಿಂ ಗುರುಜನೋತ್ತಮರೇ ।
ಈ ದುರುಳನಂ ಕ್ಷಮಿಸಿ ತಮ್ಮಯ
ಪಾದ ಘಾತಪ ನಾಂ ಪಜೇರಾ
ಬಾದಿನಲಿ ಬಯಸಿದೆನು ಭಗವನ್ ! ಎನುತ ತೊದಳಿದುದು ||

ವೇದ ಧರ್ಮೋದ್ಧಾರಕಪು ತಾ
ವೀ ದುರುಳನದನರಿಯಲಾರದೆ
ಹೋದ ತಮ್ಮೆದೆಗಾದ ಗಾಯಕೆ ಮೂಲನೀ ಪಾಪಿ ।
ಹಾ ! ದಯಾಕರ ಕ್ಷಮಿಸಿರೆನ್ನುತ
ಪಾದಕುರುಳಲು ಮುನಿಪ ಕೋಮಳ .
ವಾದ ನುಡಿಯಿಂ ತವಿಸಿ ತಬ್ಬಿದನವನ ತನ್ನೆದೆಗೆ ||೨೬||

ತಾನೆ ತನ್ನೆದೆಗಿತ್ತು ಗಾಯವ
ತಾನೆ ತನ್ನಡೆಗಾತುಕೊಳುವಂ
ತಾ ನರದ್ವಿಜ ವಾಸುದೇವನೆ ತನ್ನ ತೋಳುಗಳ |
ಮಾನಸಮಧ್ಯದಲೊಪ್ಪುತಳುವುದ
ನಾ ನವರ್ಷಿಯು ಕಂಡು ಸತ್ಕರು
ಣಾಸುರಾಗದಿ ಕಂಠ ಗದ್ಗದವಾಗಲಿಂತೆಂದ ||೨೭||

ತಮ್ಮ ಶೋಕವಿದೇಕೆ ಮೌಢ್ಯದ
ಲೆಮ್ಮ ನೀಂ ಪೊಡೆದಾಗಳುಂ ಸಹ
ನಮ್ಮೆದೆಯಲಪಕಾರ ಭಾವನೆ ಮೂಡಲಿಲ್ಲವಲೆ |
ನೆಮ್ಮ ನಿಂದಾ ತಾಡನಾದಿಗ
ಳಿಮ್ಮುನಿಯರಾ ಯತಿಜನರು ಸತ
ತಮ್ಮಹಿಯ ಸೇವೆಯನೆ ಕಾಮಿಪೆವೆಂದನಾ ಯತಿಪ ||೨೮||

ಮುಂದೆ ಲವಪುರಕೈದಲು ದಯಾ
ನಂದನೊರ್ವನು ನಾಟ್ಯ ನರ್ತನ
ದಿಂದ ರಂಜಿಪ ಕೂಟದಲಿ ಕುಳಿಕುಳಿತೆ ರಾತ್ರಿಯನು |
ಅಂದದಿಂ ಕಳೆದಪೆವು ಧರ್ಮ
ವೃಂದ ಸತ್ಸಂಗಾದಿ ಕೂಟದಿ
ಬಂದಪುದು ಬಲುನಿದ್ರೆ ಕಾರಣಮೇನೊ ಗಡಮೆಂದ ||೨೯||

ಎಂದಮಾತಿಗೆ ಯತಿಪ ನಸುನಗೆ
ಯಿಂದ ಧಾರ್ಮಿಕ ಸಂಗಮಾತ್ಮನಿ
ಗೊಂದು ಕೋಮಳತಲ್ಪಮದರಲಿ ನಿದ್ರೆ ಬಾರದಿರೆ ।
ಬಂದಪುದು ಮತ್ತೆಲ್ಲಿ ನಾಟ್ಯ
ಸ್ಪಂದನದ ಭಾವಗಳು ಮುಳ್ಳಿನ
ದೊಂದು ಹಾಸಿನೊಲಿರಲು ನಿದ್ರಿಪುದೆಂತೊ ಪೇಳೆಂದ ॥೩೦॥

ಬಳಿಕಲಮೃತಸರಕೆ ಋಷಿವರ
ಬೆಳೆಸಿ ಪಯಣವನೇಳುಸಾಸಿರ
ತಳೆದ ಮಹತೀಸಭೆಯ ಮಧ್ಯದಿ ಪಾದ ಸಜ್ಜೆಯಲಿ ।
ಕುಳಿತಿರಲು ಶಾಸ್ತ್ರಾರ್ಥಿಬುಧನುಂ
ಡಳದ ಶಿಷ್ಯವೃಂದ ಕಲ್ಗಳ
ಮಳೆಗರೆದು ಧೂಳೆರಚಿ ನುಗ್ಗಿತು ರಚಿಸಿ ಗಜಬಜವ ॥೩೧॥

ಕಂಪಿಸಿತು ಸಭೆ ಮುನಿಯ ಭಕ್ತರಿ
ದಂ ಪಳಿದು ಧೂರ್ತರನು ದಂಡಿಸೆ
ಗುಂಪಿನೊಳ್ಸನ್ನಾಹಗೈದಿರೆ ಕಂಡು ಋಷಿರಾಜ ।
ತಂಪ ತಳೆಯಿರಿ ಜನರೆ ರೋಗಿಗ
ಳಂ ಪೊಡೆವರೇ ವೈದ್ಯರಜ್ಞಾ
ನಂ ಪರೀಕ್ಷಿಸೆ ರೋಗಮೈಸಲೆ ಶಾಂತಿಯಿರಲೆಂದ ॥೩೨॥

ಧೂಳು ಬೂದಿಗಳೆನಿತೆ ಮೇಗಡೆ
ಬೀಳಲದಕಾಂ ಬೇಸರಂಗೊಳೆ
ಕೇಳಿರಾರ್ಯಸಮಾಜವೆಂಬೀತೋಟ ಹುಲುಸಾಗಿ |
ತಾಳಿ ಫಲಪುಷ್ಪಗಳ ಬಾಳಲಿ
ಹೇಳಲೇನೀ ಜನರೆ ಭಕ್ತರೆ
ನಾಳೆ ನಿಮ್ಮಯ ಮೇಲೆ ಹೂಮಳೆಗಳ ಕರೆವರೆಂದ ||೩೩||

ಬಳಿಕ ರೂರ್ಕೀ ನಗರಕೈತಂ
ದಿಳಿದು ತದೃಷಿರಾಜ ಸತ್ಯವ
ತಿಳುಹುತಿರಲೊಂದುದಿನ ಭೋಟೂಸಿಂಹನೆಂಬವನು |
ಇಳೆಯಲಿ ಪರಾವಿದ್ಯೆಯಂ ತಾ
ವ್ತಿಳಿದುದಿಲ್ಲದು ತಮಗೆ ಗೊತ್ತಿರೆ
ಬೆಳೆಯಿಸೀ ದ್ವೈತವನು ಬೋಧಿಸುತಿರ್ದುದಿಲ್ಲೆಂದ ||೫೪||

ಅದಕೆ ಯತಿಪಂ ನಗುತ ವಿದ್ಯಾ
ವಿದನೆ ನೀ ಸಹ ಬ್ರಹ್ಮನಪ್ಪೆಯ
ಮುವದಿ ಪೇಳೆನಲಾತ ಹೌದೆನಲಾಗ ಮುನಿಪಾಲ |
ಉದಿತ ವಿಶ್ವವನಾರು ರಚಿಸಿದ
ರಿದನು ತಿಳುಹೆನಲವನು ಬ್ರಹ್ಮನೆ
ವಿದಿತ ವಿಶ್ವದ ಕರ್ತನೆಂದನು ಬೀರಿ ವೈಖರಿಯ ||೩೫||

ಸಕ್ಕು ಯತಿವರನಾಗ ಸತ್ತಿಹ
ರೆಕ್ಕೆಹುಳುವೊಂದನು ಹಗುರವೆನೆ
ಹೆಕ್ಕಿ ಭೋಟೋಸಿಂಹನೆಡುರೊಳಗದನು ನೀರದಲಿ |
ಇಕ್ಕಿ ನೀನೇ ಬ್ರಹ್ಮನಾಗಿರೆ
ಚಿಕ್ಕಹುಳವಿದಕಿಂದು ಜೀವನ
ದಕ್ಕುಸಂತೆಸಗೆಮಗೆ ಬ್ರಹ್ಮತ್ವವನು ತೋರೆಂದ ||೩೬||

ಎನಲು ಭೋಟೋಸಿಂಹ ನಾಚುತ
ಮುನಿಪದಾಂಬುಜಕೆರಗಿ ಮನ್ನಿಸಿ
ರೆನುತ ನಡೆದನು ಬಳಿಕಲಾ ಯತಿರಾಜ ಮೀರತಕೆ |
ಅನುವಿನಿಂ ತೆರಳಿಳಿದು ಮೂರ್ತ್ಯ
ರ್ಚನವ ಖಂಡಿಸಿ ಗೈದ ಪಾಪವ
ಮನುಜ ನದಿಯಲಿ ಮುಳುಗಿ ತೀರಿಸಿಕೊಳನು ದಿಟಮೆಂದ ||

ದೀಕ್ಷಿತಂಗೊರ್ವನಿಗೆ ಯತಿವರ
ನೀ ಕ್ಷಿತಿಯಲಘು ಗೈವಲಂತಃ
ಸಾಕ್ಷಿ ಬೇಡೆಂದಪುದು ಸತ್ಕಾರ್ಯಗಳ ಗೈವಲ್ಲಿ |
ಸಾಕ್ಷಿಯೊಳಗಿಂ ಹರ್ಷಭಾವದ
ದೀಕ್ಷೆ ಕೊಡುವುದು ತಿಳಿಯಲಿದು ಚಾ
ಣಾಕ್ಷಗೀಶಾಸ್ತ್ರತ್ವ ಸಿದ್ಧಿಯ ಸಾಕ್ಷಿ ಕೇಳೆಂದ ||೩೮||

ಮೃತರ ಶ್ರಾದ್ಧವ ಖಂಡಿಸಾ ಯತಿ
ಪತಿ ನುಡಿಯೆ ವಿಪ್ರರ್ಗೆ ಬಂದುದು
ಖತಿಯತುಳ ಭರದಿಂದ ಋಷಿಪತಿ ಸುಳಿವ ಹಾದಿಯಲಿ ।
ಮತಿವಿಕಳ ಮಲ್ಲರಿಗೆ ಕೋಲ್ಗಳ
ವಿತರಿಸೀ ನಾಸ್ತಿಕನಪೊಡೆಯಿರೆ
ನುತಲೊರೆದರದ ಭಕ್ತರರುಹಿದರಂದು ಮುನಿಪಂಗೆ ॥೩೯॥

ನಕ್ಕು ಯತಿವರ ಭಕ್ತರಿರ ನಮ
ಗಕ್ಕಟಿತ್ತಣ ಭೀತಿಯಾ ಜನ
ರಿಕ್ಕೆಲದಿ ಕುಳಿತೇನಗೈವರೊ ನೋಡಿಕೊಳ್ಳುವೆವು ।
ದುಕ್ಕ ಬೇಡಿರೆನುತ್ತ ಮೆಲ್ಲನೆ
ಸೊಕ್ಕಿದಾನೆಯ ತೆರದಿ ಪದಗಳ
ನಿಕ್ಕಿ ನೋಡುತ ನಡೆದ ನೆರೆದಾ ನೀಚ ನರಕುಲಪ ॥೪೦॥

ದಂಡವೆತ್ತುವ ಧೈರ್ಯ ನೆರೆದು
ದ್ದಂಡ ಮಲ್ಲರಲೊಬ್ಬನಲಿ ಸಹ
ಕಂಡುದಿಲ್ಲವರೊಬ್ಬರೊಬ್ಬರ ಮುಖವನೀಕ್ಷಿಸುತ ।
ಸುಂಡರಿಸಿದರು ಮುನಿಪ ನರಿಗಳ
ಹಿಂಡ ಮಧ್ಯದ ಸಿಂಹನಂದದಿ
ಮುಂಡಳಿಪ ನಗೆಯಿಂದ ಹಾದಿಯ ದಾಂಟ ನಡೆತಂದ ॥೪೧॥

ಮುಂತೆರಳುತಜಮೀರ ಜಯಪುರ
ಪಂಕ್ತಿಪುಗಿ ಬೋಧಿಸುತ ಯತಿಪನ
ನಂತರ ಹರಿದ್ವಾರ ನಗರಕೆ ಕುಂಭ ಜಾತ್ರೆಯಲಿ ।
ನಿಂತು ವೇದೋದ್ಘೋಷಗೈಯುವ
ಪಿಂತಣದ ಬಗೆಯಿಂದ ನಡೆತಂ
ದಂ ತೆರೆದು ಕುಟಿಯೊಂದನುಳಿವನು ಸತ್ಯ ಮಂಡಿಸುತ ॥೪೨॥

ಕುಳಿತು ಕುಟಿಯಲ್ಲೊಂದು ದಿನ ನಿ
ಶ್ಚಳತೆಯಿಂ ಋಷಿವರ್ಯ ಕೋಳಾ
ಹಳವ ನೋಡುತ್ತಿರಲು ಭಗವನ್ ! ವಂದಿಸಿಡೆನೆನುತ ।
ತಿಳಿನಗೆಯ ಸೂಸುತ್ತ ಪೊಲ್ನಡೆ
ದಳೆದು ಶಿಷ್ಯರ ಕೂಡೆ ಬಂದನು
ಕಳಕಳಿಪ ತೇಜಸ್ವಿಯಾನಂದವನನಂಬವನು ॥೪೩॥

ಜಗ್ಗನೇಳುತ ಯತಿಪನತಿಥಿಯ
ತಗ್ಗಿ ವಂದಿಸಿ ಕುಳ್ಳಿರಿಸಿದನು
ಹೆಗ್ಗುರುತು ವಿನಯಮುಲಿ ಪಿರಿಮೆಗೆ ಬಳಿಕಲಾ ಅತಿಥಿ ।
ಹಿಗ್ಗಿನಿಂದದ್ವೈತವಾದವ
ನುಗ್ಗಡಿಸಿ ಚರ್ಚಿಸಲು ತೊಡಗಿದ
ಸುಗ್ಗಿಯಾಮದು ಮುನಿಜನೇಶನ ತರ್ಕಚತುರತೆಗೆ ॥೪೪॥

ನೀತಿಯಿಂದಾನಂದವನನ
ಪ್ವೈತ ಸಾಧಿಪೆನೆಂದು ಕುಳ್ಳಿರ
ಲಾ ತಪೋಧನನಾಗ ವೇದೋಪನಿಷದಾದಿಗಳ |
ಮಾತುಗಳನುದ್ಧರಿಸಿ ಯುಕ್ತಿಯು
ಭೂತ ಪೂರ್ವಮಿದೆನೆ ನಿಯೋಜಿಸಿ
ದ್ವೈತವಂ ಸಾಧಿಸಿದನತಿಶಯ ಚತುರತನದಿಂದ ||೪೩||

ಜೀವಭಾವಂ ಕಾಲ್ಪನಿಕವಿದು
ಭಾವಿಸೀಕ್ಷಿಸೆ ಶುದ್ಧಬ್ರಾಹ್ಮೀ
ಭಾವನೆಯೆ ತಾಂ ಸತ್ಯಮಜ್ಞಾನೋಪಕರಣವಲಿ |
ಆವರಿತ ಚೈತನ್ಯ ತನ್ನಯ
ಭಾವವಂ ಮರೆದನ್ಯಭಾವವ
ಭಾವಿಸುವನೆಂದೊರೆದನಾನಂದವನ ಪಾದದಲಿ ||೪೬||

ಪರ ಯತೀಶ್ವರ ತನ್ನ ರೂಪವ
ಮರೆವ ಬ್ರಹ್ಮನನೆಂತು ಮಿತ್ರರಿ
ಕರೆವಿರ್ರೈ ಸರ್ವಜ್ಞನೆನ್ನುತ ತನ್ನ ಬೇರೆಂದು |
ಅರಿವನಾರ್ರೈ ಬ್ರಹ್ಮನಲ್ಲವೆ
ಮರುಳನಿವನೀ ಸೃಷ್ಟಿರಚಿಸುವ
ಪರಮುಬಲ ವಿಜ್ಞಾನಿಯೆಂತಹನೆಂದು ಬೆಸಗೊಂಡ ||೪೭||

ಇಂತು ಮಾಯೆಯ ವಶಕೆ ಬ್ರಹ್ಮಸ
ಡೆಂತೊ ಬಹನೆಂದಪಿರೆ ಸಾಧನ
ವಂತುಟಂ ಕೈಗೊಂಡು ನೀವ್ಬ್ರಹ್ಮತ್ವವನು ಗಳಿಸಿ |
ಸಂತಸಂ ತಾಳ್ದೊಡಮಹೋ ಮು
ತ್ತುಂ ತಪುದಿನಾ ಜೀವಭಾವದಿ
ಚಿಂತೆಗೊಳದಿರಲೇಂ ಪ್ರಮಾಣವೊ ಪೇಳ ನಮಗೆಂದ ||೪೮||

ಎಲ್ಲವುಂ ಬ್ರಹ್ಮನೆನೆ ಮತ್ತಿ
ನ್ನೆಲ್ಲಿ ಧರ್ಮಾಧರ್ಮಗಳು ವಿಭು
ವಲ್ಲಿ ಭಕ್ತಿಯ ನಿಡುವನಾರಾರೀಶನೆಂಬವನು |
ಎಲ್ಲಿ ಜ್ಞಾನಂ ಜ್ಞಾತೃ ಜ್ಞೇಯುಗ
ಳೆಲ್ಲಿ ವರ್ಣಾಶ್ರಮಗಳೆಲ್ಲಿಯ
ದೆಲ್ಲಿ ನ್ಯಾಯಾನ್ಯಾಯ ವಿವರಿಸಿರೆಂದನಾ ಯತಿಪ ||೪೯||

ಕಳ್ಳನುಂ ವ್ಯಭಿಚಾರಿಯುಂ ನೆರೆ
ಸುಳ್ಳನುಂ ತಲೆಹೊಡೆಕನುಂಫಲ
ಮುಳ್ಳನುಂ ವಿದ್ರೋಹಿಯುಂಸಹ ಬ್ರಹ್ಮನೇವನಲು |
ಒಳ್ಳಿತನಕುಳಿವುಂಟೆ ಹೇ ತಿಳಿ
ವುಳ್ಳ ಮಿತ್ರರೆ ಸತ್ಯಮಾರ್ಗಕೆ
ಮುಳ್ಳಿದಲ್ಲವೆ ನೀವೆ ಯೋಚಿಸಿರೆಂದನಾ ಯತಿಪ ||೫೦||

ಕಟ್ಟಿದೀ ಒಗೆ ಲೋಭ ಬ್ರಹ್ಮನ
ಪಟ್ಟಕೇರಲುಬಯಸಿ ಮರೆವಂ
ಕೊಟ್ಟು ಶುದ್ಧಬ್ರಹ್ಮನಿಗೆ ನೀವವನ ಹಂಗಿಪಿರಿ |
ದಿಟ್ಟತನಕೇನೆನಲಿ ಬ್ರಹ್ಮನ
ಪಟ್ಟಕೇರುವುದುಳಿದು ಬ್ರಹ್ಮನ
ನಿಟ್ಟಪಿರಿ ನೀವಜ್ಞಭಾವದಲೆಂದನಾ ಯತಿಪ ||೫೧||

ಅಲ್ಲ ವಿಜ್ಞರೆ ಸತ್ಯ ತತ್ವವಿ
ದಲ್ಲ ಸರ್ವಜ್ಞನಹ ವಿಭುವಿಗೆ
ಸಲ್ಲಪಲ್ಪಜ್ಞತ್ವ ನಿತ್ಯಾನಂದ ಬ್ರಹ್ಮನಿಗೆ |
ಇಲ್ಲವೀ ಪರಿ ಶೋಕಗಳು ನಿ
ಮ್ಮಲ್ಲಿರುವ ತಪ್ಪುಗಳನೀಶ್ವರ
ನಲ್ಲಿ ಕಲ್ಪಿಸಬೇಡಿ ಯೋಚಿಸಿರೆಂದನಾ ಯತಿಪ ||೫೨||

ಪರಮಹಂಸಾನಂದವನ ಯತಿ
ವರನ ಯುಕ್ತಿ ಸಮೂಹವಾಲಿಸಿ
ಬರಿಯ ಬುದ್ಧಿಯ ಮಾತುಗಳಿವಂ ತೊರೆದು ತತ್ವವನು |
ನಿರುಕಿಸೈ ಯತಿವರ್ಯ ಬುದ್ಧಿಗೆ
ದೊರೆಯನೀಶ್ವರ ಚತುರವಾದಕೆ
ಪರಮವಿಖ್ಯಾತನಹೆ ನೀನೆನೆ ನಕ್ಕನಾ ಮುನಿಪ ||೫೩||

ನಗುನಗುತ ಯತಿಪಾಲನರರೇ
ಜಗದ ಕರ್ತೃರು ನೀವೆಯಾಗಿರೆ
ಮಗುವಿನಂತಹ ಹುಲುನರಂ ನಾನೊರೆದ ಸಂಶಯವ |
ಬಗೆಯು ಹರಿಸದೆ ಬುದ್ಧಿಯನೆ ನೀ
ವ್ತೆಗಳುತಿರ್ಪಿರೆ ನಿಮ್ಮ ಬ್ರಹ್ಮಗೆ
ಮಗುವಿನಿನಿತುಂ ತಲೆಯೆ ಯಿಲ್ಲವೆ ಶೋಕ ಹಾಯೆಂದ ||೫೪||

ಕೊನೆಗೆ ಗಾಂಭೀರ್‍ಯವನು ತಳೆದಾ
ಮುನಿವರಂ ನಾವಿರ್ವರುಂ ಸಹ
ವಿನುತ ಬ್ರಹ್ಮರೆಯಾಗಿರಲು ಮತಭೇದವೆಂತಹುದು |
ನನಗೆ ಭ್ರಮವಿರೆ ನೀವು ನಿರ್ಭ್ರಮ
ರೆನಲು ಬ್ರಹ್ಮನಖಂಡಜ್ಞಾನದ
ವನಧಿಯೆಂತಹ ಪೇಳಿ ಶಂಕಿಪರಾರೊ ಗಡವೆಂದ ||೫೫||

ಬೆಳಗಿನಿಂ ನಡುವಗಲನಕ ನಿ
ಶ್ಚಳತೆಯಿಂದಾ ಯತಿಗಳಿರ್ವರು
ಕುಳಿತು ವಾದಂಗೈದರಾನಂದವನನಾಬಳಿಕ |
ಕುಳಿತ ಪೀಠದಿನೆದ್ದು ಜಗ್ಗನೆ
ತೊಳೆದು ದೃಗ್ಜಳದಿಂದ ಮುನಿಪದ
ಗಳನು ಭಗವನ್! ತಾವೆ ಗುರು ನನಗೆಂದ ನಯದಿಂದ ||೫೬||

ಮಿಕ್ಕುಗುವ ಗದ್ಗದದಿ ಬಳಿಕವ
ನೊಕ್ಕಲಿತ ಶಿಷ್ಯರಿಗೆ ಮುಕ್ಕಳಿ
ಸಿಕ್ಕಿತೀ ದಿನ ಸತ್ಯಮೀಗಾಂ ದ್ವೈತಿಯಾಗಿಹೆನು |
ಕುಕ್ಕುತಿವರದ್ವೈತಪಾವದ
ಸೊಕ್ಕ ಮುರಿದರು ಸತ್ಯವಂ ನೀ
ವಕ್ಕರಿಂ ಕೊಳಿರೆಂದ ಯತಿಪನ ಕೀರ್ತಿ ಪರಡಿಮುಸು ||೫೭||

ಒಂದುದಿನ ಯತಿಭಕ್ತನೊರ್ವನು
ವಂದಿಸುತ ತಾವ್ಬರೆದ ಪುಸ್ತಕ
ವಂ ದಯದಿನಸುವಾದ ಮಾಡಿಸಿ ಘಾರಸೀಲಿಪಿಯು |
ಹೊಂದಿಸಲ್ಪಂಜಾಬಿ ಮೊದಲಹ
ಮುಂದಿಗತಿ ಸೌಕರ್ಯಮಾದಪು
ದೆಂದೆನಲು ಗಾಂಭೀರ್ಯದಿಂ ಮುನಿಪಾಲನಿಂತೆಂದ ||೫೮||

ಅರಶಿ ನೀನೀಗೆಮಗೆ ಭಾಷಾಂ
ತರದ ಸಲಹೆಯನೀವೆ ನಮ್ಮೀ
ತೆರೆದ ಕಂಗಳು ತುಹಿನಗಿರಿಯಿಂ ಪಿಡಿದು ದಕ್ಷಿಣದ |
ಸೆರಗ ಕನ್ಯಾಕುವರಿಯನಕಂ
ಭರದಿ ಹಿಂದೀಭಾಷೆ ಪಸರಿಪ
ಪರಮುಶುಭದಿನ ನೋಡೆ ಕಾದಿಹುವೆಂದನಾ ಮುನಿಪ ||೫೯||

ತಾಯಿನುಡಿ ಗುಜರಾತಿಗೊಲವಿರೆ
ತಾಯಿನುಡಿಗಿಂತಧಿಕ ಸಂಸ್ಕೃತ
ಮೇಯೆನಗೆ ಪ್ರಿಯವಿರಲಿವಂ ತೋರೆದಾರ್ಯಭಾಷೆಯಲಿ ।
ದಾಯದಿಂದಾಂ ಗ್ರಂಥವೆಲ್ಲವ
ನೀಯಲೇಂಕತ ನಮ್ಮ ಭಾರತಿ
ತಾಯ ಸುತರೇಕತ್ವಕೊಂದೇ ಭಾಷೆ ಬೇಕೆಂದ ॥೬೦॥

ಕುಂಭಕೇರಿವ ಬಳಿಕಲಾ ಯತಿ
ಪಂ ಬೆಳಸಿ ಪಯಣವನು ವಿರಮಿಪೆ
ವೆಂಬ ಬಗೆಯಿಂದಿಳಿಯೆ ದೆಹರಾದೂನ ನಗರದಲಿ ।
ತುಂಬುಭಕ್ತಿಯ ಭರದಿ ಮುಂಬಯಿ
ನಿಂ ಬರುತ ಬ್ಲೇವಟ್ಸ್ಕಿಯಾಲ್ಕಾ
ಟೆಂಬ ಪಶ್ಚಿಮದೇಶದಾನತರೆರಗಿದರು ಮುನಿಗೆ ॥೬೧॥

ಬಳಿಕ ಮುನಿವರ ಮುಂದೆ ತೆರಳಿದ
ಕುಳಿತು ಕೆಲದಲ್ಲೊಪ್ಪ ನರ ಸಭೆ
ಯೊಳು ಮುರಾದಾಬಾದಿನಲಿ ತಾನಾಂಗ್ಲಭಾಷೆಯನು ।
ಇಳಿದನಿಯಲುಚಿರುತಿರೆ ತನ್ನವ
ರೊಳು ಕುಳಿತು ನಿಜಭಾಷೆನುಡಿವುದೆ
ತಿಳಿಯೆ ಶೋಭಾಜನಕ ಪರನುಡಿ ಮಾನತರದೆಂದ ॥೬೨॥

ಒಂದುದಿನವಿಂದ್ರಮಣಿ ಬುಧಭೂ
ವಂದಿತರ ಹಿರಿಯರಿಗೆ ಕಿರಿಯರು
ನಿಂದು ನಯದಿ ನಮಸ್ತೆಯೆಂದರೆ ಯೋಗ್ಯವೆನ್ನುವುದು ।
ಚೆಂದವಿದು ಹಿರಿಯರವರು ಕಿರಿಯರ
ಮುಂದೆ ನಿಂತು ನಮಸ್ತೆಯೆಂದರೆ
ಮಂದಿ ನಗುವರು ಹಾಸ್ಯತರಮಹುದೆಂದ ನಯದಿಂದ ॥೬೩॥

ಒರೆದುದಕೆ ಯತಿಪಾಲ ಪುತ್ರರೆ
ಹಿರಿಯರಭಿಮಾನವನು ಗೈಯರು
ತೋರಿದವರಹಂಕಾರ ಭಾವವ ಹಿರಿಯರೆನ್ನಿಪರು ।
ಕಿರಿಯರುಂ ಗೌರವಕೆ ಪಾತ್ರರೆ
ಸರಿಯುರದ ಭಾವನೆಯ ಹೊರಗಡೆ
ತರುವುದುಚಿತ ನಮಸ್ತೆ ಪಲ್ಗಂಜುವಿಕೆಯಲ್ಲೆಂದ ॥೬೪॥

ಅಂದೆ ಯತಿವರ ರಾಮಲಾಲನ
ಮುಂದೆ ನಮ್ಮೀಕಾಯ ಬಹುದಿನ
ನಿಂದಿರದು ನಾವ್ಬರೆದ ಗ್ರಂಥಗಳಿಂದ ಸತ್ಯವನು ।
ಹೊಂದೆನಲು ತದ್ಭಕ್ತ ಶೋಕಿಸು
ತಿಂದದೇಕಿಂತೆನುವಿರೆನೆ ಋಷಿ
ಹಿಂದೆ ನನಗತಿವಿಷವನಿತ್ತರು ಮಂದಿ ಕೇಳೆಂದ ॥೬೫॥

ನನ್ನ ದೇಹಕೆ ನರರು ಕಟುವಿಷ
ವನ್ನು ಕೊಡದಿರ್ದಲ್ಲಿ ತನುವೊಳ
ಗಿನ್ನುಮೀ ಶಿಥಿಲತೆಯ ಕುರುಹೇ ಕಾಣುತಿರಲಿಲ್ಲ |
ಎನ್ನಬಳಿ ಶತಮಾನ ತೀರುವ
ಮುನ್ನ ಮುದಿತನ ಸುಳಿಯುತಿರಲಿ
ಲ್ಲೆನ್ನಲಡಗಿದ ವಿಷವೆ ಶಕ್ತಿಯ ಹಿಂಡುತಿಹುದೆಂದ ||೬೬||

ಆ ನರಂ ಗುರುಜನರೆ ನೆರೆ ವಿ
ಜ್ಞಾನಿಯೊರ್ವನ ಶಿಷ್ಯ ಪೀಠದಿ
ಮಾನಿಸದೆ ತಾವಿರ್ಪಿರೇತಕೆನಲ್ಕೆ ಯತಿರಾಜ |
ಏನ ಹೇಳಲಿ ಹಿಂದನೇಕರ
ನಾನು ಶಿಷ್ಯರ ಮಾಡಿಕೊಂಡೆನು
ಜ್ಞಾನಿ ಶಿಷ್ಯನು ಸಿಕ್ಕನೀ ಜನ್ಮದಲಿ ಕೇಳೆಂದ ||೬೭||

ಇದಕೆ ಕಾರಣ ಕೊಡವಿದೆ ನಾ
ನುದಿತ ಯೌವನದಲ್ಲೆ ಸಾವನು
ಸದೆವ ಬಗೆಯಿಂ ಸದನವರ್ಜಿಸಿ ಯೋಗಮಾರ್ಗದಲಿ |
ಮುದದಿ ನಡೆದಿಹೆ ಜನನಿ ಜನಕರ
ಪದವ ಸೇವಿಸದಾದೆ ಹೆತ್ತವ
ರೆದೆಯ ನೋಯಿಪ ಪಾಪ ಶಿಷ್ಯರ ಕೊಡದು ನನಗೆಂದ ||೬೮||

ಎಂದೆನುವ ಸಮಯದಲಿ ಮುನಿಪಂ
ಗಂದು ಕಂಬನಿ ಸುರಿದು ಹೋದುದು
ನಿಂದು ಹಲಚಣ ಮೌನದಲಿ ಯತಿಪಾಲನಾಬಳಿಕ |
ಮಂದಹಾಸವ ಬೀರಿ ಹಲನೂ
ರ್ಮಂದಿಯಾರ್‍ಯಸಮಾಜದಲಿ ಪಣ
ದಿಂದ ನನ್ನುದ್ದೇಶ್ಯ ನಡೆಪರು ಹುಟ್ಟಿ ಬಹರೆಂದ ||೬೯||

ಇಂತು ಮಾತಾಪಿತರ ಸೇವೆಗ
ಳಂ ತವಿಸದಾ ಶೋಕಮೇಘವ
ಹಿಂತೆಗೆಸಿ ತದ್ಭಕ್ತವರ್‍ಯನ ಭಾವನಾಮಯದ |
ಅಂತರಂಗವನೆಳನಗೆಯ ಬೆಳ
ಕಿಂ ತೊಳಗಿ ಚೇತನವ ಸುರಿದನು
ಸಂತಜಲಧಿ ಸುಧಾಕರಂ ತವೆ ಹರಸೆ ಪರಮಾತ್ಮ ||೭೦||

|| ಇಂತು ಹದಿನೆಂಟನೆಯ ಸಂಧಿ ||



# ಹತ್ತೊಂಬತ್ತನೆಯ ಸಂಧಿ

ಸೂಚನೆ—ತರಿದು ಭೀತಿಯ ಮುನ್ನಿರಾಮನ
ಹರಸಿ ಮೂರ್ತಿಯ ಹರಣ ವಿವರಿಸು
ತೋರಿಪು ರಮೆಯನು ಪದವಿಲೋಭದ ತೆಗಳಿ ರಂಜಿಸಿದ ||

ಬಳಿಕ ಕೇಳಿರಿ ಮುನಿಪ ಪಯಣಂ
ಬೆಳೆಸಿ ಬಂದು ಬರೇಲಿ ನಗರಕೆ
ಬಳೆದ ಭಕ್ತಸಮೂಹ ಮಧ್ಯದಿ ವೇದತತ್ವಗಳ |
ತಿಳುಹಿ ಬಾಲವಿವಾಹ ಖಂಡಿಸಿ
ಕೆಳೆಯರಿಗೆ ತಾವಿತ್ತ ಕಾಲವ
ಕಳೆಯದಂತಿರಬೇಕು ಸಂತತವೆಂದು ಬೋಧಿಸಿದ ||೧||

ನೆರೆದ ಮಹತೀಸಭೆಯಲಾ ಯತಿ
ವರನು ಕುಂತಿಯಹಲ್ಯೆ ಮೊದಲಹ
ತರಳೆಯರ ಪೌರಾಣಿಕರು ತಮ್ಮುಕ್ತಕತೆಗಳಲಿ |
ಜರೆದುದಂ ಬಣ್ಣಿಸಲು ನೆರೆದಾಂ
ಗ್ಲರಹ ಜಿಲ್ಲಾಧೀಶ ಮೊದಲಹ
ಹಿರಿಯ ಶಾಸಕರೆಲ್ಲ ನಕ್ಕರು ಹೊಯ್ದು ಕರತಳವ ||೨||

ನೋಡಿದಂ ಯತಿಪಾಲ ಮೋಜನು
ತಾಡಿಸುತ ಕರದಿಂದ ಕಂಗಳ
ಊಡುತಿರೆ ನಸುಗೆಂಪು ಕ್ರೈಸ್ತರ ಚತುರ ಬುದ್ಧಿಯನು |
ನೋಡಿ ಕನ್ನೆಗೆ ಮಗನು ಜನಿಪುದ
ಮೂಢಜನ ನಂಬುವರು ದೇವನ
ನೀಡುವಾಳ್ವರು ನಿಂದೆಗೆನ್ನುತ ನುಡಿದ ಭರದಿಂದ ||೩||

ಜಿಲ್ಲೆಯಧಿಪತಿ ಮುನಿವರೇಣ್ಯನ
ಸೊಲ್ಲಿನಿಂ ಕಡುಮುಳಿದು ತತ್ಸಭೆ
ಯಲ್ಲಿ ಕೂಡದೆ ಮಿತ್ರರೊಂದಿಗೆ ತನ್ನಮನೆ ಸೇರಿ |
ಪೊಲ್ಲನಾ ಯತಿಭಕ್ತನೊರ್ವನ
ನಲ್ಲಿ ಕಱೆಯಿಸಿ ನಿಮ್ಮ ಗುರು ನುಡಿ
ವಲ್ಲಿ ನಯವಿರಲೆಂದು ಪೇಳಿಱೆನುತ್ತ ಕಳುಹಿಸಿದ ||೪||

ಮಱುದಿವಸ ತದ್ಭಕ್ತ ಮುನಿಭೂ
ವರನಡಿಗೆ ವಂದಿಸುತ ಭಗವನ್
ಕೇಳಿ ಜಿಲ್ಲಾಧೀಶ ಖಂಡನಮಾರ್ಗವಂಬಿಡಲು |
ಒಱೆದನೆನೆ ಯತಿಪಾಲನಧರದಿ
ಮಿಱುಗಿತೆಳನಗೆಯಾತ ವತ್ಸನೆ
ಧರಣಿಯಲಿ ಮಱುಳು ನಮ್ಮನಂಜಿಪ ವೀರನಾರೆಂದ ||೫||

ವೂರನೆಯಾದಿನ ಲಕ್ಷಜನವೂ
ಪೌರಭವನದಿ ಸೇರಿದುದು ಹಲ
ವಾರು ಶಾಸಕಜನರ ಮಧ್ಯದಿ ಜಿಲ್ಲೆಯಧಿನಾಥ |
ಏರಿ ತುಂಗಾಸನವ ಕುಳಿತನು
ಧೀರ ಮುನಿಜನವರಪದಾರ್ಪಣ
ಹಾರಯಿಸಿ ಜನಸುರಲು ಹೊರಗುದಿಸಿದುದು ಜಯನಾದ ||೬||

ಹಳದಿ ರೇಶ್ಮೆಯ ಪೇಟ ಸಿರದಲಿ
ತೊಳಗೆ ಕಾವಿಯ ನೀಳಕವಚವ
ತಳೆದು ಪೀತಾಂಬರವನಳವಡಿಸೊಂದು ದಂಡವನು |
ಕೊಳುತ ಕಂಗಳ ಬೆಳಕು ಥಳಥಳ
ಹೊಳೆಯೆ ತುಟಿಗಳಲೆಳೆಯನಗೆ ಕಳ
ಕಳಿಸೆ ರಾಜಮರಾಳಗತಿಯಿಂ ಯತಿಪನೈತಂದ ||೭||

ಇದ್ದಕಿದ್ದಂತಖಿಳ ಜನತತಿ
ಯೆದ್ದು ಜಯಜಯಕಾರವೆಸಗಿತು
ಸದ್ದಡಗಿಸೆ ನೀಳಬಾಹುವನಾಡಿಸುತ ಮುನಿಪ |
ಇದ್ದವರ ಸಿರಬಾಗಿ ವಂದಿಸಿ
ಮುದ್ದುನಗೆಗಳ ಚೆಲ್ಲುತಡರಿದ
ಗದ್ದುಗೆಯ ಪೂರ್ವಾದ್ರಿಗಡರುವ ರವಿಯ ಬೆಡಗಿಂದ ||೮||

ಬಳಿಕ ಪೀಠದಿನೆದ್ದು ದೇಹದಿ
ಪುಳಕಮಿಗೆ ಸಂಸ್ತುತಿಸಿ ಸವಿತನ
ಹೊಳೆವ ಕಂಗಳ ಬೆಳಕ ಭಕ್ತಾವಳಿಯ ಮೇಲಿರಚಿ |
ಜಳಧರದ ಬೆಡಗಿಂದ ನುಡಿಯುತ
ತಿಳುಹಿಸಾತ್ಮನ ಸತ್ಯರೂಪವ
ಕುಳಿತ ಜಿಲ್ಲಾಧೀಶ್ವರನ ಕಡೆ ನೋಡುತಿಂತೆಂದ ||೯||

ಜನರು ಸತ್ಯವನಾಡಬೇಡಿರಿ
ಕನಲುವಂ ಜಿಲ್ಲಾಧಿಪತಿ ಕಡು
ಮುನಿವ ಸೇನಾಧೀಶ ದಂಡಿಪ ಪ್ರಾಂತ್ಯದಧಿನಾಥ |
ಎನುವರಲೆ ಬಿಡಿಬಿಡಿರಿ ಕನಲಲಿ
ಜನಪದೇಶ್ವರ ಚಕ್ರವರ್ತಿಯೆ
ನನಗೆ ವಿರಜಾನಂದ ಭಯವಂ ಕಲಿಸಲಿಲ್ಲೆಂದ ||೧೦||

ಸತ್ಯನಾತ್ಮನು ಯಾರುಮುವನನು
ಹತ್ಯೆಮಾಡರು ನಿರ್ಜರಾಮರ
ನಿತ್ಯನವ ದೇಹವಿದಶಾಶ್ವತವಿದನು ಬಯಪಾತ |
ಹತ್ಯೆಮಾಡಲಿ ಕಡಿಯಲಾದರ
ನಿತ್ಯದೇಹವನುಳಿಸೆ ಬಿಡೆವೈ
ಸತ್ಯವ ಸನಾತನದ ಧರ್ಮವನೆಂದನಾ ಯತಿಪ ||೧೧||

ಮತ್ತೆ ಮುನಿವರ ಹೊಳೆವ ಕಂಗಳ
ನೆತ್ತಿ ಸಭೆಯಂ ನೋಡಿ ಕರದಿಂ
ದೊತ್ತಿಮೇಜನು ತಟ್ಟಿ ನನ್ನೀ ಅಂತರಾತ್ಮನನು |
ಕೊತ್ತಿಕೊಲ್ಲುವ ವೀರನರ ಬರ
ಲಿತ್ತಲದು ಸಾಗದಿರೆ ಸತ್ಯದ
ಲಿತ್ತಣದೊ ಸಂದೇಹವೆಂದನು ಮಂದಿಯದುಪುತಿರೆ ||೧೨||

ತೀರಿದುದು ಸಭೆ ಜಿಲ್ಲೆಯಧಿಪತಿ
ಯಾರೊ ದೈವೀನರನೆನುತ ಪಾ
ದಾರವಿಂದಕೆ ಮಣಿದು ನಡೆದನು ಬಾಗಿ ಮಸ್ತಕವ |
ವೀರಗರ್ಜನ ಜನಗಳೆದೆಯಲಿ
ಬಾರಿಬಾರಿಗೆ ಮೊಳಗುತಿರ್ದುದು
ಕಾರುಣಿಕ ಋಷಿರಾಜ ನಡೆದನು ವಂದಿಸೆಲ್ಲರನು ||೧೩||

ವೀರಯತಿ ತತ್ಪುರದಲಿರಲಧಿ
ಕಾರಿ ನಾನಕಚಂದ್ರನುರೆ ಗಂ
ಭೀರ ವಾಸಿಸುತಿರ್ದ ಮುನ್ನೀರಾಮನೆಂಬವನು |
ಘೋರ ನಾಸ್ತಿಕನವನ ಪುತ್ರನು
ದಾರ ಜನಕಂ ಮಗನ ಮೇಲ್ಮೆಯ
ನಾರು ಸಾಧಿಪರೆಂದು ಚಿಂತಿಸುತಿರ್ದನನವರತ ||೧೪||

ಒಂದುದಿನ ಮುನಿವರನ ಸಭೆಯಿಂ
ಹಿಂದೆ ಬಂದಾ ತಂದೆ ವತ್ಸನೆ
ಬಂದು ನೆಲಸಿಹರೊರ್ವ ದಂಡೀಸ್ವಾಮಿಗಳು ಪುರಕೆ।
ಒಂದುಸಲ ನೀನವರ ಭಾಷಣ
ವಂದದಿಂದಾಲಿಸಲು ನಿನ್ನಯ
ಸಂದೆಗಂಗಳು ತೀರಬಹುದೆಂದೋದ ನಂದನಗೆ ॥೧೫॥

ತಂದೆಯೆಂದುದ ಕೇಳಿ ಸಮ್ಮತಿ
ಯಿಂದ ಪೋದಪೆನೆಂದೊಡಂ ಮಗ
ನಂದು ಮನದಲಿ ಬರಿಯ ಸಂಸ್ಕೃತ ಬಲ್ಲಿಪಂಡಿತರು।
ಸಂದೆಗಂಗಳನೇನು ಹರಿಸುವ
ರೆಂದೆನುತ ಮುನಿವರನ ಬೋಧನ
ಕೆಂದು ಸೇರಿದಗಾಧಸಭೆಯಲಿ ಬಂದು ಕುಳ್ಳಿದನು ॥೧೬॥

ವಿನಯದಿಂ ಹಲರಾಂಗ್ಲಪಾಠರು
ಜನರು ಕೆಲಬಲಗಳಲಿ ಕುಳ್ಳಿರೆ
ವಿನತರಾಗಧಿಕಾರಿಗಳು ಪಲಮಂದಿ ಬಾಗುತಿರೆ।
ಮಿನುಗುತಿಹ ದೈವಿಕದ ತೇಜದ
ತನುವಿನಾ ಯತಿರಾಜ ಮೆರೆದಿರೆ
ಮನದಿ ನಾಸ್ತಿಕನಹಹ! ಯಾರಿವನೆಂದು ಬೆರಗಾದ ॥೧೭॥

ಮೂಡಿದುದು ನಾಸ್ತಿಕನ ಹೃದಯದಿ
ಕೂಡ ಶ್ರದ್ಧಾಭಾವ ಯತಿವರ
ನಾಡೆ ಓಂಕಾರದ ಮಹಾರ್ಥವ ಬಣ್ಣಿಸುತ್ತಿರಲು |
ತೀಡಿದಚ್ಚರಿಯಿಂದಲಾತನು
ನೋಡುತಿರ್ದನು ಜವದಿ ದೃಗ್ಜಳ
ಕೋಡಿ ಹರಿದುದು ನೋಟ ನೆಟ್ಟಿತು ಯತಿಮುಖಾಂಬುಜದಿ ||

ನನ್ನ ಸಮನಹ ನಾಸ್ತಿಕನೊಳಂ
ತನ್ನ ತೇಜವ ತುಂಬಿ ತ್ವಷ್ಟನ
ಲುನ್ನತ ಶ್ರದ್ಧೆಯನು ದಿವ್ಯಾನಂದ ಸೌಖ್ಯವನು |
ಚೆನ್ನಮೆನೆ ಕೊಡಬಲ್ಲ ಮುನಿಯಿವ
ಗಿನ್ನು ನಾನೇನೆನಲಿ ಕೌತುಕ
ವೆನ್ನುತಾಲಯದೆಡೆಗೆ ನಡೆದನು ನಾಸ್ತಿಕನು ಕಡೆಗೆ ||೧೯||

ಒಂದುದಿನಮಾ ಮುನ್ಶಿರಾಮನಿ
ಗಂದದಿಂ ಮುನಿವರನ ಜೀವನ
ದೊಂದು ಬೆಡಗಂ ನಿಟ್ಟಿಸುವ ಮನಮಾಗೆ ಭರದಿಂದ |
ಒಂದು ಬಂಡಿಯನೇರುತ ದಯಾ
ನಂದನಿಳಿದಿಹ ವಾಟಿಕೆಯ ಬಳಿ
ಸಂದು ಹಾರ್ದನು ಬೆಳಗಿನೆರಡೂವರೆಯ ಹೊತ್ತಿನಲಿ ||೨೦||

ತೆರೆದ ವಿಸ್ತೃತ ವಕ್ಷ ಚಲಿತ
ಸ್ಫುರಿತ ಬಾಹುಗಳೆರಡು ತುಂಬಿದ
ಪರಿಗಠಿತದಾ ತೊಡೆಗಳುಬ್ಬಿದ ಮೀನಖಂಡಗಳು |
ನೆರೆ ವಿಶಾಲದ ಫಾಲ ತೇಜವ
ಸುರಿವ ಕಂಗಳು ನಗೆಕುಣಿವ ತುಟಿ
ಮೆರೆಯೆ ಕೌಪೀನವನು ಧರಿಸಿದ ಮುನಿಪ ಹೊರವಂದ ||೨೧||

ಕಂಡುರಿದು ಪಾಖಂಡ ತಂಡವ
ಖಂಡಿಸುವನೆಂಬಂತೆ ದಂಡೀ
ಮುಂಡಳೇಶಾಖಂಡ ಶಿಷ್ಯನು ಬೀಸಿ ದಂಡವನು |
ಚಂಡವೇಗದಿ ನಡೆಯೆ ತರುಣಂ
ಮುಂಡಳಿಪ ಮೇಲುಸಿರೊಳಾಯಸ
ಗೊಂಡು ಮುನಿಯೊಡ ನಡೆಯಲಾರದೆ ಹಿಂದಕೈತಂದ ||೨೨||

ಮತ್ತೆ ಮರುದಿನ ಮುನ್ನಿರಾಮುಸು
ಹೊತ್ತು ಮೂಡುವ ಮುನ್ನಮುನಿಯಿ
ರ್ದತ್ತ ನಡೆದಾತನನು ಹಿಂಬಾಲಿಸುತಲಾ ಯತಿಪ |
ಪೊತ್ತ ಧ್ಯಾನದಿ ಕುಳಿತುದಂ ನೋ
ಡುತ್ತ ದಿನಮಣಿಯಿಂದು ನಿಜಸಿರ
ವೆತ್ತಲಿಹನಿಲ್ಲಿಂದಲೆಂಬಂತಿರಲು ಬೆರಗಾದ ||೨೩||

ಭಕ್ತಿ ಸಾಗರದಲ್ಲಿ ಋಷಿವರ
ಮುಕ್ತಿಸುಖವಂ ಪಡೆದು ಭಾವೋ
ದ್ರಿಕ್ತನಾಗೇಳುತಿರೆ ಮುನ್ಶ್ರೀರಾಮ ಪದಕೆರಗಿ |
ಯುಕ್ತಿಯಿಂ ನಾಸ್ತಿಕ್ಯ ಸಾಧಿಸ
ಲುಕ್ತಯುಕ್ತಿಯನೆಲ್ಲ ರಾಗಪಿ
ರಕ್ತರಾಜಂ ಖಂಡಿಸೀಗೇನೆಂಬೆ ಪೇಳೆಂದ ||೨೪||

ಅದಕೆ ಮುನ್ಶ್ರೀರಾಮ ಭಗವನ್ !
ಮೊದಲು ನನ್ನಯ ಯುಕ್ತಿಯೆಲ್ಲವ
ಸದೆದು ಬಾಯ್ಮುಚ್ಚಿಸಿದಿರಾದೊಡಮೆನಗೆ ದೇವನಲಿ |
ಇದುವರಂ ಹೃದಯದಲಿ ನಂಬಿಕೆ
ಯುದಿಸದೆನ್ನುತ ಮೂರುಸಲ ಗ
ದ್ಗದದಿ ನುಡಿಯುತ ಸ್ಪರ್ಶಗೈದನು ಮುನಿಪದಾಂಬುಜವ ||೨೫||

ಒಪ್ಪೆ ನಗೆ ತನಗಾಗಿಯೇ ಬಲಿ
ಯಪ್ಪ ಶ್ರದ್ಧಾನಂದನಾಗ
ಲ್ಕಿಪ್ಪನಿವನೆಂಬುದನು ತಿಳಿದಂತಾ ಯತೀಶ್ವರನು |
ತಪ್ಪ ತಿಳುಹಿದೆ ದೇವದಯದಿಂ
ದಪ್ಪುದೈ ವಿಶ್ವಾಸವೆನ್ನುತ
ಲಪ್ಪಿಕೊಂಡನು ಕಳುಹಿದಂ ಬೆಂದಡಪಿ ನಾಸ್ತಿಕನ ||೨೬||

ಬಳಿಕ ಮುನ್ನಡೆದಾ ಯತೀಶ್ವರ
ನಿಳಿದು ಫರುಖಾಬಾದ ಪುರದಲಿ
ತಿಳಿಯೆ ಬಾಯಾರ್ದರಿಗೆ ಹಸಿದರಿಗಾರ್ತರಾದರಿಗೆ |
ಇಳೆಯಲೀವುದು ದಾನವಂ ಕೆಲ
ದೊಳಿಹ ದೀನಗೆ ಮೊದಲು ಕೊಡುವುದು
ಬಳಿಕ ದೂರದ ಚಿಂತೆಯೆಂದನು ಸೇರ್ದ ಸಾಸಿರಕೆ ||೨೭||

ಆ ದಿನಂಗಳಲತ್ತ ಫರುಖಾ
ಬಾದಿನಲಿ ಶಾಸಕರು ಪೇಟೆಯ
ಬೀದಿಯನ್ನಳೆಯುತಿರೆ ಮಧ್ಯದಲಿರ್ದ ದೇಗುಲವ |
ಕಾಪು ಕೆಡಿಸಲು ಬಗೆದು ಯತಿಬಳಿ
ಗೈದಿ ಭಕ್ತನದೊರ್ವ ತಾಪ್ಜಿ
ಲ್ಲಾಧಿಪಗೆ ಪೇಳಿದರೆ ಬೀಳಿಪರೆಂದ ನಯದಿಂದ ||೨೮||

ಇಂತು ಭಕ್ತನು ಪೇಳೆ ಮುನಿಪನ
ಸಂತಸಂ ಕುಗ್ಗಿದುದು ಛೀ ಛೀ!
ಮಂತಣವನಿದ ಕೊಡಲು ಬಂದೆಯ ನಿಲ್ಲಿಸಿದ ಸಾಕು |
ಇಂತು ಕಟುತರ ದುರ್ನಯಗಳಿಂ
ಪಿಂತಣರ ಮತಗಳನು ಮುರಿವುದು
ಸಂತರಿಗೆ ತರವಲ್ಲವೆಂದನುದಾರ ಯತಿರಾಜ ||೨೯||

ಹಿಂದೆ ಮೊಗಲರದೊಂದೆರಡೆ ಹಲ
ವೊಂದು ಸಾವಿರ ಮಂದಿರಂಗಳ
ನಂದಗೆಡಿಸಿದರಾದೊಡೇಂ ವಿಗ್ರಹಗಳರ್ಚನವ |
ಹಿಂದಿ ಬಿಟ್ಟರೆ ಕಲ್ಲುಮಣ್ಣಿನ
ಮಂದಿರಂಗಳ ಮುರಿವುದಲ್ಲೈ
ಮಂದಿ ಮನದಿಂ ಮೂರ್ತಿಗಳ ತೊಡೆಯುವುದೆ ಮತಮೆಂದ ||

ವರ ಮುನಿಪನಾಬಳಿಕ ದಾನಾ
ಪುರಕೆ ಬಿಜಯಂಗೈದು ಧರ್ಮದ
ತಿರುಳರುಹಿ ಮತ್ತೊಂದುದಿನ ನಾಪ್ಸತ್ಯಭಾಷಣದಿ |
ನರರಿಗಂಜಿವು ವೇದಧರ್ಮವ
ನರುಹುತಾವ್ಪಂಜಾಬಿನಲಿ ಸಂ
ಚರಿಪ ಕಾಲದಿ ನಡೆದ ಘಟನೆಯ ಕೇಳಿ ನೀವೆಂದ ||೩೧||

ಒಂದು ನಗರದಿ ಹಲವು ಸಾಸಿರ
ಮಂದಿ ನೆರೆದರು ಕ್ರೈಸ್ತಧರ್ಮದ
ಬಂಧು ರಾಬರ್ಟ್ಸನ್ನ ಭಾರತದಂಡನಾಯಕನು |
ಬಂದು ಕುಳಿತನು ಜೊತೆಗೆ ಹಲನೂ
ರ್ಮಂದಿ ಶಾಸಕರೇಸು ಪಂಥಿ
ವೃಂದ ನೆರೆಯಿತು ಚಿತ್ತಮಳುಕಿತು ತತ್ಸಭಾಸದರ ||೩೨||

ಮಂದಿ ನಾನೀಸಾಯಿ ಪಂಥವ
ನೆಂದಿನೊಲೆ ಖಂಡಿಪೆನು ಸಭೆಗೈ
ತಂದ ರಾಬರ್ಟ್ಸನ್ನ ದಳಪತಿ ಕನಲಿ ದಂಡಿಪನು |
ಎಂದು ಗಡಗಡ ಕಂಪಿಸುತ್ತಿರ
ಲಂದು ನನ್ನಯ ಶಕ್ತಿಯೆಲ್ಲವ
ನೊಂದುಗೂಡಿಸಿ ಕ್ರೈಸ್ತಪಂಥವ ಟೀಕಿಸಿದೆನೆಂದ ||೩೩||

ಖಾತಿಗೊಳ್ಳದೆ ದಳಪತಿಯು ಸುವಿ
ನೀತ ಭಾವದಿ ನನ್ನೆದುರೆ ತಾ
ವೀತೆರದಿ ನುಡಿವಲ್ಲಿ ಮತ್ತಾವನಿಗೆ ಬೆದರುವಿರೋ |
ಹೇ ತಪೋಧನ ಯತಿಗಳಾರ್ಗಂ
ಭೀತಿಗೊಳರೆನ್ನುತ್ತ ಮರ್ಯಾ
ದಾತುರಂ ಕೈಕುಲುಕಿ ನಡೆದನೆನುತ್ತ ಪೇಳಿದನು |೩೪||

ಬಲ್ಲ ಜೋನ್ಸನು ಕೇಳೆ ಮುನಿವರ
ನೆಲ್ಲ ಮತದಲಿ ಸತ್ಯಮಿರ್ಪಿನೀ
ಸೊಲ್ಲು ದಿಟ ಮತವೆಲ್ಲ ಸತ್ಯಮೆನುವುದು ಮೂಢತನ |
ಇಲ್ಲಿ ಕೃಷ್ಣ ಕ್ರಿಸ್ತ ಮಹಮದ
ರಲ್ಲಿ ನಂಬಿಕೆಯಿಡದೆ ಮೋಕ್ಷಂ
ಸಲ್ಲದೆಂಬೀ ವಾದ ಟೊಳ್ಳೆಂದೊರೆದನೊಂದುದಿನ ||೩೫||

ಒಂದುದಿನ ನಡುರಾತ್ರಿ ತಾರಾ
ವೃಂದ ಮಿಣಮಿಣ ಮಿಣುಕಿ ಕತ್ತಲ
ನೊಂದಿನಿಸು ಕಂದಿಸುತಲಿರ್ದುದು ಗಾಢ ನೀರವತೆ |
ಒಂದೆ ಮೆರೆದುದು ಯತಿಪನೇತಕೊ
ಬಂದು ಕುಟಿಯಿಂ ಹೊರಗೆ ಸುಯ್ಯುತ
ನೊಂದು ತಿರುಗುತ್ತಿರಲು ಸೇವಕ ಕತನ ಬೆಸಗೊಂಡ ||೩೬||

ಕಾಲಿಗೆರಗವ ಕತವ ಕೇಳೆ ಕ
ಪೋಲ ಕಂಬನಿಯಿಂದ ನೆನೆದುದು
ಹಾ! ಲಸನ್ನಾರಿಯರನೌಷಧಶಾಲೆ ಮಠಗಳನು |
ಪಾಲುಗೊಳಿಸೀಸಾಯಿ ಜನಗಳು
ಕೋಲಭೀಲಾದಿಗಳ ತಮ್ಮಯ
ಜಾಲಕೆಳೆದಿಪರಾಪ್ಯರಾವರೊ ನಿದ್ದೆ ಬಿಡರೆಂದ ||೩೭||

ಅರರೆ ಧರ್ಮದ ನೌಕೆ ಪಾಪದ
ಹೊರೆಗೆ ಮುಳುಗುತಲಿರ್ದೊಡಂ ಸಹ
ತೊರೆಯರಾಪ್ಯರು ಹೊತ್ತ ತಮ್ಮಯ ಸ್ವಾರ್ಥಭಾರಗಳ |
ಇರುವೆನೆಂತಾಂ ಮೌನದಲಿ ಭೂ
ವರರ ಹೊಡೆದೆಚ್ಚರಿಪೆ ಕೊನೆಗಿದೆ
ಸಂಯೆನುತ ಯತಿರಾಜ ಕಂಬನಿ ಮಿಡಿದನಂಬರದಿ ||೩೮||

ಮುಂದೆ ಲಕ್ನೋಪುರಕೆ ಯತಿಪರ
ಬಂದು ಬೋಧಿಸುತೊಂದು ಸಂಜೆಗೆ
ಸಂದಿ ಹಲವರ ಕೂಡದೆಲ್ಲಿಗೊ ಪೋಗುತಿರೆ ಪಥದಿ ।
ಚಿಂದಿಯುಟ್ಟಿಹ ಮುದುಕಿಯೊರ್ವಳು
ಕಂಡ ದಿನ ಮೂರಾಯ್ತು ಭೋಜನ
ತಿಂದು ಕರುಣಿಸು ತುತ್ತನೊಂದನೆನುತ್ತ ಬೇಡಿದಳು ॥೩೯॥

ಕೊರಗುವಳ ಕಂಡೊಡನೆ ಕಂಬನಿ
ಹರಿದುದಾ ಮುನಿಪಂಗೆ ಬಿಕ್ಕುತ
ಲರರೆ ನಾನೇ ತಿರುಕನಾಗಿರಲೆನ್ನ ಬಳಿಸಂದು ।
ತಿರಿವಳೆಮ್ಮೀತಾಯಿ ಯಿನಿತನು
ಮರಿಯೆ ಬಿಡದೀ ಹಸಿವೆಗೇನೆಂ
ದೊರೆವೆನಕ್ಕಟ ಎನುತ ಕೊಡಿಸಿದ ಭೋಜನಂಗಳನು ॥೪೦॥

ಮುಂದೆ ಫರುಖಾಬಾದ ನಗರಕೆ
ಬಂದು ಮುನಿಭೂವರನಿಳಿಯೆ ಹಲ
ಸಂದಿ ಭಕ್ತರು ದುಷ್ಟನೊರ್ವಗೆ ಸಂದ ಶಿಕ್ಷೆಯನು ।
ಅಂದು ಬಣ್ಣಿಸೆ ಹಿಂಸೆಗಳ ಕತ
ದಿಂದ ವರ್ಜಿಸ ಬೇಡಿ ಪ್ರೇಮುವ
ನೆಂದುಮಾ ಧರ್ಮದಲಿ ಮುಯ್ಯಿಗೆ ಸ್ಥಾನವಿಲ್ಲೆಂದ ॥೪೧॥

ಧೀರಮುನಿ ಹಲದಿನದ ಬಳಿಕಾ
ಮೀರತಕೆ ನಡೆತಂದು ಭಾರತ
ನಾರಿಯರ ಹಿತಕುರಿತು ಚಿಂತಿಸುತಿರೆ ರಮಾಬಾಯಿ |
ಕಾರುಣಿಕ ಯತಿವರನ ದರ್ಶನ
ಕೋರಿ ಬರೆದಳು ಮುನಿಪ ನಾರ್ಯು
ದ್ಧಾರ ಚಿಂತಿಸೆ ಬರುವೊಡಪ್ಪಣೆಯಿತ್ತ ನಾವಮಗೆ ||೪೨||

ದೇವ ಸದೃಶ ಯತಿವರ ರಮಾ
ದೇವಿಯಂ ಕುಳ್ಳಿರಿಸಿ ದೂರದಿ
ತಾವಿನುತ ಶಾಸ್ತ್ರಗಳನೋದಿಸುತೊಂದು ತಿಂಗಳಲಿ |
ಈ ವರೆಗಮೆಮ್ಮೆದುರಿನಲಿ ಕುಳಿ
ತಾವಳಿಗುಮುಪದೇಶದಾಲಿಸೆ
ನಾವು ಕಲ್ಪಿಸಲಿಲ್ಲವವಕಾಶಗಳ ಕೇಳೆಂದ ||೪೩||

ತಂಗಿ ನಿನ್ನೊಬ್ಬಳಿಗೆ ಮಾತ್ರವೆ
ಭಂಗಿಸಿದೆನಾಂ ನಾರಿವದನವ
ಕಂಗಳಿಂದೀಕ್ಷಿಸದ ನೇಮವ ನೀನು ವಿದುಷಿಯಹೆ |
ಹಿಂಗಳೆದು ನಿಜಸುಖವ ಭಾರತ
ದಂಗನೆಯರುದ್ಧಾರಕೋಸುಗ
ರಂಗಕಿಳಿ ಕೃತಕೃತ್ಯಳಾಗುವೆ ಪುಣ್ಯಮಹುದೆಂದ ||೪೪||

ಮುದದಿ ಕೇಳೌ ಬ್ರಹ್ಮಚರ್ಯವ
ಹದಗೊಳಿಸಿ ನೀಂ ದೀನಭಾರತ
ಸುದತಿಯರ ಕವಿದಿರ್ಪ ಘೋರಾಜ್ಞಾನ ತೊಡೆಯೆಂದು ।
ಸದಯ ಮುನಿಪತಿಯೆನಲು ಗಾರ್ಹ
ಸ್ಥ್ಯದಲಿ ಸಹ ಸತ್ಕಾರ್ಯಗಳ ಗೈ
ವುದಕೆ ಸಾಧ್ಯಮೆನುತ್ತ ನುಡಿದಳು ಶ್ರೀ ರಮಾದೇವಿ ।'೪೫॥

ಸುದತಿಯಿಂತೆನೆ ಯತಿಪ ಗಾರ್ಹ
ಸ್ಥ್ಯದಲಿ ಪತಿಪತ್ನಿಯರ ಪುತ್ರರೆ
ಮೊದಲಹರ ಹಲತೆರದ ಬಂಧನಸಂಕಲೆಗಳಿಡಿದು ।
ಅದುಮುತಿರೆ ತನ್ನವರ ಮಧ್ಯವೆ
ಹೃದಯದಕ್ಕರೆ ಸುಲುಗುತಿರೆ ಹೇ
ವಿದುಷಿ ಪರರುಪಕಾರಕೆಲ್ಲವಕಾಶ ಹೇಳೆಂದ ॥೪೬॥

ಗಂಡನೆಂಬವನಿಲ್ಲ ಜಗದಲಿ
ಹೆಂಡತಿಯ ಹೆಸರಿಲ್ಲ ಮಕ್ಕಳ
ತಂಡ ಕನಸಿನೊಳಿಲ್ಲ ಪೀಡಿಪ ನಂಟರೆನಗಿಲ್ಲ ।
ಗಂಡು ನಾನೇ ನನಗೆ ದುಃಖಿತ
ಮಂಡಳವೆ ಸಂಸಾರವೆಂಬೀ
ಮೊಂಡು ಸಾಹಸ ಬ್ರಹ್ಮಚಾರಿಗೆ ಮಾತ್ರವಹುದೆಂದ ॥೪೭॥

ಆದ ಕತದಿಂ ತಂಗಿ ನೀ ಮನ
ಗೈದು ಭಾರತ ಸುತೆಯರೀ ತವ
ಸೋದರಿಯರುದ್ಧಾರಕೋಸುಗ ಮದುವೆಗಾಶಿಸದೆ |
ತೇದು ಬದುಕನೆ ಕಾರ್ಯಸಾಧಿಸು
ಬೋಧಿಸಂಗನೆಯರಿಗೆ ಆಶೀ
ರ್ವಾದ ನಿನಗಿದೂ ಬ್ರಹ್ಮಚಾರಿಣಿಯಾಗು ಹೋಗೆಂದ ||೪೮||

ಎಂದೂಡಾರಮೆಯಾಗಲಿದು ನ
ನ್ನಿಂದ ಸಾಗದೆನುತ್ತ ನಡೆದಳು
ಮುಂದೆ ಮುಸಫರಪುರಕೆ ನಡೆದಾ ಯತಿಪ ಬೋಧಿಸಿರೆ |
ಒಂದು ಸಭೆಯಲಿ ವಿಪ್ರನೊರ್ವನು
ಬಂದ ಕೋಪದ ಭರದಿ ಹಿಡಿದ್ಯೆ
ತಂದ ನಾಗನನೆಸದ ತಟ್ಟನೆ ಋುಷಿಯ ಪದದೆಡೆಗೆ ||೪೯||

ಕಾಳನಾಗನು ಹೆಡೆಯನೆತ್ತುತ
ಸೀಳುನಾಲ್ಗೆಯ ಚಾಂಚಿ ಬಾಲವ
ಜಾಳಿಸುತ ಬುಸ್ಸೆಂದು ಯತಿಪದದೆಡೆಗೆ ಸುಗ್ಗುತಿರೆ |
ಪಾಳಗೆಟ್ಟಿದು ಮುಂದಿ ಮುನಿಪನ
ಬಾಳು ತೀರಿತೆನುತ್ತ ಚೆದುರಿತು
ತೋಳನಾಡುತ ಕುಳ್ಳಿರೆಂದನು ಯತಿಪ ನಸುನಗುತ ||೫೦||

ಒಂದಿಸು ಭಯಗೊಳದೆ ಯತಿಪಂ
ಮುಂದಹಾಸದಿನೆಡದ ಹಿಮ್ಮಡಿ
ಯಿಂದ ನಾಗನ ಹೆಡೆಯ ಹೊಸಕುತಲಾರ ದೇವತೆಗೆ |
ಇಂದು ಗತಿ ಹೀಗಾದುದಿನ್ನಾ
ಮುಂದಿಗಳ ದುಃಸ್ಥಿತಿಗೆ ಮಿತಿಯೇ
ಸೆಂದೆನುತಲಾ ಸತ್ತ ಸರ್ಪನ ಬಿಸುಟ ದೂರದಲಿ ||೫೧||

ಸಕಳ ವೈಭವದಾರ್ಯ ಸಾಮಾ
ಜಿಕರ ವರ್ಷೋತ್ಸವದಿ ಮುನಿವರ
ಸುಕರ ಧರ್ಮವ ತಿಳಿಪೆ ಬಳಿಕಾ ಮೀರತಕೆ ತೆರಳಿ |
ಸಕಳ ಮಾನವರಲ್ಲಿ ಪ್ರೇಮೋ
ತ್ಸುಕರೆನಿಸಿ ಭೇದಗಳು ಸಾಮಾ
ಜಿಕರಿಗೊಪ್ಪದೆನುತ್ತ ಸಾರಿದ ನೆರೆದ ಸಾಸಿರಕೆ ||೫೨||

ಜೀವನಂಗಳ ಶುದ್ಧವಾಗಿಡಿ
ರಾವಗಂ ನುಡಿವುದಕೆ ಮುನ್ನಮೆ
ನೀವೆ ನಡೆಯಲಿ ತತ್ವ ತೋರಿಸಿ ನಿಮ್ಮ ಪತನವನು |
ಆವನದೊಡಮುಣಿಸಿದರೆ ನೀ
ವಾವಗಮುವನ ಹಿತವ ಸಾಧಿಸಿ
ಸ್ವಾವಲಂಬನ ಪಾಠ ಕಲಿಯಿರಿ ಸಾಹಸದಲೆಂದ ||೫೩||

ಕಾತರಿಸದಿರಿ ಸಖರೆ ಸೃಷ್ಟಿವಿ
ಧಾತನಾ ನೇಮದಲಿ ನರನಾ
ವಾತನುಂ ಸ್ಥಿರನಲ್ಲ ಬೇಗನೆ ನನ್ನ ದೇಹವಿದು |
ಆತುರಿಯ ಹಿಡಿಬೂದಿಯಪ್ಪುದು
ನಾ ತೆರಳೆ ನೀವಾರ ನೆರವಿಗೆ
ಹಾತೊರೆವಿರ್ಕೈ ನಿಲ್ಲಿ ನಿಮ್ಮಯ ಕಾಲ ಮೇಲೆಂದ ||೫೪||

ಜಾತಿಗಳು ನರಹಿತವ ತಿಂದುವ
ಚೇತನಾರ್ಜನ ಬುದ್ಧಿ ಕೆಡಿಸಿತು
ಮಾತು ಮಾತೊಳ್ಸ್ವಾರ್ಥ ಬಲಯಿತು ಸತ್ತ ಮಾನವರ |
ಆತುಮಕೆ ಜಲವೀವ ಜನ ದುಃ
ಖಾತುರರ ಹಸಿವೆಯನು ಹಿಂಗಿಸ
ರೀ ತೆರದ ಮೌಢ್ಯವನು ಖಂಡಿಸೆ ನುಗ್ಗುತಿಹೆನೆಂದ ||೫೫||

ಏಕ ದೇವೋಪಾಸನೆಯ ಮೇ
ಣೇಕಜಾತಿತ್ವವನು ಸಾರುತ
ಲೋಕದಲ್ಲೈಕ್ಯವನು ರಚಿಸುವ ವೇದ ಧರ್ಮವನು |
ಭೀಕರ ವಿರೋಧದೊಳಗಂ ವಿಶ
ದೀಕರಿಸೆ ನುಗ್ಗುತಿಹೆ ಮುಂದೆನ
ಗೀ ಕರುಮಕಹ ಫಲವ ಬಲ್ಲೆನು ಭೀತಿಯಿಲ್ಲೆಂದ ||೫೬||

ಆದೊಡೇಂ ಮಕ್ಕಳಿರ ದೇಹದ
ಬಾಧೆಗಂಜುತ ಸತ್ಯ ಮುಚ್ಚಿಡ
ಲಾದಪುದೆ ನನ್ನಿಂದ ಸುಳ್ಳನು ನೋಡುನೋಡುತಲಿ |
ಈ ಧರೆಯಲತಿದೀರ್ಘಮಿಪ್ಪ ವಿ
ನೋದ ಬೇಕಿಲ್ಲೆನಗೆ ಸತ್ಯಕೆ
ಕಾದಿ ಮಡಿಯುವ ಭಾಗ್ಯನನಗಿರಲೆಂದನಾ ಯತಿಪ ||೫೭||

ಮತ್ತೆ ನಿಮ್ಮಲಿ ಪ್ರಾಣಗಳಸೇ
ತೆತ್ತು ವೈದಿಕ ಧರ್ಮ ತತ್ವವ
ನೆತ್ತಲುಂ ಪಸರಿಸುವ ವೀರರು ಹುಟ್ಟಿ ಬಂದಪರು |
ಚಿತ್ತಗೆಡದಿರಿ ಪುಷ್ಪ ಫಲಗಳ
ಹೊತ್ತು ವೇದೋದ್ಯಾನ ಮೆರೆವುದು
ಮಿತ್ತುವಾದರೆ ನನ್ನನದನೀಕ್ಷಿಸಲು ಬಿಡದೆಂದ ||೫೮||

ಬಲ್ಲ ಮುನಿವರ ಬಳಿಕ ನೊಂದವ
ರೆಲ್ಲರಂ ಸಂತೈಸಿ ಮೃದುನುಡಿ
ಸಲ್ಲಿಸಲ್ಲಿಂ ನಡೆದು ತಾಂ ಸಹರಾನಪುರಕ್ಕೈದಿ
ಅಲ್ಲಿಳಿಯೆ ನರನೊರ್ವ ಭಯದಿಂ
ದಿಲ್ಲಿ ಜೈನರು ತಮ್ಮ ಸೆರೆಮನೆ
ಯಲ್ಲಿಡಿಸೆ ಹವಣಿಸಿಹರೆಂದನು ನಡುಗುದನಿಯಿಂದ ||೫೯||

ಆ ದಯಾಕರನಾಲಿಸಿದ ವ್ಮೃದು
ಪಾದ ಪಚನದಿ ವತ್ಸ! ಧರ್ಮದ
ಹಾದಿಯಲಿ ಭಯವೆಲ್ಲಿ ಚಿನ್ನವನೆನಿತು ಕಾಸಿದರೆ |
ಆದಪುದು ಹೊಳಪನಿತೆ ಸತ್ಯಕೆ
ಮೇದಿನಿಯಲೆನಿತೆನಿತು ವೈರ ವಿ
ರೋಧಪಾದಪುದನಿತೆ ಪ್ರಜ್ವಳಿಸುವುದು ಕೇಳೆಂದ ||೬೦||

ಈ ದಯಾನಂದನನು ಬಂಧನ
ಗೈದು ತೋಪಿನ ಬಾಯ್ಗೆದುರು ನಿಲಿ
ಸಾದೊಡಂ ಪೇಳ್ಸತ್ಯಪಾವುದೆನುತ್ತ ಕೇಳಿದರೆ !
ಐದೆಯಾಗಳುಮಿಪನ ಬಾಯಿಂ
ಪೇದಮಂತ್ರವೆ ಮೊಳಗುವುದು ಕೇ
ಳ್ಳೈ ದಯಾನಂದಂಗೆ ಭಯಬಲುದೂರ ದಿಟಮೆಂದ ||೬೧||

ಮುಂದೆ ನಡೆದಾಗ್ರ್ರೆಯಲಿ ಯತಿವರ
ನಿಂದು ಬೋಧಿಸುವಲ್ಲಿ ವಿರಜಾ
ನಂದ ಶಿಷ್ಯನು ಕಾಳಿದಾಸನು ತತ್ಪುರದಲಿರಲು |
ಮುಂದಿಯವನೆಡೆ ನಡೆಯುತ ದಯಾ
ನಂದನಬ್ಬರ ಹೆಚ್ಚುತಿದೆ ನೀ
ವಿಂದವನ ಗೆಲಿರೆನಲು ತದ್ಬುಧನಾಗಳಿಂತೆಂದ ||೬೨||

ಈ ಮಹಾಪುರುಷಂಗೆ ನೆರೆ ಸೋ
ಲ್ದಾ ಮಹಾಮತಿ ಸಕಳವಿದ್ಯಾ
ಧಾಮ ದಂಡೀದೇವ ವಿರಜಾನಂದ ಗುರುಕೂಡ |
ಹೇ ಮಗನೆ ನೀ ಕೇಳ್ದ ಪ್ರಶ್ನೆಗೆ
ಕಾಮಿತೋತ್ತರ ನಾಳೆಯೋಚಿಸಿ
ನೇಮದಿಂದಾಪೇವೆವೆಂದನದೆನಿತೊ ಸಲಪೆಂದ ||೬೩||

ಯೋಗಿ ವಿರಜಾನಂದ ವಿದ್ಯಾ
ಸಾಗರನ ಸಪ ಕಲಕಿ ಕದಡಿದ
ನೀ ಗರಿಷ್ಠಜ್ಞಾನ ಮಾಪುತ ಯತಿ ದಯಾನಂಪ |
ಈಗ ನಾಂ ಪಾದಿಪೆನೆ ತಾವರೆ
ಹೂಗೆ ವಾರಣದೊಡನೆ ಕದನವೆ
ಹೋಗಿರೆಂದಾ ಕಾಳಿದಾಸನು ಕಳಿಪಿದಂ ಜನರ ||೬೪||

ವೀರ ಮುನಿವರ ಬಳಿಕ ನಡೆದಜ
ಮೀರ ಮೊದಲಹ ಹಲವುಕಡೆ ಚಿ
ತ್ತೋರ ಗಢಕೈತಂದು ಪರಗಂಭೀರ ತೀರದಲಿ |
ನೇರದಿಂ ಶಿವಗುಡಿಯಲಿಳಿಯುತ
ಪೌರರಿಗೆ ವೇದಗಳ ಬೋಧಿಸೆ
ಸೇರಿಮದು ಯತಿಯಶದ ಸಂಗತಿ ನೃಪನ ಕಿವಿದೆರೆಯ ||೬೫||

ಒಂದುದಿನ ಸಾಮಂತ ಮಂತ್ರೀ
ವೃಂದವಂ ಬರಮಾಡಿ ವೈಭವ
ವೊಂದನುಂ ತೋರಿಸದೆ ನಾಪಿಂದಾ ಮಹಾ ಮುನಿಯ |
ಸಂದ ಪದದರ್ಶನಕೆ ಪೋದಪೆ
ನೆಂದು ಸಾಧಾರಣನ ತೆರದಲಿ
ಬಂದ ನಡೆನಡೆಯುತ್ತ ಸಜ್ಜನಸಿಂಹಭೂಕಾಂತ ||೬೬||

ಬಂದು ಸಜ್ಜನಸಿಂಹ ನಮ್ರತೆ
ಯಿಂದ ಮಸ್ತಕವಿಟ್ಟು ಮುನಿಪದ
ಕಂದೆರಗಿ ನಸುದೂರವಿಟ್ಟಹ ಮಣೆಯನಾಶ್ರಯಿಸಿ |
ಹಿಂದೆ ಕುಳಿತನು ಸಕಳ ಮಂತ್ರೀ
ವೃಂದ ನಯದಿಂ ದೂರ ಕುಳಿತುದು
ಮಂದಹಾಸದಿ ರಾಜಧರ್ಮವ ಯತಿಪ ಬೋಧಿಸಿದ ||೬೭||

ಅಂದು ಭಾಷಣ ತೀರ್ದೊಡನೆ ಯತಿ
ಪಂ ದೊರೆಯನೊಂದುಸಲ ನಿಟ್ಟಿಸಿ
ಬಂದ ಶಾಹಪುರೇಶಗಾರೀ ದೂರ ಕುಳಿತವರು |
ಹಿಂದೆ ಕಂಡಂತಿಲ್ಲವೆಮಗರು
ಹೆಂದೆನಲು ತದ್ಭೂಪನಿಳಿದನಿ
ಯಿಂದ ಮೇವಾಡರಸ ಸಜ್ಜನಸಿಂಹರಿವರೆಂದ ||೬೮||

ಇಂತು ಶಾಹಪುರೇಶನೆನೆ ಯತಿ
ಪಂ ತಿರುಗಿ ತೇಜಸ್ವಿ ನೇತ್ರಗ
ಳಿಂ ತದುರ್ವೀಕಾಂತ ಸಜ್ಜನಸಿಂಹನಂ ನೋಡಿ |
ಎಂತು ಬಂದಿಹಿರಕಟ ಹುಲುನರ
ರಂತೆ ವೈಭವಮಿರದೆ ಬರಿ ಶ್ರೀ
ಮಂತರಿಗೆ ಶೋಭಾಜನಕವಲ್ಲೆಂದ ನಸುನಗುತ ||೬೯|

ಸಂತನಿಂತೆನಲಾಗಲಾ ಶ್ರೀ
ಮಂತ ಸಜ್ಜನಸಿಂಹ ನೃಪ ತ
ಪ್ಸ್ವಂತಹರ ಬಳಿ ನಾವು ಸಾಧಾರಣರೆ ಸರಿಯಲ್ತೆ |
ಸಂತವರ ತಮ್ಮಡಿಯ ನೆರಳ
ಲ್ಲಂತು ನೆಲದಲಿ ಕೂಡುವುದೆ ನ
ಮ್ಮಂತಹರ ಸೌಭಾಗ್ಯ ಸುಕೃತಫಲಮೆ ಸರಿಯೆಂದ ||೭೦||

ಮುನಿವರನ ಭಾಷಣದ ಕತದಿಂ
ಜನಪ ಸಜ್ಜನಸಿಂಹ ತನ್ನಯ
ಮನದಿ ವೇದೋತ್ಕರ್ಷವಾಶಿಸಿ ಪದಕೆ ವಂದಿಸುತ |
ವಿನಯದಿಂ ತೆರಳಿದನು ತನ್ನರ
ಮನೆಗೆ ಬಿಜಯಂಗೈಸಿ ಹಲಸಲ
ವನುವಿನಿಂದುಪದೇಶಕೊಂಡನು ಮುನಿಪದಾಂಬುಜದಿ ||೭೧||

ಒಂದುದಿನ ಯತಿರಾಜ ಶತಪಥ
ಕೆಂದು ಹೋಗುವ ಸಮಯ ವಿಬುಧ
ವೃಂದ ವಿಗ್ರಹಪೂಜೆಯಂ ಸಾಧಿಸುತ ದಾರಿಯಲಿ |
ಒಂದಿಗೇ ನಡೆದಿತ್ತು ಮಧ್ಯದ
ಲೊಂದು ಗುಡಿಯಿರಲಾಡುತಿರ್ದರು
ಚೆಂದದಿಂ ಹಲಬಾಲಬಾಲೆಯರದರ ಮುಂಗಡೆಯೇ ||೭೨||

ಮಂದಿರದ ಬಳಿ ಬಂದ ತತ್ಕ್ಷಣ
ವಂದು ಯತಿಪಂ ತನ್ನ ಶಿರವನು
ಮಂದಿ ನೋಡಲು ಬಾಗಿಸಿದನಾಗೊರ್ವ ಪಂಡಿತನು |
ಮಂದಹಾಸದಲೆನಿತು ಖಂಡಿಸಿ
ಬಂದೊಡೇನೀ ಮೂರ್ತಿಶಕ್ತಿಯ
ನಿಂದು ನಿಟ್ಟಿಸಿ ಗುಡಿಯೆದುರು ತಲೆ ಬಾಗಿತಲೆ! ಎಂದ ||೭೩||

ತಟ್ಟನಾ ಯತಿಪಾಲನಾಕಡೆ
ಬೆಟ್ಟ ತೋರುತ ಬಟ್ಟೆಯಿಲ್ಲದ
ಪುಟ್ಟ ಹುಡುಗಿಯನೊಂದ ಸಂಕೇತಿಸುತ ಶಿರಬಾಗಿ |
ದಿಟ್ಟರೇ ನಮಗೆಲ್ಲ ಜನ್ಮವ
ಕೊಟ್ಟ ಮಹತೀಮಾತೃಶಕ್ತಿಯ
ನಿಟ್ಟಿಸಿರೆ ನೀವತ್ತ ! ಎಂದನು ಮಂದಿ ಬೆರಗಾಗೆ ||೭೪||

ಏರಚಾತೀಪರಿ ನಾರಿ ಜಾತಿಗೆ
ಪರಮ ಮಾನದ ಜ್ಯೋತ್ಸ್ನೆಯಿಂ ಭ
ಕ್ತರ ಮನಂಗಳ ಸೈದಿಲೆಗಳಂ ನಗಿಸಿ ಮುಂದಣದ |
ಉರಗಳಲಿ ಕವಿದಿರ್ದ ಸುಳ್ತಮ
ಸರಿಸೆ ತೊಳಗಿದ ವಿಜ್ಞಚಿತ್ತಾ
ಗರ ಸುಧಾಕರ ತುಂಬುಕಳೆಯಿಂ ಹರಸೆ ಪರಮಾತ್ಮ ||೭೫||

|| ಇಂತು ಹತ್ತೊಂಬತ್ತನೆಯ ಸಂಧಿ ||



# ಇಪ್ಪತ್ತನೆಯ ಸಂಧಿ

ಸೂಚನೆ—ದ್ವಿಜನ ತಿಳುಹಿಸಿ ಮೋಸಿಯರನಲಿ
ನಿಜಮತವನರುಹರಸನಿಗೆ ಕನ
ಉಚಿತ ಯತಿವರ ಜೋಧಪುರ ಪಾಲಂಗೆ ಬೊ·ಧಿಸಿದ ॥

ಕತೆಯ ಕೇಳಿರಿ ಬಳಿಕ ಮುನಿಭೂ
ಪತಿ ನಡೆದು ಬೊಂಬಾಯಿ ನಗರಕೆ
ಕ್ಷಿತಿಪ ಭಿಕ್ಷುಕರೆನದೆ ಸೇರಿದಲಕ್ಷ ಮಾನವರ ।
ತತಿ ತುಮುಲಜಯಘೋಷಗೈದಿರೆ
ಚತುರತನದಿಂ ಸತ್ಯ ವೈದಿಕ
ಮತವನಾರ್ಯಸಮಾಜದುತ್ಸವದಲ್ಲಿ ಘೋಷಿಸಿದ ॥೧॥

ಒಂದುದಿನ ಶೂದ್ರಾದ್ಯರುನ್ನತಿ
ಯಂ ದಯಾನಂದರ್ಷಿ ಚಿಂತಿಸಿ
ನಿಂದಿರಲ್ದ್ವಿಜನೊಬ್ಬ ಬಂದನು ಯತಿಪ ನಿಮ್ಮವರು ।
ಹಿಂದಕೆಲ್ಲರ ಮಾರ್ಗದರ್ಶಕ
ರೆಂದೆನಿಸಿ ಮೆರೆದಿರ್ದರರರಸ
ವೃಂದ ಸಹ ನಿಮ್ಮಡಿಗೆ ಬೀಳುತಲಿತ್ತು ಕೇಳೆಂದ ॥೨॥

ಆದೊಡೇನೀ ದಿವಸ ದುರ್ಗತಿ
ಯಾದುದಲೆ ನಿಮುಗಕಟ ವಿಪ್ರರೆ
ಮೇದಿನಿಯ ಗುರುವಾದ ನೀವ್ಗಳೆ ದಾಸರೊಲ್ಪರರ |
ಪಾದಸೇವೆಯ ಮಾಡಿ ಸ್ವಾರ್ಥವ
ಸಾಧಿಸುತ ಹುಡಿಗಾಸಿಗೋಸುಗ
ವೇದಧರ್ಮವ ಮಾರುತಿರ್ಪಿರೆ ಶೋಕ ಹಾಯೆಂದ ||೩||

ಏಸುಭಕ್ತರು ನೆಲೆಸಿ ಹಲವಿಧ
ದಾಸೆ ತೋರಿಸಿ ಕೋಲ ಭೀಲದಿ
ರಾ ಸಮೂಹವ ತಮ್ಮ ಜಾಲದಿ ಬೀಳಿಸುತ್ತಿಹರು |
ಆಸರಿಸಿ ವಿಭುದಯವ ದೇವೋ
ಪಾಸನೆಯ ಕಲಿಸುತ್ತ ನೀವ್ಹಿಂ
ದೂ ಸಮಾಜದ ಪಾದಗಳ ರಕ್ಷಿಸಿರಿ ಭರಮೆಂದ ||೪||

ಪಾತ್ರರಲ್ಲವೆ ಶೂದ್ರರೇನು ವಿ
ಧಾತ್ರನಿತ್ತಾ ವೇದ ತಿಳಿಯಲು
ಶ್ರೋತ್ರಿಯರೆ ಬಹುವಾಯ್ತು ಸಾಕಸ್ವಾಯ ಸ್ವಾರ್ಥಗಳ |
ರಾತ್ರಿ ತೀರಿತು ಜ್ಞಾನ ಸೂರ್ಯನಿ
ದೋ ತ್ರಿವರ್ಣರನೆಚ್ಚರಿಸುತಿಹ
ಸ್ತೋತ್ರವಿತ್ತ್ರಭುಪುತ್ರರೆಲ್ಲರನಪ್ಪಿಕೊಳಿರೆಂದ ||೫||

ಆ ವಿನುತಮುನಿಯೊಂದುದಿನ ಕುಳಿ
ತೀವುದಂ ಭಕ್ಷಿಸುವ ಮಾನವ
ನಾವನನೊ ತಾನಿಳಿದ ಬೀಡಾರದಲಿ ಕಂಡೊಡನೆ |
ಕೇವಲಾಲಸ್ಯದಲಿ ನಿಷ್ಕ್ರಿಯ
ಜೀವರಾಗಿ ಪರಾನ್ನ ಭಕ್ಷಣ
ಗೈವುದತಿ ಪಾಪಕರವೆಂದನು ಬಿಚ್ಚು ಮಾತಿನಲಿ ||೬||

ಜ್ಞಾನಿಮುನಿಬಳಿ ವಿಜ್ಞ ಪಂಡಿತ
ಮೋನಿಯರ ವಿಲಿಯಮ್ಸ ನಯದಿಂ
ತಾ ನಡೆದು ಹಲವಾರು ಶಾಸ್ತ್ರಜ್ಞಾನವಂ ಗಳಿಸಿ |
ಹೇ ನವರ್ಷಿಯೆ ಭಾರವೆಲ್ಲವ
ನಾನೆ ಹೊರುವೆನು ತಾವು ವೇದ
ಜ್ಞಾನ ಯೂರೋಪಿನಲಿ ಬೋಧಿಸಿರೆಂದು ಬೇಡಿದನು ||೭||

ಮೋನಿಯರ ವಿಲಿಯಮ್ಸನೆಂದೀ
ಸಾನುನಯ ಬಿನ್ನಹಕೆ ತದ್ವಿ
ಜ್ಞಾನಿ ಮುನಿಯೌದಾರ್ಯಕೋಸುಗ ವಂದಿಸಾತನನು |
ಮೋನಿಯರ ಕೇಳಾವ ದೇಶದ
ಲಾನು ವಾಸಿಸುತಿರ್ಪೆನದಕ
ಜ್ಞಾನತಮವಾವರಿಸಿ ಕೊಂಡಿದೆ ಮರೆವೆನೆಂತೆಂದ ||೮||

ಕೊಳಕು ತನ್ನಯದೇಶದಲಿ ನೆರೆ
ತುಳುಕುತಿರಲಿನ್ನಿತರ ದೇಶಂ
ಗಳಲಿ ತುಂಬಿದ ಹುಳುಕ ಹಿಡಿಯುವುದೇಕೆ ನಿವ್ಮೊಡನೆ |
ಒಳಿತೆನುತ ಬಹೆನಾದೊಡಂ ನಾಂ
ತಿಳಿಯೆನಲ್ಲಿನ ನುಡಿಯನೀಗದ
ಕುಳಿತು ಕಲಿಯುವ ಬದಲು ಸೇವೆಯ ಸಲಿಸಬಹುದೆಂದ ||೯||

ಧೀರಮುನಿಯಿಂತುಸುರಿ ತವೆಗಂ
ಭೀರ ದನಿಯಿಂ ಸಖರೆ ನನ್ನ ಶ
ರೀರಕೆನಿಬರೊ ಶತ್ರುಜನರಿಹರಾವ ಸಮುದದಲಿ |
ಆರಿದಂ ತೀರಿಪರೊ ಬಲ್ಲವ
ರಾರು ಭಾರತಿಯನ್ನೆ ನಾಂಹಲ
ವಾರುದಿನ ಸೇವಿಸಲು ಸಾಕೆನೆ ಮಣಿದ ವೋನಿಯರ ||೧೦||

ಬಳಿಕ ಯತಿವರ ಸಕಳ ವೈಭವ
ತೊಳಗಲುದಯ ಪುರಕ್ಕೆ ನಡೆತಂ
ದಿಳಿದು ರಾಜೋದ್ಯಾನದಲ್ಲಿನ ರಾಜಮಂದಿರದಿ |
ಬೆಳಗಿದನು ಸದ್ಧರ್ಮ ದೀಪವ
ಹೊಳೆದುದರಸನ ಹೃದಯದೀಪವು
ಮುಳಿದ ಜನರೈತಹರು ದಿನದಿನ ಹಲವು ಸಾಸಿರದಿ ||೧೧||

ಹಸುರೆಲೆಯ ಹೂಗಿಡಗಳಂಚಿನ
ಹೊಸೆದ ತುಹಿನೋಪಮದ ಶಿಲೆಗಳ
ವಿಸರದಿಂ ನಿರ್ಮಿಸಿದ ಸುಂದರದಾಸನದ ಮೇಲೆ |
ಅಸಮ ಮುನಿವರ ಕುಳಿತನೆಳೆರವಿ
ಗೊಸಗೆ ಸಲ್ಲಿಪ ಕಮಲಕುಲಗಳ
ಪಸರಿಸಿದ ಸರಸಿಯನು ನೋಡುತಲೊಂದು ಬೆಳಗಿನಲಿ ||೧೨||

ಬೆಳಗಿನಾ ತಂಗಾಳಿ ಸುಳಿಸುಳಿ
ಸುಳಿದು ಸರಸಿಯ ಕಮಲವಿಸರವ
ಬಳುಕಿಸುತ ಸಿಹಿಗಂಪ ತಂದದ ತಸಗೆ ತೀಡುತಿರೆ |
ಹೊಳೆವ ತೇಜದ ಮುನಿಪ ದಿನಪನ
ಕಳೆಗಳನೆ ಹಳಿಯುತ್ತ ದೇಹದಿ
ಪುಳಕ ಮಿಗೆ ಕಣ್ಮುಚ್ಚಿ ಕುಳಿತನು ನುತಿಸುತೀಶ್ವರನ ||೧೩||

ಹೆತ್ತ ಕರುಳಿನ ಮಮತೆಯೋ ತನು
ವೆತ್ತಿದಾ ಸದ್ಬ್ರಹ್ಮಚರ್ಯವೊ
ಹೊತ್ತಿಸಿದ ಸೌಂದರ್ಯದೀಪವೊ ತಿರುಳುಗನ್ನಡದ |
ಚಿತ್ತ ಕದಿಯುವ ಸಿಹಿಯೊ ಎಂಬಂ
ತತ್ತ ಯತಿಪಂ ರಂಜಿಸಿರೆ ತೊಳ
ಗಿತ್ತು ಮೈಕಾಂತಿಗಳು ಬಿಂಬಿಸಿ ರವಿಯ ಕಾಂತಿಯನೆ ||೧೪||

ತಳಿತ ರೋಮಗಳಿಂದ ತನುವುಂ
ಗಳಿತ ಬಾಷ್ಪಗಳಿಂದ ಕದಪುಂ
ತಿಳಿನಗೆಯ ಹೊಳಪಿಂದ ತುಟಿಗಳುಮಮಿತರಾಜಿಸಿರೆ |
ಬಿಳಿಶಿಲೆಯ ಮೇಲದುವೆ ಚಿನ್ನದ
ಪೊಳೆವ ಬೊಂಬೆಯುನಿಳಿಸಿದಂತಿಹ
ಕಳೆಯ ಯತಿಪನ ಬಳಿಗೆ ಸಜ್ಜನಸಿಂಹ ನೃಪ ಬಂದ ||೧೫||

ಯತಿಪ ಮೇಲೆದ್ದೊಡನೆ ಭಗವನ್ !
ಮತಿವಿಕಳ ನಮಿಸಿದೆನು ತಾಪ್ನ
ದ್ಗತಿಯ ಮಾರ್ಗವನೆನಗೆ ತೋರಿಸಿ ಪೂಜ್ಯ ಗುರದೇವ |
ಚತುರತನದಿಂ ತಿಳಿಪ ಮೇಧಾ
ಪ್ರತರ ತಮ್ಮಂತಹರ ನಾಂಪಸು
ಮತಿಯಲನ್ಯರ ಕಾಣೆನೆನುತಿಂತೆಂದನಾ ಭೂಪ ||೧೬||

ಸ್ವಾಮಿಗಳೆ ತಾವ್ಮೂರ್ತಿ ಪೂಜಾ
ನೇಮ ಹಳಿವುದ ಬಿಡಿರಿ ನ್ಯಾಯವಿ
ದಾ ಮಹೀಪತಿಕುಲಕೆ ಧನಸಂಗ್ರಹದ ಬಹುರೀತಿ |
ಪಾಮರನ ನುಡಿಗೊಪ್ಪಿದರೆ ಗುಣ
ಧಾಮ ಮುನಿವರರೇಕಲಿಂಗ
ಸ್ವಾಮಿ ಮಂದಿರಕಿಂದು ವಂದ್ಯಮಹಂತರಪರೆಂದ ||೧೭||

ದಿಟ್ಟ ಮುನಿಪರೆ ನಮ್ಮ ಹಿರಿಯರ
ಪಟ್ಟದಿಂದೀ ರಾಜ್ಯವನೆ ಮುಡಿ
ಪಿಟ್ಟಹೆವು ನಾವೇಕಲಿಂಗ ಮಹಾಪ್ರಭುವಿನಡಿಗೆ !
ಇಟ್ಟ ಸಂಪದ ಹಲವು ಲಕ್ಷದ
ಗಟ್ಟಿಯುಪ್ಪುದು ತಮಗೆ ನೃಪಗುರು
ಪಟ್ಟಮುಪ್ಪುದು ಹೇಳಿ ಭಗವನ್ ಚಿತ್ತಮೇನೆಂದ ||೧೮||

ಇದನು ಕೇಳ್ದೊಡನಾ ಯತೀಶನ
ವದನ ಕೆಂಪೇರಿದುದು ಕುಟ್ಟುತ
ಪದದಿನವನೀತಳವ ನಸುಗೋಪದಲಿ ಭೂವರನ |
ವದನ ನೋಡುತ ರಾಜನೇ ನ
ನ್ನಿದುವರೆಗಿನುಪದೇಶಕೀ ಫಲ
ಮೊದಗಿತಲೆ! ಯಾರೆದುರು ನುಡಿಯುವೆ ಸ್ಮರಣೆಯಿರಲೆಂದ ||

ಹೇಳು ಸಜ್ಜನಸಿಂಹ ನಾಂ ಸೌ
ಖ್ಯಾಳಿ ಬೇಕೆಂದಿರಲು ಮನೆಯಲಿ
ಬಾಳಿದಲಿ ಸಿಗದಿತ್ತೆ ತಂದೆಯ ಸಂಪದಂಗಳನು |
ಆಳಿದರೆ ಸುಖ ಕಡಿಮೆಯಿರ್ದ್ದುದೆ
ತಾಳದದನಾ ತಂದೆ ತಾಯ್ಗಳ
ಗೋಳಿಡಿಸಿ ನಾನೇತಕೋಡಿದೆ ತಿಳಿದು ನೋಡೆಂದ ||೨೦||

ಯಾವ ನಿನ್ನೀ ರಾಜ್ಯವನು ನಿ
ನ್ನಾವ ದೇವಾಲಯವ ರಾಜನ್ !
ನಾವು ಚಿಗಿಯುತಲೊಂದೆ ಹೆಜ್ಜೆಗೆ ದಾಟಲಾದಪುದೋ |
ಆವುದನು ಹುಲುಕವಡೆಗೆಣೆಯೆಂ
ದಾವು ತಿಳಿವಪೆವದು ನಮಗೆ ವರ
ದೇವನಾಜ್ಞೆಯ ಮೀರಲುತ್ಸಾಹಿಸುವುದೆಂತೆಂದ ||೨೧||

ನಿನ್ನ ಬೆಂಗಾಡೊಂದೆ ಏತಕೆ
ನನ್ನ ಮುಂದೀ ವಿಶ್ವದೈಸಿರಿ
ಯನ್ನೆ ತಂದೊಡಮೊದೆವೆನೆಡಗಾಲಿಂದ ತೃಣದಂತೆ |
ನನ್ನ ದೇವನು ಕೊಡುವ ಸಂತಸ
ನಿನ್ನ ಸಿರಿಯಿಂಬಹುದೆ ರಾಜನ್ !
ನನ್ನ ಮುಂದೀಪರಿಯ ವಚನವನುಸಿರಬೇಡೆಂದ ||೨೨||

ದಿನಪನಂತುಜ್ವಳಿಪ ಯತ್ಯಾ
ನನಪ ನಿಟ್ಟಿಸಿ ಗುಡುಗಿನಂತಹ
ದನಿಯನಾಲಿಸಿ ನಡುಗಿ ಸಜ್ಜನಸಿಂಹ ಭೂಕಾಂತ |
ಮುನಿವರರೆ ತಮ್ಮಡಿಯ ನಿಶ್ಚಳ
ಘನತೆಯರಿಯಲು ನುಡಿದೆನೀಪರಿ
ಕನಲದಿರಿ ಮನ್ನಿಸಿರಿ ಭಗವನ್ ಧೃಷ್ಟತೆಯನೆಂದ ||೨೩||

ಮಳೆಗರೆಪು ನಿಂತೊಡನೆ ಮೂಡುವ
ಹೊಳೆವ ಕಾಮನ ಬಿಲ್ಲಿನಂದದಿ
ತಿಳಿನಗೆಗಳೊಡುತಿರೆ ತುಟಿಯಲಿ ಮುನಿಪ ಬೆಂದಡವಿ |
ಇಳೆಯ ಕಾಂತನನೆತ್ತಿ ರಾಜನ್
ತಿಳಿದೆಯಾ ಸಮ್ಮುರದ ನಿಶ್ಚಯ
ಗಳನೆನುತ ಬೋಧಿಸಿದ ರಾಜನ ಧರ್ಮ ಕಾರ್ಯಗಳ ||೨೪||

ಇರ್ಪ ಪ್ರಜೆಗಳ ನಲಿಪವನೆ ನೃಪ
ದರ್ಪದಿಂದದ ನೋಯಿಪವ ಘಟ
ಸರ್ಪನೇ ಸರಿ ಮರೆಯದಿರು ನೀನಿದನು ಕಾರ್ಯದಲಿ |
ಬರ್ಪ ಸಂಗೀತದಲಿ ಚಿತ್ತ ಸ
ಮರ್ಪಿಸಿದೊಡಂ ಮೈಮರೆದು ಜನ
ತರ್ಪ ತೆರಗೆಯ ಭಾವ ಮರೆಯದಿರೆಂದನಾ ಯತಿಪ ||೨೫||

ಬಂದರನಿತರಲಾಯೆಡೆಗೆ ಹಲ
ಮಂದಿ ಸಾಮಂತದಿರು ಯತಿವರ
ನಂದು ರಾಜನ ಧಾರ್ಮಿಕಾಜ್ಞೆಯ ಮಾತ್ರ ಪಾಲಿಪುದು |
ಎಂದ ಮೋಹನಸಿಂಹ ದೂಷಿತ
ಮೆಂದು ಸಾಮ್ರಾಜಾಜ್ಞೆ ಭಂಗಿಸ
ಲಿಂದೆ ನಿಜಸಾಮಂತಪದವಿಯುಮುಳಿಯದಲೆ ಎಂದ ||೨೬||

ಎಂದ ಮೋಹನಸಿಂಹನೀ ನುಡಿ
ಗಂದು ಯತಿಪಂ ನಗುತ ಶೋಕವ
ದೊಂದಿನಿಸು ತರವಲ್ಲ ಧರ್ಮದ ಪಾಲನೋತ್ಸವದಿ।
ಇಂದೆ ಹೋಗಲಿ ರಾಜ್ಯಧನಗಳು
ಕಂದ ಪಾಪದ ಭೋಗಕಿಂ ಹಲ
ಮಂದಿಯಲಿ ತಿರಿದುಂಬುದುತ್ತಮ ಭೀತಿಯೇಕೆಂದ ||೨೭||

ಚೆದುರಿದುದು ಸಭೆ ಮುನಿಜನಪನೆಂ
ದುದರ ದನಿಯೇ ಸಸ್ವರದೆಯಲಿ
ಹುದುಗಿ ಮೊಳಗುತಲಿತ್ತು ಸಜ್ಜನಸಿಂಹ ಭೂಕಾಂತ।
ಪದಕೆರಗಿ ಸೇವಕನು ತಾನೆಂ
ದುದ ನಡೆಸೆ ಯತ್ನಿಪನು ಭಗವನ್!
ಸದಯರಾಶೀರ್ವದಿಸಿರೆನ್ನುತ ನಡೆದ ಸಿರಬಾಗಿ ||೨೮||

ನೇರದಿಂ ಯತಿವರ್ಯರಿರ್ವರು
ವೀರಮುನಿಯೆಡೆ ಬಂದು ತಾವಧಿ
ಕಾರಹೀನರಿಗಂ ತಿಳಿಪಿರೆಂದೊಂದು ದಿನನುಡಿಯೆ।
ಕಾರುಣಿಕ ಯತಿ ಧರ್ಮ ತಿಳಿವಧಿ
ಕಾರವೆಲ್ಲರಿಗುಂಟು ನನ್ನೊಡ
ಸೇರಿ ಮೊದಲಾ ವೇದರತ್ನವ ಕಾದುಕೊಳಿರೆಂದ ||೨೯||

ಬಂದ ಮೋಹನಲಾಲನಿಗೆ ಮು
ತ್ತೊಂದು ದಿನ ದುರ್ನಡೆಯು ನಿದ್ರೆಯು
ಹಿಂದುಗಳು ಮೆಲುದನಿಗೆ ಬಿಡಕೈ ತನ್ನ ಖಂಡನದ ।
ತಂದ ಸರಳಿನ ಹೊಡೆತಕಾದೊಡ
ಮಿಂದು ಜಾಗ್ರತರಾಗೆ ದೇವನ
ವಂದಿಪೆನು ನನಗಿವರಲೆಲ್ಲಿಯ ಸ್ವಾರ್ಥ ಪೇಳೆಂದ ॥೩೦॥

ಸುಟ್ಟರೆನ್ನಯ ಕುಟಿಯ ಕತ್ತಿಯು
ತೊಟ್ಟರೆನ್ನನು ಕೊಲಲು ಕಟುವಿಷ
ವಿಟ್ಟರೆನಿತೋ ಸಾರಿ ಕಲ್ಗಳನೆತ್ತಿ ಬೀಸಿದರು ।
ಕುಟ್ಟ ಹಿಗ್ಗಿದರಾದೊಡಂ ನಾಂ
ಬಿಟ್ಟುಕೊಡೆನೀ ಸೋದಪಪ ಬೆಂ
ದಟ್ಟುವೆನು ವಾತ್ಸಲ್ಯ ಭಾವದಲೆಂದನಾ ಯತಿಪ ॥೩೧॥

ಉದಯಪುರದಲೆ ಯತಿಜನೋತ್ತಮ
ಮುದದಿ ತಾನೇ ರಚಿಸಿ ನೇಮದ
ಹದಗೊಳಿಸುತ ಪರೋಪಕಾರಿಣಿಸಭೆಯನೇರ್ಪಡಿಸಿ ।
ಅದುವರೆಗೆ ತಾಂ ತಳೆದ ಧನ ಸಂ
ಪದವನದಕೆಡೆದಖಿಳ ಜಗತಿಯು
ಮುದಿತ ಪ್ರೇಮದಿ ಸೇವಿಪುದೆ ಸತ್ಕಾರ್ಯಮಿದಕೆಂದ ॥೩೨॥

ಸ್ನೇಹದಿಂ ಮೇವಾಡ ಭೂಪನ
ತಾ ಹುರುಪುಗೊಳಿಸಾ ಯತೀಶ್ವರ
ಶಾಹಪುರಪತಿ ಬೇಡೆ ತತ್ಪುರಕ್ಕೈದಿ ಧರ್ಮವನು ।
ಕಾಹಪರಿ ತೋರಿದನು ಭಿಕ್ಷಾಂ
ದೇಹಿಯೆನೆ ಲೋಕದಲಿ ನೆರೆ ನಿ
ರ್ಮೋಹನಹ ಸನ್ಯಾಸಿಯೊಬ್ಬನೆ ಯೋಗ್ಯನೆಂದೊರೆದ ||೩೩||

ಆ ದಯಾನಂದರ್ಷಿ ಶಾಹಪು
ರಾಧಿಪನ ಮೇಣ್ಪ್ರಜೆಗಳಂ ವೇ
ದಾದಿ ಶಾಸ್ತ್ರೋದ್ಭೂತ ಧರ್ಮಜ್ಞಾನ ಬಲದಿಂದ ।
ಬೋಧಿಸುತ್ತಿರಲತ್ತ ವಿಶ್ರುತ
ಜೋಧಪುರ ಭೂಪಾಲನೆಡೆಯಿಂ
ದಾದುದತಿನಮ್ರತೆಯ ಬಿನ್ನಪ ಬಯಸಿ ದರ್ಶನವ ||೩೪||

ಇಂತು ಬರಲಾಹ್ವಾನಗಳು ಯಶ
ವಂತಸಿಂಹ ನರೇಶನಿಂ ಮತಿ
ವಂತ ಮುನಿಭೂಕಾಂತ ಸಂತಸವಾಂತು ತತ್ಪುರಕೆ ।
ಮುಂತೆರಳೆ ನಿಶ್ಚಯಿಸಿದುದ ಕಂ
ಡಂತರಂಗದಿ ಭೀತನಾಗುತ
ಚಿಂತೆಯಿಂದಾ ಶಾಹಪುರ ನರಪಾಲನಿಂತೆಂದ ||೩೫||

ಜೋಧಪುರ ರಾಜ್ಯದಲಿ ಮಾನಿತ
ರಾದವರು ಸಹ ಸೂಳೆಯರ ಬಳಿ
ಗೈದುವರು ವೇಶ್ಯಾಂಗನಾಸಕ್ತಿಯನು ತಾವ್ಕನಲಿ |
ಬೀದಿಗೆಳೆಯುತ ಖಂಡಿಪಿರಿ ಗುರು
ಪಾದಕೇಗೈದಪರೊ ಮೂಢರು
ಬೋಧಿಸಿರಿ ಮೃದುನುಡಿಯಲೆಂದನು ಶಾಹಪುರಪಾಲ ||೩೬||

ಎಂದ ಶಾಹಪುರೇಶ್ವರನ ನುಡಿ
ಗಂದು ಯತಿವರ ನಗುತ ಚಾಕುವಿ
ನಿಂದ ಪಾಪದ ಮರನ ನಾಂ ಕಸಿಮಾಡೆ ಹೊರಟಿಲ್ಲ |
ಇಂದು ಸಾಣೆಗೆ ಕೊಟ್ಟ ಪರಶುವಿ
ನಿಂದಲೇ ಸಾನದನು ಬೀಳಿಪೆ
ನೊಂದಿನಿಸುಮುಂಜಿಕೆಗೆ ರಾಜನ್ ! ಸ್ಥಾನಮಿಲ್ಲೆಂದ ||೩೭||

ಭೂವರನ ಮೇಣ್ಜನರ ಹರಸುತ
ಲಾ ವರರ್ಷಿಯು ನಡೆದಿರಲು ಮುನಿ
ಭೂವರರು ಪೋಪೆಡೆಯ ಮುಂದಿ ಕಠೋರರಾಗಿಹರು |
ದೇವರಿತ್ತುಪದೇಶದಿಂ ಮುಳಿ
ದಾ ವಿಮಳಪದಕೇನು ಕೇಡನು
ಭಾವಿಪರೊ ಗಡಮೆಂದು ಕಂದಿದರಾತ್ಯರಂಜುತಲಿ ||೩೮||

ಇಂತು ಭಕ್ತರು ನುಡಿಯೆ ಯತಿವರ
ಚಿಂತೆಯೇನಾ ಜನರು ದೀಪಗ
ಳಂತೆ ನಮ್ಮೀ ಬೆರಳುಗಳನೇ ಬತ್ತಿಗಳ ಮಾಡಿ ।
ಸಂತಸದಿ ಹಚ್ಚುರಿಸಲದರಿಂ
ದಂತರಂಗಂ ಬೆಳಗೆ ಹಲರಿಗೆ
ಪಿಂತಣದ ನಮ್ಮಾಸೆ ತೀರಿತು ಭೀತಿಯೇಕೆಂದ ॥೩೯॥

ಎಂದು ತಲೆಯಿದು ದಂಡಿ ವಿರಜಾ
ನಂದ ಗುರುಪದಯುಗವ ಮುಟ್ಟದ
ದಂದೆ ಭಯನಿರ್ಣಾಮವಾದುದು ದೇವನೊಬ್ಬನಿಹ ।
ಒಂದೆಯೇ ಸತ್ಯಮಿದೆ ನೀವದೆ
ಗುಂದಬೇಡಿರೆನುತ್ತ ಭಕ್ತ
ವೃಂದವಂ ಸಂತೈಸಿ ನಡೆದನು ಋಷಿ ದಯಾನಂದ ॥೪೦॥

ಅಂದು ಜೋಧಪುರೇಶನಪ್ಪಣೆ
ಯಿಂದ ರಾಜ ಪ್ರತಾಪಸಿಂಹನ
ನೊಂದುಗೂಡಾ ತೇಜಸಿಂಹನು ಪುರದ ಬಾಗಿಲಲಿ ।
ವಂದಿಸಾ ಮುನಿವರನ ಕರೆತರ
ಲೆಂದು ನಿಂದಿರೆ ದೂರದಿಂದಲಿ
ಮಂದಿಸಂದೋಹದಲಿ ಕಂಡರು ಯತಿಯ ಠೀವಿಯನು ॥೪೧॥

ರಾಜ ಕಳುಹಿಸಿಕೊಟ್ಟ ಗಜಗಳು
ವಾಜಿಗಳು ಮೇಣೊಂಟೆ ವಾಹನ
ರಾಜಿಗಳು ಮತ್ತುಳಿದ ಮಾನ್ಯರು ಹಿಂದಕುಳಿದಿರಲು |
ರಾಜಹಂಸನ ತೆರದಿ ಯತಿಜನ
ರಾಜ ರಾಜೇಶ್ವರನು ಭೂ ಸಂ
ಪೂಜಿತಾತ್ಮನು ಮುಂದೆ ಬರ್ಪುದ ಕಂಡರಾ ಜನರು ||೪೨||

ಎಳೆಯ ಸೂರ್ಯನ ತೆರದಿ ನೊಸಲದೊ
ಪಳಪಳನೆ ತೊಳಗುತಿದೆ ಕೆನ್ನೆಗ
ಳೊಳಗೆ ಕನ್ನಡಿಯಂತೆ ಹೊಳಪಿದೆ ಮಂದಹಾಸಗಳು |
ಸುಳಿದು ತುಟಿಗಳ ಮೇಲೆ ಕುಣಿದಿವೆ
ಚಳಿಪ ಕಂಗಳ ಬೆಳಕು ಹೊಳೆಹೊಳೆ
ಹೊಳೆದು ಕೆಳಬಳಗಳನು ಬೆಳಗಿವೆ ದಿವ್ಯ ದೇಹದಲಿ ||೪೩||

ತೋರಬಾಹುಗಳೆರಡು ಜಾನುವ
ನೇರದಿಂ ಸ್ಪರ್ಶಿಸಿವೆ ವಿಶ್ವದು
ದಾರತನವೆಲ್ಲವನು ತನ್ನಲಿ ತಳೆದುದೆಂಬಂತೆ |
ತೋರುತಿದೆ ನೆರೆ ವಿಶದ ವಕ್ಷಂ
ವಾರಣನನೇ ಹಂಗಿಸುವ ಗಂ
ಭೀರಗತಿಯಿಂ ಮುನಿಪ ಬರ್ಪುದ ಕಂಡರಾ ಜನರು ||೪೪||

ಹಳದಿ ಬಣ್ಣದ ರೇಷ್ಮೆ ಪೇಟದ
ತಳೆದ ಕುಚ್ಚನಿಲಂಗೆ ಹರಿದಿರೆ
ಮಿಳಿತ ಕಾಷಾಯಾಂಬರದ ನಿಲುವಂಗಿ ಶೋಭಿಸಿರೆ |
ತೆಳುವ ಪೀತಾಂಬರವನುಟ್ಟ
ಚ್ಚಳಿಯದಾ ಸದ್ಬ್ರಹ್ಮಚರ್ಯದ
ಕಳೆಯ ಮುನಿವರ ದಂಡವೊಂದನು ಪಿಡಿದು ನಡೆತಂದ ||೪೫||

ಶರಣ ವೇದೋದ್ಧರಣ ಭಯಸಂ
ಹರಣ ಭವನಿಸ್ತರಣ ವಂದಿತ
ಚರಣ ಸತ್ಯಾಭರಣ ನಿರ್ಜಿತಮರಣ ವಿಜಿತರಣ |
ಧರಣ ಸತ್ಸುಖಕರಣ ವಿಭ್ವನು
ಸರಣ ಪಥ ಸಂಸ್ಕರಣ ! ಎಂಬೀ
ಸ್ವರ ಮೊಳಗುತಿರೆ ಯತಿಪ ಬಂದನು ಪುರದ ಬಾಗಿಲಿಗೆ ||೪೬||

ಹೇ ಧುರಂಧರ ವೇದ ವಿದ್ವ
ದ್ವೃಥವನೆ ವಿಖ್ಯಾತನಾಮನೆ
ಹೇ ದಯಾನಂದರ್ಷೆ ! ಜಯಜಯ ! ಎಂದು ಮಂದಿಗಳು |
ನಾದಗೈಯುತ ಹೂವ ಮಳೆಯನೆ
ಕಾದು ಸುರಿಸುತ್ತಿರಲು ಮುನಿವರ
ನ್ಸೆದೆ ಕುಡಿನಗೆಯಿಂದ ಕೈಗಳ ಮುಗಿದನೆಲ್ಲರಿಗೆ ||೪೭||

ತೇಜಸಿಂಹ ಪ್ರತಾಪಸಿಂಹರು
ರಾಜವಾಟಿಕೆಯಲ್ಲಿ ಯತಿ ಸ
.ಮ್ರಾಜನಂ ತಾವಿಳಿಸಿ ಕಲ್ಪಿಸಿ ಸರ್ವ ಸೌಖ್ಯಗಳ |
ಸಾಜ ನಯದಿಂ ಸೇವೆಗೈದರು
ರಾಜಯೋಗಿಯ ಬಳಿಗೆ ಭಕ್ತಸ
ಮಾಜ ಸಾಸಿರದಲ್ಲಿ ಬರ್ಪುದು ಬಯಸಿ ದರ್ಶನವ ||೪೮||

ಪುಂದಿ ನೆರೆದುಪದೇಶವಾಲಿಸು
ತೊಂದುದಿನ ಕುಳ್ಳಿರಲು ನಮ್ರತೆ
ಯಿಂದಲಾ ಯಶವಂತಸಿಂಹನು ಜೋಧಪುರಪಾಲ |
ಬಂದು ಮುನಿಚರಣದಲಿ ಮಸ್ತಕ
ಹೊಂದಿಸುತ ಕಾರುಣಿಕ ಭಗವನ್ !
ವಂದಿಸಿದೆನೆಂದೆನುತ ನೆಲದಲಿ ಕೆಡೆದ ಭಕ್ತಿಯಲಿ ||೪೯||

ಎತ್ತಿ ಮುನಿಪತಿಯರಸನಂ ಹರ
ಸುತ್ತ ರಾಜನ್ ! ಪೀಠವೇರೆನ
ಲುತ್ತಮಾಂಗವ ಬಾಗಿ ಭೂವರ ತಮ್ಮ ಪಾದಗಳ |
ಅತ್ತ ದಾಸರು ನಾವು ಪದರಜ
ವೆತ್ತ ಬಂದೆವೆನುತ್ತ ಮೌನವ
ಪೊತ್ತು ಕುಳಿತನು ಹಿಂದೆ ಸರಿಯುತ ನಯದಿ ಭೂತಳದಿ ||೫೦||

ಆ ಮಹರ್ಷಿಯು ಭೂಮಿಕಾಂತಗೆ
ನೇಮದಿಂ ಮನುಧರ್ಮ ತಿಳುಹಿದ
ನಾ ಮಹಿಪನೆದೆಯಲ್ಲಿ ಮುನಿಯೊಂದೊಂದು ನುಡಿ ಕೂಡ |
ತಾ ಮನೆಯ ಮಾಡಿದುದು ವಿನಯೋ
ದ್ದಾಮ ಭೂವರನಾ ಬಳಿಕ ಮುನಿ
ಸ್ವಾಮಿ ಪಾಡುತ ಭಕ್ತಿನಯ ಭರದಿಂದಲಿಂತೆಂದ ||೫೧||

ಪರಮ ಪೂಜ್ಯ ಮಹಾತ್ಮ ಭಗವನ್
ನರಕುರಿಗಳಾದೆಮಗೆ ತಮಗೆಣೆ
ಯರ ಸುದರ್ಶನ ಪರಮ ದುರ್ಲಭ ತಮ್ಮ ಪಾದಗಳ |
ನೆರಳಿನಲಿ ಸುಖಶಾಂತಿ ಕಾಂತಿಯ
ಧರಿಸಲೆಮ್ಮೀ ರಾಜ್ಯವೆನ್ನುತ
ಮರಳಿ ಮುನಿಪದಕೆರಗಿ ತೆರಳಿದ ಜೋಧಪುರಪಾಲ ||೫೨||

ಯತಿಪನಾ ಪುರದಲ್ಲಿ ವೈಷ್ಣವ
ಮತದ ಕಲ್ಪಿತ ಗುರುಗಳಡಿಯಲಿ
ಸುತೆಯರಂ ಸಹ ಧಾರೆಯೆರೆವ ಸಮರ್ಪಣದ ವಿಧಿಯ |
ಚತುರತನದಿಂ ಖಂಡಿಸಲು ತ
ನ್ಮತದ ಮಂದಿಗೆ ಕೋಪ ಹುಟ್ಟಿತು
ಪತಿತರಹಿತವ ಬಗೆದರಾ ಯತಿಪತಿಯ ಪದಗಳಿಗೆ ||೫೩||

ನೆರೆದ ಸಭೆಯಲ್ಲೊಂದುದಿನ ಯತಿ
ವರನು ಮಹಮುದಮತದ ದೋಷವ
ತೆರೆದು ಖಂಡಿಸೆ ಭಾಯಿ ಫೈಜುಲ್ಲಾ ಮಹಾಶಯನು ।
ಕೆರಳಿ ಯತಿಯೇ ಮೊಗಲಶಾಸನ
ವಿರಲು ನಿನ್ನನು ಬದುಕಲೆಮ್ಮಯ
ನರರು ಬಿಡುತಿರಲಿಲ್ಲವೆಂದನು ಕಚ್ಚುತವುಡುಗಳ ॥೫೪॥

ಒಡನೆ ಯತಿವರ ನಗುತಲಂತಹ
ಕಡುವಿಷಮುಕಾಲವಿರೆ ಭಯದಿಂ
ನಡುಗಿ ನಿಲುತಿರಲಿಲ್ಲ ನಾವುಂ ವತ್ಸ! ನಾಲ್ಕಾರು ।
ಕುಡಿಯುಮಿಸೆಯ ರಾಜಪುತ್ರರ
ಹಿಡಿದು ಬೆನ್ನನು ತಟ್ಟುತುಕ್ಕಿನ
ಕಡಲೆ ಮುಕ್ಕಿಸುತಿರ್ದೆವಹಿತರಿಗೆಂದು ಗರ್ಜಿಸಿದ ॥೫೫॥

ಘೋರವಿಸ್ಮೃತಿತಮದಿ ಘನಯಾ
ತ್ರಾರತರು ಬೇರೆತ್ತೊ ನಡೆಯಲ
ಪಾರ ಸತ್ಯದ ತಿಳಿಯ ಬೆಳದಿಂಗಳನು ತಾಂ ಸುರಿಸಿ ।
ತೋರಿಸಿದನಿಂತಮರ ಪದವಿಯ
ದಾರಿಯನು ಸದ್ಧರ್ಮ ನಿರ್ಮಳ
ವಾರಿಧಿ ಸುಧಾಕರನು ದಯದಿಂ ಹರಸೆ ಪರಮಾತ್ಮ ॥೫೬॥

॥ ಇಂತು ಇಪ್ಪತ್ತನೆಯ ಸಂಧಿ ॥



# ಇಪ್ಪತ್ತೊಂದನೆಯ ಸಂಧಿ

**ಸೂಚನೆ—ತ್ಯಕ್ತಸಂಗಂ ನೃಪನ ವಿಷಯಾ**
**ಸಕ್ತಿ ಖಂಡಿಸಿ ವಿಷವನಿತ್ತು**
**ದ್ರಿಕ್ತಪಾಪಿಯ ಸಲಹಿ ರೋಗದಿ ನರಳಿ ಮುನ್ನಡೆದ ॥**

ಮುಂದಕಾಲಿಸಿ ಕತೆಯ ಯತಿವರ
ನೊಂದುದಿನ ಗೊತ್ತಿಲ್ಲದಂತೆಯೆ
ಬಂದನರಮನೆಗಾಳ್ಗಳಾತನ ತೇಜವನು ಕಂಡು |
ವಂದಿಸುತ ಮಣಿದೊಳಗಿನ ಸಭಾ
ಮಂದಿರಕೆ ಹಾದಿಯನು ತೋರ್ದರು
ಮಂದಗತಿಯಿಂ ನಡೆದು ಥಟ್ಟನೆ ನಿಂತ ಬಾಗಿಲಲಿ ||೧||

ಆ ಸಮಯದಲಿ ಜೋಧಪುರಪತಿ
ಯಾಸನದ ಕೆಲದಲ್ಲಿ ಸಭ್ಯ ಸು
ವಾಸಿನೀ ಜನನಿಂದ್ಯೈ ನನ್ಹೀಜಾನ ವೇಶ್ಯೈಯಳು |
ಬೀಸಿ ಬಲೆಯಂ ಕುಳ್ಳಿದಳು ದು
ರ್ವಾಸನಾ ತಾಡಿತ ಮಹೀಶ್ವರ
ನಾ ಸುದತಿಯೊಡನೆಸಗಿದಂ ಪ್ರೇಮಾರ್ದ್ರ ಲೀಲೆಗಳ ||೨||

ತಟ್ಟನುದಿಸಿದ ಮಿಂಚಿನಂದದಿ
ದಿಟ್ಟ ಮುನಿವರ ಹೊಸ್ತಿಲಲಿ ಪದ
ವಿಟ್ಟುದಂ ಕಂಡೊಡನೆ ಭೂಪನ ಪ್ರೇಮಲೀಲೆಗಳ ।
ಹುಟ್ಟಡಗಿ ನಡುಗುತ್ತ ಕಂಗಳ
ನೆಟ್ಟು ನೆಲದಲಿ ಲಜ್ಜೆಯಿಂ ಮುಖ
ಸುಟ್ಟವೊಲ್ಬಾಡಿರಲು ವೇಶ್ಯೆಗೆ ಸನ್ನೆ ಮಾಡಿದನು ॥೩॥

ಮೋನೆ ಬಂದುದು ಜವದಿ ನನ್ನೀ
ಜಾನ ಕುಳಿತಳು ಬೆಚ್ಚಿದಾ ನೃಪ
ತಾನೆ ಕೈಯಿತ್ತದನು ಹೊರಿಸಿದ ಬೋಯಿಗಳ ಮೇಲೆ ।
ಈ ನಡೆಗಳಂ ನೋಡಿ ಪೂಜ್ಯ ತ
ಪೋನಿಧಿಯ ಮನ ಕುದಿದುದತಿ ಶೋ
ಕಾನುಭವದಿಂ ನಿಂತು ಬಾಗಿಲ ಬಳಿಯೆ ನಿಡುಸುಯ್ದು ॥೪॥

ಹತ್ತಿದಗ್ನಿಗೆ ಸಮನೆನಿಸಿ ಜ್ವಲಿ
ಸುತ್ತಿರಲು ಯತಿವರನ ನೇತ್ರಗ
ಳತ್ತ ನೋಡುವ ಧೈರ್ಯವಿಲ್ಲದೆ ಜೋಧಪುರಪಾಲ ।
ಉತ್ತಮಾಂಗವ ಮೇಲಕೆತ್ತದೆ
ಹೊತ್ತ ಲಜ್ಜಾಭೀತಿಯಿಂ ಕೆಲ
ದತ್ತ ನಿಂದನು ಬಳಿಕ ಯತಿವರ ಮುರಿದ ಮೌನವನು ॥೫॥

ತೀಡೆ ಸಾತ್ವಿಕಕೋಪ ಗುಡುಗನು
ಕೂಡ ಹಂಗಿಪ ಗಡಸುದನಿಯಿಂ
ಬಾಡಿಗೆಯ ಹೆಣ್ಣಿನಲಿ ಮೋಹವೆ ನಿನಗೆ ಛೀ! ಸಾಕು |
ಬಾಡಿದೀ ಯಶಮುಳ್ಳ ದೇಶದ
ಪಾಡಿಗಾನೆಂತಳಲಿ ಸಾಚಿಕೆ
ಗೇಡಿದಲ್ಲವೆ ನಿನಗೆ ರಾಜನ್! ಶೋಕ ಹಾ! ಯೆಂದ ||೬||

ಧಾರುಣೀಪತಿಯೆಂಬವಂ ಕ
ಠೀರವನ ಸಮ ಸೂಳೆಯರು ಹಲ
ವಾರು ಬಾಗಿಲಿಗಲೆವ ನಾಯ್ಗಳು ನೋಡು ಭೂಕಾಂತ |
ವೀರಸಿಂಹನ ಗವಿಯ ಪೊಗಲೀ
ದಾರಿನಾಯಿಗದೇನು ಕಾರ್ಯವೊ!
ಭೂರಮಣ ನಿಜ ವಂಶಕೀರ್ತಿಯ ಕೆಡಿಸಬೇಡೆಂದ ||೭||

ಅಸಹನೀಯವಿದಕಟ ವೇಶ್ಯಾ
ವ್ಯಸನಮೆಂಬೀ ಕೆಸರಿನಲಿ ಪದ
ಕುಸಿದುಬಿದ್ದರೆ ನಿನ್ನ ಕೀರ್ತಿಯ ಶುಭ್ರ ವಸ್ತ್ರದಲಿ |
ಮಸೆದುಕೊಳುವುದು ಪಾತಕದ ಕಲೆ
ಮುಸಣಯಾತ್ರೆಯೆ ಗೌರವಕೆ ನಿರು
ಕಿಸಿದ ತೊಳೆದುಕೊ ಜೀವನವ ಬೇಗೆಂದನಾ ಯತಿಪ ||೮||

ಮುಕ್ಕ ಶೋಕದಲಿಂತು ಗರ್ಜಿಸು
ತಕ್ಕಸಕ್ಕಕೆ ನಿಟ್ಟಿಸದೆ ಕೆಂ
ಪಿಕ್ಕಿದಾನನ ಸೂರ್‍ಯಮಂಡಳದಂತೆ ಜ್ವಳಿಸುತಿರೆ ।
ತಿಕ್ಕಿ ಕರತಳಗಳನು ಮುನಿವರ
ನಕ್ಕಟೆನ್ನುತ ನಡೆದ ಕಾಹುಗ
ರುಕ್ಕೆ ಭಯ ಸರಿದಬ್ಬ ! ಎನ್ನುತ ನಿಂದರೊಬ್ಬರಿಗೆ ॥೯॥

ಭೂಪ ಚಿಂತಾಭರದಿ ಕುಳಿತನು
ತಾಪಸೋತ್ತಮ ತಿರುಗಿ ನೋಡದೆ
ಕೋಪಶೋಕೋನ್ಮತ್ತನಂದದಿ ಶೀಘ್ರಗತಿಯಿಂದ ।
ಪ್ರಪರೀತ್ಯಾಚಾರ ಖಂಡಿಪ
ಚಾಪಬಾಣವ ಚಿಂತಿಸುತ ರಾ
ಜೋಪವನದಲ್ಲಿರ್ದ ತನ್ನಾಸನಕೆ ನಡೆತಂದ ॥೧೦॥

ಅಂದು ಯತಿವರ ನೆರೆದ ಭಕ್ತರ
ಮುಂದೆ ಪಲಸಲ ಪಿಡಿವ ಗದ್ಗದ
ದಿಂದ ನಮ್ಮೀ ದೇಶದಲ್ಲಿನ ಮಾನ್ಯಪದವಿಗಳ ।
ಮಂದಿ ಸಹ ದುರ್ನಡೆಯ ಕಾರಣ
ದಿಂದ ಹೊಲಸಾಗಿಹರು ನರತನು
ಹೊಂದಿದಾ ನಾಯಿಗಳೆಯಾಗಿಹರೆಂದು ನಿಡುಸುಯ್ದು ॥೧೧॥

ರುಚಿಸದಾದುದು ನಿದ್ರೆ ನಿಶೆಯಲಿ
ಸಚಿವನಾದ ಪ್ರತಾಪಸಿಂಹಗೆ
ರಚಿಸಿ ಪತ್ರವನೊಂದ ಭೂಪತಿ ನೀತಿಗೆಟ್ಟಿಹನು |
ಉಚಿತಮಲ್ಲಿದು ನೀನುಮುವನುಂ
ವಿಚರಿಪಿರಿ ಕಡುನೀಚರೋಗದಿ
ವಿಚಲಿಸುತ್ತಿದೆ ಶೋಕಭರದಿಂ ಹೃದಯವೆನಗೀಗ ||೧೨||

ವಾಸಿಪರು ಹದಿನಾರು ಲಕ್ಷ ನಿ
ವಾಸಿಗರು ನೀವಾಳ್ವ ದೇಶದ
ಲೇಸು ಮಂದಿಯಭರಣಪೋಷಣಭಾರ ಭುಜದಲಿರೆ |
ಕಾಸಿಗಲೆವಬಲೆಯರ ಕೂಟದಿ
ವಾಸಿಪಿರಿ ಸೀವಕಟ ನಿಮ್ಮಾ
ಹೇಸಿಗೆಯನಡೆ ಮಸಿಯ ಬಳಿಯದೆ ಭಾರತಿಯ ಮುಖಕೆ ||

ಮಾರವಾಡವಿದೊಂದೆ ಏತಕೆ
ಭಾರತಾವನಿ ಖಂಡವೇ ಹಿತ
ಕೋರುತಿರ್ಪುದು ನಿಮ್ಮ ಸದೃಶಭೂಪಕುಲದಿಂದ |
ಧೀರ ವಿಶ್ವಾಮಿತ್ರನಿಂ ರಘು
ವೀರ ತಾಂ ಕಲಿತಂತೆ ಶಿಷ್ಟಾ
ಚಾರವೆನ್ನಿಂ ಕಲಿಯಿರೆನ್ನುತ ಬರೆದನಾ ಮುನಿಪ ||೧೪||

ಪತ್ರವದನು ಪ್ರತಾಪಸಿಂಹ ವಿ
ಚಿತ್ರ ಶೋಕದಿನೋದಿ ಭರದಿಂ
ಕ್ಷತ್ರಿಯೋತ್ತಮ ಭೂಪ ಯಶವಂತಂಗೆ ಕಳುಹಿಸಲು |
ಚಿತ್ರಗೊಂಡಪಯಶವ ಕಂಡು ಧ
ರಿತ್ರಿಪತಿ ಕಡುನೊಂದು ಸುಯ್ದುಪ
ವಿತ್ರ ನನ್ಹೀಜಾನಳಿಂ ದೂರಾದ ದಿನದಿನಕೆ ||೧೫||

ಅತ್ತ ನನ್ಹೀಜಾನಳೆಂದರೆ
ತತ್ತರಿಪರಧಿಕಾರಿಗಳ್ಸಹ
ಪುತ್ತೆ ಮುನ್ನುಪದೇಶವಾಂತವನಾವನುಂ ಕೂಡ |
ಹೊತ್ತ ವೇಶ್ಯಾಂಗನೆಯುರಂ ಕೆಲ
ಕೊತ್ತರಿಸದಿರನೆಂಬ ವಾರ್ತೆಯ
ಹತ್ತು ಜನರಿಂದಾಲಿಸಿರ್ದಳು ಮೊದಲೆ ಲಲಿತಾಂಗಿ ||೧೬||

ಮತ್ತೆ ಕಂಗಳ ಮುಂದೆ ಕಮಲವ
ಕಿತ್ತು ಮದಗಜ ಬಿಸುಡುವಂದದಿ
ಚಿತ್ತದಿಂ ಹೊರವಡಿಸಿ ತನ್ನನು ಭೂವಧೂಕಾಂತ |
ಕಿತ್ತೊಗೆವ ದಿನ ಹತ್ತಿರವೆ ಕಾ
ಣುತ್ತಿರಲು ಕರತಳವನುಜ್ಜುತ
ಮತ್ತಕಾಶಿನಿ ನನ್ಹಿಜಾನಳು ಕಡಿವಳಾಡುಗಳ ||೧೭||

ರಾಣಿಯರಿಗಂ ಸಿಗದ ಗೌರವ
ಕಾಣಿಯಾಗುವುದಲ್ತೆ ಭಾಗ್ಯದ
ದೋಣಿಯನೆ ಮುಳುಗಿಸಿದನಲ್ತೇ ತಿರಿವ ವೈರಾಗಿ ।
ನೇಣಿಡದೆ ಬಿಡಲೊಲ್ಲನೀತನ
ಗೋಣಿಗೆಂದಾ ನನ್ನಿಜಾನಳು
ಬಾಣಗಳನರಸುತ್ತಲಿರ್ದಪಳೆದೆಯ ಚೀಲದಲಿ ॥೧೮॥

ಖತಿಯ ಕೆಂಡವ ಋಷಿಯ ಭಕ್ತರ
ತತಿಯ ಕಂಬನಿಯಿಂದ ತಂಪಿಪ
ಮತಿಯ ನನ್ನೀಜಾನಳುರಿದುರಿದೊಂದುದಿನ ಮನೆಗೆ ।
ಯತಿಪನಲಿ ಕನಲಿರ್ದ ವೈಷ್ಣವ
ಮತದವರನುಂ ಮುಸ್ಲಿಮರನುಂ
ಚತುರತನದಿಂ ಕರೆಸಿ ಸಂಚನು ಹೂಡಿದಳು ಭರದಿ ॥೧೯॥

ಘೋರ ಸಂಚನು ನಡೆಸಿ ತದ್ಯತಿ
ವೀರನಡುಗೆಯ ಗೈವ ವಿಪ್ರನ
ನೇರದಿಂ ಬರಮಾಡಿ ತನ್ನಾಲಯಕೆ ತದ್ಯುವತಿ ।
ಪಾರವಿಲ್ಲದ ಧನದ ಲೋಭವ
ತೋರಿದಳು ದ್ವಿಜವಂಶಕೀರ್ತಿಕು
ಠಾರನು ಜಗನ್ನಾಥ ಪಾಚಕ ಸೋಲ್ದ ನಿಜಮನವ ॥೨೦॥

ಎಂದಿನಂದದೆ ಯತಿಪ ಪಾಚಕ
ನಿಂದ ಹಾಲನುಕೊಂಡು ಕುಡಿದನು
ಚಂದದಿಂ ಗೊತ್ತಾದ ಕಾಲಕೆ ಮಲಗಿ ಹಾಸಿನಲಿ |
ಒಂದೆರಡು ಗಂಟೆಗಳು ನಿದ್ರಿಸಿ
ಕಂದೆರೆದು ತನ್ನುದರ ಕಡಿವುದ
ನಂದಿರುಳಲೀಕ್ಷಿಸಿದ ಬಳಿದುದು ನೋವು ಚಣಚಣಕೆ ||೨೧||

ವಾಂತಿಯಾದುದು ಮೂರುಸಲ ನೋ
ವಾಂತ ಯತಿವರ ದಿನಪನುದಯಕೆ
ತಾಂ ತಲೆಯದೋಲೆತ್ತಿ ಮಿಸುಕಿತು ಜಠರ ಬಿರುಸಿಂದ |
ಶಾಂತಿಗೋಸುಗವಾಗ ಮುನಿಭೂ
ಕಾಂತ ತಿಳಿನೀರ್ಕುಡಿದು ತಾನೇ
ವಾಂತಿಗೈದನು ಮನಕೆ ತೋರಿದುದೇನೊ ಸಂದೇಹ ||೨೨||

ಎಂದಿನೊಲ್ಸುಳಿದಾಡೆ ಪೋಗದೆ
ನಿಂದು ಕುಟಿಯಲಿ ಬಳಿಗೆ ಭಕ್ತ
ವೃಂದವಂ ಬರಮಾಡಿ ಹವನವನೆಸಗಿರೆಂದೊರೆದು |
ಅಂದು ಪ್ರಾತಃಕಾಲ ಯತಿವರ
ನೊಂದು ಮಲಗಿದನೇಕೊ ಗುರುವರ
ಕಂದಿರುವನೆಂದಳಲಿ ಹವನವ ಗೈದರಾ ಜನರು ||೨೩||

ತೊಳಸತೊಡಗಿತು ಜಠರ ಶೂಲದ
ಛಳಕು ಜನಿಸತಿಸಾರಮಾದುದು
ಕಳೆಯಳಿದು ಯತಿರಾಜ ತನ್ನಯ ತಲ್ಪದಲ್ಲಿರಲು |
ಬಳಿಕ ವೈದ್ಯನು ಸೂರ್‍ಯಮಲ್ಲನು
ಬಳಿಗೆ ಬಂದನು ಮುನಿಪ ಕಷ್ಟವ
ತಿಳುಹಿ ನಕ್ಕನು ಮೋಡದೊಳಗಂ ನಗುವ ರವಿಯಂತೆ ||೨೪||

ದೇಹದಾ ವೇದನೆಯೊಳಂ ನಿ
ರ್‍ಮೋಹ ನಗುತಿರೆ ವೈದ್ಯ ಚಿಂತಿಸು
ತೋಹೊ! ತಾವೃಷಿಜನರು ತಾವೀ ರಾಕ್ಷಸಾವನಿಗೆ |
ಕಾಹಿರದೆ ನಡೆತಂದಿರೇಕೋ
ತ್ರಾಹಿ! ಎನುತೌಷಧವ ಕುಡಿಸಿದ
ನೂಹಿಸಿದ ಪರಿಣಾಮವಾಗದೆ ಬಲಿದುದಾ ಬೇನೆ ||೨೫||

ಈ ಪರಿಯಲಾ ಯತಿಪ ನರಳೆ ಪ್ರ
ತಾಪಸಿಂಹಗೆ ತಿಳಿದುದು ಚಿಕಿ
ತ್ಸೋಪಚಾರಕೆ ವೈದ್ಯನಲಿಮರ್ದಾನಖಾನನನು |
ತಾಪಸೋತ್ತಮನೆಡೆಗೆ ಕಳುಹಿದ
ನೃಪನಿಂ ಮುನಿರಾಜ ಕೇಳಿದೊ
ಡಾ ಪುರುಷನು ವಿರೇಚನೌಷಧವಿತ್ತು ಬೀಳ್ಕೊಂಡ ||೨೬||

ಆ ದಯಾನಂದಂಗೆ ಭೀಕರ
ವಾದುದು ವಿರೇಚನ ಬಿಡದೆ ಯತಿ
ಭೂಧವಗೆ ದಿನದಿನಕೆ ಮೂವತ್ತಾರಕಿಂ ಮೇಲೆ |
ಭೇದಿಯಾರಂಭಿಸಿತು ಸಲಸಲ
ಬಾಧೆಯಿಂ ಬಳಲುತ್ತ ಮೂರ್ಛಿತ
ನಾದಪಂ ಬಲವಳಿದು ಕುಗ್ಗಿತು ಕಾಂತಿ ಚಣಚಣಕೆ ||೨೭||

ಕಳೆಯಲಿಂತೊಂಬತ್ತು ದಿನಗಳು
ಕಳೆಯಡಗಿ ಬಲಮುಡುಗಿ ಯತಿಪನ
ಚಳದ ಬಾಲಬ್ರಹ್ಮಚರ್ಯದ ವಜ್ರದೇಹವದು |
ಹುಳುಪಿಡಿದ ಮರದಂತೆ ಮುದುಡಿದು
ದೊಳಗೆ ಸಂಗತಿಯರಿತೊಡಂ ಸಹ
ಬಳಿಯವರಿಗಂ ವಿಷದ ವಾರ್ತೆಯನಿನಿಸು ಕುಡಲಿಲ್ಲ ||೨೮||

ಹತ್ತನೆಯ ದಿನ ಬೇರೆ ಭಕ್ತರ
ನೆತ್ತೊ ಕಳುಹಿಸಿ ತನಗೆ ಕಟುವಿಷ
ವಿತ್ತ ಪಾಚಕನನ್ನು ಕರೆಯಿಸಿ ತನ್ನ ಹತ್ತಿರಕೆ |
ಇತ್ತ ಬನ್ನಿರಿ ಬೆದರಬೇಡಿರೆ
ನುತ್ತ ಕೋಮಳವಾದ ನುಡಿಯುಸಿ
ರುತ್ತ ಮಂಚದಿ ಮಲಗಿಕೊಂಡನು ನೊಂದ ಯತಿರಾಜ ||೨೯||

ಹುರಿಯ ಮೀಸೆಯ ಕರಿಯ ವದನದ
ತಿರುಹು ಜುಟ್ಟಿನ ನೆಲವ ನಿಟ್ಟಿಪ
ಬೆರಗುಗಂಗಳ ಮೇಲುಗಚ್ಚೆಯ ಭೀತ ಬಾಣಸಿಗ ।
ವರ ಯತೀಶ್ವರನಿಂತು ಕರೆಯಿಸೆ
ಥರಥರನೆ ನಡುಗುತ್ತ ಭಗವನ್ !
ಮರುಳನಾದೆನು ಕ್ಷಮಿಸಿರೆಂದುರುಳಿದನು ಭಯದಿಂದ ॥೩೦॥

ಪರಮಕರುಣಾವನಧಿ ಋಷಿಭೂ
ವರನು ಹಾಸಿಂದೆತ್ತಿ ಮೇಲಕೆ
ಶಿರವ ಕನಿಕರದಿಂದ ಕರದಿಂದವನ ಮೈವಡವಿ ।
ಮರುಗದಿರಿ ಮುಂದಾಗಲಿರ್ಪುದ
ಧರಣಿಯಲಿ ತಪ್ಪಿಸುವರಾರೈ
ಕೆರಳೆ ನಾಂ ನಿಮ್ಮಲ್ಲಿ ನಾಂ ಸನ್ಯಾಸಿಯಹೆನೆಂದ ॥೩೧॥

ಪಾತಕಿಯೊ ವರ ಪುಣ್ಯಶಾಲಿಯೊ
ಘಾತುಕನೊ ನಿಜ ಜೀವದಾತನೊ
ಏತಕದು ಸನ್ಯಾಸಿಗಳು ನಾವೆಮಗೆ ನರರೆಲ್ಲ ।
ಆತುಮಗೆ ಸಮನಹರು ನಿಮ್ಮೀ
ಪಾತಕವ ನಾವಾರ್ಗಮರುಹೆವು
ಕಾತರಿಸದಿರಿ ಕಳೆದ ಕಾರ್ಯಕೆ ಸಖರೆ ನೀವೆಂದ ॥೩೨॥

ಹೋಗಲಿದಕಳಬೇಡಿ ನಾಂ ಮೃತ
ನಾಗೆ ನನ್ನಯ ಕಾರ್ಯ ತೀರದೆ
ಹೋಗಿ ಲೋಕದ ಹಿತಕದೆಂತಹ ಹಾನಿಯಹುದೆಂದು |
ಈಗ ತಿಳಿಯದೆ ಹೋದಿರಲೆ ಮುಂ
ದಾಗಲಿರ್ಪುದನಾರು ಬಲ್ಲರು
ಬೇಗ ನಾಂ ತಿಳಿಪಂತೆ ನಡೆಯಿರಿ ಶೋಕ ಬೇಡೆಂದ ||೩೩||

ಆ ವಿಧಾತನ ವರ ವಿಧಾಸದಿ
ಸಾವು ನನಗೀಪರಿಯೆ ಬರಲಿರೆ
ನೀವು ಮಾಡುವುದೇನು ನಿಮ್ಮಯ ದೋಷವೆತ್ತಣದು |
ನೋವು ಚಿತ್ತಕೆ ಬೇಡ ನಾಂ ನಿಮ
ಗೀವೆ ಮಾರ್ಗವ್ಯಯಕೆ ಧನವನು
ನೀವು ದೇಶಾಂತರಕೆ ನಡೆದಪುದೆಂದನಾ ಯತಿಪ ||೩೪||

ಜೋಧಪುರ ರಾಜ್ಯವನು ಬೇಗನೆ
ಹಾದು ನೇಪಾಳವನು ಸೇರಿದ
ರಾದಪುದು ಸಖ ಜೀವರಕ್ಷಣಮಿತ್ತ ಭೂಪಂಗೆ |
ಗೈದ ನಿಮ್ಮಪರಾಧ ತಿಳಿದರೆ
ಬಾಧೆಯಪ್ಪುದು ನಿಮ್ಮ ಕುಲವನೆ
ಮೇದಿನಿಯಿನಳಿಸುವನು ಬೇಗನೆ ಹೋಗಿ ನೀವೆಂದ ||೩೫||

ಸುಟ್ಟೊಡಂ ಶ್ರೀಗಂಧ ತನ್ನನು
ಸುಟ್ಟವಗೆ ಸಿಹಿಗಂಪನೀಯದೆ
ಹೊಟ್ಟೆಯಲಿ ವಿಷವಿಟ್ಟು ತನ್ನಯ ಜೀವವನೆ ಕಸಿದ ।
ಭಟ್ಟನಂ ಸಹ ಮುನಿಪ ಧನ ಕೈ
ಗಿಟ್ಟು ಜೀವನ ದಾನಗೈದನು
ತಟ್ಟುವುದೆ ಸನ್ಯಾಸಿಯಪ್ಪಗೆ ಭೇದಗಳ ಬೆಂಕಿ ॥೩೬॥

ಕೊಂಚವುಂ ಕುದಿಗೊಳದೆ ಪಾತಕಿ
ಯಂ ಚತುರ ಮುನಿಪಾಲ ಹರಸುತ
ಮಂಚದಲಿ ಮಲಗಲ್ಕೆ ವಿಷದಾತನು ಜಗನ್ನಾಥ ।
ಸಂಚನೆಲ್ಲವ ನೆನೆದು ಮೇಲುದ
ದಂಚಿನಿಂ ಕಂಬನಿಯನೊರಸುತ
ಸಂಚಲಿತ ಶೋಕದಲಿ ಮುನಿಪದಕುರುಳಿ ರೋದಿಸಿದ ॥೩೭॥

ಹಾ ಜಗದ್ಗುರು ಧೂರ್ತವಚನಕೆ
ಸಾಜದಲೆ ನಾಂ ಸೋಲ್ದು ಪಾದಸ
ರೋಜಕಹಿತವಗೈದೆ ಬ್ರಹ್ಮದ್ರೋಹಿ ನಾನಾದೆ ।
ಸೋಜಿಗಂ ತಾವಾದರೋ ಕರು
ಣಾಜಲಧಿ ! ವಿಷವಿತ್ತ ನನಗಂ
ನೈಜಮಾಗಿಯೆ ಜೀವದಾನವನಿತ್ತಪಿರೆ ! ಎಂದ ॥೩೮॥

ಕರೆದು ಕಂಬನಿಗಳನು ಪದತಳ
ಕುರುಳಿ ಗದ್ಗದದಿಂದಲೀಪರಿ
ಕೊರಗಿ ದೋದಿಪ ವಿಪ್ರನಂ ನೈದಡವಿ ಮುನಿನಾಥ |
ಮರಣವಿರದಾರ್ಗಕಟ ನಿಮ್ಮನು
ಪರಮದೇವಂ ಸಲಹಲೆಲ್ಲಿಡೆ
ತೆರಳಿರೆನ್ನುತ ಮಲಗಿಕೊಂಡನು ಮರಳಿ ಮೌನದಲಿ ||೩೯||

ವೈದ್ಯದಲಿಮುದಾರ್ನಖಾನನು
ಮಾದ್ಯ ವೈರದ ನನ್ನಿಜಾನಳೊ
ಳಾದ್ಯುತಿಮದಜಿತೋಚ್ಚಕೀರ್ತಿಯ ಮುನಿಯ ಸಂಹರಿಸೆ |
ಸೋದ್ಯಮಂ ತಾನೆನಿಸಿ ರುಗ್ಣಗ
ಖಾದ್ಯದೌಷಧವಿತ್ತು ದುಃಸಂ
ಪಾದ್ಯ ದೈವೀಜೀವಮೊಂದನು ತೀರ್ಚೆ ಹವಣಿಸಿದ ||೪೦||

ಈ ರಹಸ್ಯವನರಿಯಲಾರದೆ
ಭೂರಮಣನುಂ ಮೋಸವೋದನು
ಧೀರಮುನಿಪಗೆ ಬಲಿದುದುದರದ ನೋವು ದಿನದಿನಕೆ |
ಮೀರಿದುದು ಬಿಕ್ಕಳಿಕೆ ರುಧಿರವ
ಕಾರುತಿಹ ಹುಣ್ಣುಗಳು ದಿವ್ಯಶ
ರೀರದೆಲ್ಲೆಡೆ ಮೊನೆತುಕೊಂಡುವು ಬೆಳೆದುದಾ ರೋಗ ||೪೧||

ದಿನಕೆ ಮೂವತ್ತಾರಕಿಂ ಮೇ
ಲೆನಿಸಿ ದಿನದಿನ ಭೇದಿಯಾದುದು
ಮುನಿಪ ಮೂರ್ಛಿತನಾದಪಂ ಸಲಸಲಕೆ ನೋವಿನಲಿ |
ಕೊನೆಗೆ ಭೀಕರ ರೋಗದಿಂ ಮುನಿ
ಜನಪ ನರಳುವ ವಾರ್ತೆಯೆಂತೋ
ಜನರ ಕಿವಿಗಳ ಸೇರಿ ಕಳವಳವಾಯ್ತು ದೇಶದಲಿ ||೪೨||

ಬಂದು ಭಕ್ತನದೊರ್ವನಜಮೀ
ರಿಂದ ಯತಿಪಂಗೆರಗಿ ಗದ್ಗದ
ದಿಂದ ಭಗವನ್ ಭಕ್ತಸಂಕುಲಕಿದರ ಸಂಗತಿಯ |
ಇಂದುವರೆಗಮದೇಕೆ ಕೊಡಲಿ
ಲ್ಲೆಂದು ಬೆಸಗೊಳೆ ಹರಿವ ಕುಡಿನಗೆ
ಯಿಂದಲಾತಂಗಿಂತು ನುಡಿದನು ಯತಿ ದಯಾನಂದ ||೪೩||

ಕಂದ ಭೌತಿಕ ತನುಗಳಂ ರುಜೆ
ಬಂಧಿಪುದು ಬಿಟ್ಟಿಪುದು ಸಹ ಹೊಸ
ದೊಂದು ನೂತನವಲ್ಲ ಹರ್ಷದ ವಾರ್ತೆ ಸಂದಿರಲು |
ಅಂದೆ ತಿಳುಹುತಲಿರ್ದೆ ನಿಮ್ಮೆದೆ
ಗುಂದಿಸುವ ರುಜೆಬಂದ ಕತೆಯೇ
ನೆಂದು ಬಣ್ಣಿಸಬೇಕು ವ್ಯರ್ಥದಲೆಂದನಾ ಯತಿಪ ||೪೪||

ಬಳಿಕ ರೋಡಮನೆಂಬ ವೈದ್ಯನು
ಬಳಿಗೆ ಬಂದನು ಯತಿಪನಾತಂ
ಗೆಳನಗೆಯ ಸೂಸುತ್ತಲಾಬೂ ಪರ್ವತಕೆ ಹೋಗಿ |
ಉಳಿಯ ಬಯಸುವೆವೆನಲು ನಿಜಕರ
ಗಳ ಮುಗಿದು ರೋಡಮನು ಭಗವನ್ !
ಒಳಿತು ತಂಬೆಲರಿಂದ ಲಾಭಮೆಯಹುದು ಪದಕೆಂದ ||೪೫||

ಅಂದು ಸಂಜೆಯೆ ಋಷಿವರ ದಯಾ
ನಂದನಾಬೂ ಗಿರಿಗೆ ಪೋದವು
ದೆಂದು ಸನ್ನಾಹಗಳು ನಡೆದುವು ನಡುವಗಲಮೇಲೆ |
ನೊಂದ ಯತಿಪದಪದ್ಮದರ್ಶನ
ಕೆಂದು ಜೋಧಪುರಾಧಿಪತಿ ನಡೆ
ತಂದೆರಗಿದಂ ಜರ್ಜರಾಂಗ ಯತೀಶನಡಿಗಳಿಗೆ ||೪೬||

ಸೊರಗಿ ವಜ್ರಸಮಾನ ದೇಹಮೆ
ಕೊರೆದ ಮೂಳೆಯ ಗೂಡಿನಂತಿದೆ
ಮೆರೆದ ಪುಷ್ಟಿಯ ಮಾಂಸಖಂಡಗಳೆಲ್ಲವುಂ ಕರಗಿ |
ಪರಮಹಂಸನ ಭವ್ಯತನುವಿದೆ
ಯರರೆ ! ಎಂಬಂತಿಹುದು ಭೂಮೀ
ಶ್ವರನದನು ಕಂಡುಗುವ ಗದ್ಗದದಿಂದ ಹಾ ! ಯೆಂದ ||೪೭||

ರೋಮರೋಮಸ್ಥಾನದೊಳಗಂ
ಪಾಮುನಿಯಕಾಯದಲಿ ರುಧಿರ
ಸ್ತೋಮ ಚಿಮ್ಮುವ ಹುಣ್ಣುಗಳು ಸೇರಿದುಕ್ಕಿ ಬಸಿಯುತಿವೆ |
ಭೂಮಿಪಂ ನೋಡುತಿರೆ ಬಿಡುವಿರ
ದಾ ಮುನಿಪ ಬಿಕ್ಕಳಿಸುತಿರ್ದನು
ಹಾ! ಮಹಾತ್ಮ! ಎನುತ ಭೂವರ ಮಿಡಿದ ಕಂಬನಿಯ||೪೮||

ಮುನಿಪ ನರಪನ ಸಂತವಿಸಿದನು
ಜನರು ಪಲ್ಲಕ್ಕಿಯನು ತಂದರು
ಮನೆಯ ಮಹಡಿಯಮೇಲೆ ಮಲಗಿದ ಮುನಿಯ ಮೆಲಮೆಲನೆ |
ವಿನಯದಿಂ ನಿಜಕರತಳಂಗಳ
ಲನುವಿನಿಂ ಕುಳ್ಳಿರಿಸಿ ತಂದರು
ಮನೆಯ ಕೆಳಗಡೆ ತೇಜಸಿಂಹ ಪ್ರತಾಪಸಿಂಹದಿರು ||೪೯||

ಒಡಲತಾಳಿದ ಶಕ್ತಿಯೇ ಹದ
ಗೆಡುತ ಕೆಳಗಿಳಿದಂತೆ ಮುನಿಜನ
ಪೊಡವಿಪಾಲಕನಿಂತು ಪರಭುಜಗಳನು ತಾನಡರಿ |
ಕಡುದಣಿವಿನಿಂ ಮೇಲುಸಿರ್ಗಳ
ಬಿಡುತ ಕೆಳವರೆ ನೆರೆದ ಮಂದಿಯ
ಕಡಲು ಹಾಹಾರವವ ಘೋರ್ಗರೆದಿತ್ತು ಶೋಕದಲಿ ||೫೦||

ಮಲ್ಲರಂ ಭಂಗಿಸುವ ಕರಡಿಗೆ
ಹುಲ್ಲ ಮೇಯಿಪ ಮೊರೆವ ಸಿಂಹನ
ಸೊಲ್ಲನಡಗಿಪ ಕುದುರೆವಂಡಿಯನೆಡದ ಕೈಯಿಂದ |
ನಿಲ್ಲಿಸುವ ವಜ್ರಾಂಗಯಾತಿಪಂ
ಗಿಲ್ಲಿಳಿವ ಸಾಮರ್ಥ್ಯಮಿಾದಿನ
ವಿಲ್ಲವಾಯ್ತುಕಟೆಂಬ ಜನರವ ಬಿರಿದುದಂಬರವ ||೫೧||

ಘೋರವಿಷಜರ್ಜರಿತ ದೇಹದ
ಧೀರಮುನಿವರ ಶಕ್ತಿ ಸಾಲದೆ
ಸಾರಿಬಹ ಯಶವಂತಸಿಂಹನ ಭುಜವನಾಶ್ರಯಿಸಿ |
ತೀರದಾಯಾಸದಲಿ ಸುಯ್ಯುತ
ಲೇರಿದಂ ಪಲ್ಲಕ್ಕಿಯನು ತ
ದ್ಭೂರಮಣ ಬಳಿನಿಂತು ಕಂಬನಿಮಿಡಿದನಂಬರದಿ ||೫೨||

ನಡೆವ ಸಮಯಂಬರಲು ಶೋಕದಿ
ಪೊಡವಿಪತಿ ಯಶವಂತಸಿಂಹನು
ಪಿಡಿದ ಶೋಕದ ಭರದಿ ಭಗವರ್ ತಮ್ಮ ದೈವಿಕದ |
ಒಡಲನೀಪರಿ ಕಾಡಿ ಹಿಂಗಿಪ
ಸಿಡಿವ ವೇದನೆ ನನ್ನ ಮಸ್ತಕ
ಕಿಡಿದ ತೀವ್ರ ಕಳಂಕವೆಂದೇ ಭಾವಿಸುವೆನೆಂದ ||೫೩||

ಮುಂದೆ ಪೂರ್ಣಸ್ವಸ್ಥರಾಗುತ
ವಂದಿತಾತ್ಮರು ನಮ್ಮ ಪತ್ರ್ತನ
ದಿಂದ ನಡೆದಿರಲೆಮಗೆ ಸಂತಸ ಲಭಿಸುತಿರ್ದುದಲೆ |
ಸುಂದರಾಶಯವಿಂದು ಮನದಲೆ
ನಿಂದುದಲೆ ಹಾ! ದೇವ! ಎಂದು ವ
ಸುಂಧರಾಧಿಪ ಗದ್ಗದದಿ ಮುನಿಪದಕೆ ಬಾಗಿದನು ||೫೪||

ಇಂತಡಿಗೆ ತಲೆಬಾಗಿಸಿದ ಯಶ
ವಂತಸಿಂಹನ ಹರಸುತಾ ಮತಿ
ವಂತ ಯತಿವರನೇಕೆ ನೋಯುವೆ ಬರಿದೆ ಭೂಕಾಂತ |
ಎಂತಹನಿಗಂ ರೋಗ ಬೆಂಬಿಡ
ದಂತಿಹುದು ಭೌತಿಕ ಶರೀರದಿ
ನಿಂತ ವ್ಯೆಮೆಯುದೇನು ರಾಜನ್! ಮರುಗಬೇಡೆಂದ ||೫೫||

ಬಿಸಿಲು ನೆಳಲುಗಳಂತೆ ದೇಹಕೆ
ಪೊಸೆದಿಹುದು ಘನರೋಗ ಭೌತಿಕ
ವಿಸರದೀ ಭವನದಿ ವಿಕಾರಗಳಾದರೀ ನುಡಿಗೆ |
ಕೊಸರಬೇಕೇತಕ್ಕೆ ರಾಜನ್!
ನಸುವುಮಳದಿರು ನಿನ್ನೊಸಗೆ ಸಂ
ತಸವ ತಂದುದು ನಮಗೆ ಶೋಕವದೇಕೆ ನಿನಗೆಂದ ||೫೬||

ಅಂಬರವನಕ್ಷಾಂಬು ನೆನೆಯಿಸಿ
ತಂಬರವನಾರ್ತಧ್ವನಿ ಬಿರಿಸಿತು
ನಂಬರವನೇ ಮುನಿಪನೆಂಬುದ ಮುಂದಿ ಬೋಯಿಗಳು ।
ಕಂಬ ರವದಿಂದೆತ್ತಿದರು ಮು
ತ್ತಂಬರವ ಯತಿಪಂಗೆಣಿಸಿ ಭೂ
ಪಂ ಬರವನೆದೆ ಸೂಚಿಸುತ್ತಿರೆ ಮಣಿದ ಮುನಿಪದಕೆ ॥೫೭॥

ಕೊನೆಗೆ ನೃಪನಿಂತವರರೊಂದಿಗೆ
ಮುನಿಪನಡಿದಾವರೆಗೆ ವಂದಿಸಿ
ವಿನತಮಸ್ತಕನಾಗಿ ಮಿಡಿಯುತಲಶ್ರುಬಿಂದುಗಳ ।
ಮನವಿಚಲಿಸುತ್ತಿರಲು ತಾನುಪ
ವನದ ಬಾಗಿಲತನಕ ಮೌನದಿ
ಜನರ ಸಂಗಡ ಬರಿಯ ಪದದಲಿ ನಡೆದ ಮೆಲಮೆಲನೆ ॥೫೮॥

ಇಂತು ಭೀಕರರೋಗ ಜಲದದ
ಹಂತಿ ತಿಳಿನಗೆಬೆಳಕುಗಳ ಬಿಡ
ದಂತೆ ಕವಿದಿರೆ ಭಕ್ತಹೃತ್ಕುಮುದಂಗಳಳುಕುತಿರೆ ।
ಅಂತಿಮತ್ಯಾಗಾರುಣೋದಯ
ವಂತಿಳಿಪ ಬಗೆಯಿಂದ ನಡೆದನು
ಸಂತವನಧಿ ಸುಧಾಕರಂ ಕರೆಗುಡಲು ಪರಮಾತ್ಮ ॥೫೯॥

॥ ಇಂತು ಇಪ್ಪತೊಂದನೆಯ ಸಂಧಿ ॥



# ಇಪ್ಪತ್ತೆರಡನೆಯ ಸಂಧಿ

**ಸೂಚನೆ—ವೀರಯತಿ ಕಂಠೀರವಂ ಮದ**
**ವಾರಿಸಘುಕರಿಗಳಿಗೆ ವಿಭುಕಾಂ**
**ತಾರದಲಿ ಹುದುಗಿದನು ಗುಡುಗಿಸಿ ಸಕಳ ಭೂತಳವ ‖**

ಮತ್ತೆ ಬಾಲರಿ ಪೇಳಲೇಂ ನೃಪ
ನತ್ತ ಘೋರನಿರಾಶೆಯಲಿ ಬಳ
ಲುತ್ತ ತನ್ನರಮನೆಯಸೇರಿದನಿತ್ತ ಯತಿಪಾಲ ।
ಹೊತ್ತ ಯಾನದಲೊರಗಿ ಮೆಲ್ಲನೆ
ಹತ್ತುತಿರಲಾಬೂಗಿರಿಯ ಕೆಲ
ದತ್ತ ಲಕ್ಷ್ಮಣದಾಸ ವೈದ್ಯನು ಪಥದಿ ಸಂಧಿಸಿದ ‖೧‖

ದಾರಿ ಮಗ್ಗುಲಿಗಿಟ್ಟ ಮೇನೆಯ
ಲಾರೊ ಕಾಷಾಯಾಂಬರದ ಯತಿ
ತೋರಿಬರುತಿಹ ಮೂರ್ಛೆಯಲ್ಲೊರಗಿರ್ಪ ರೀತಿಯಲಿ ।
ಬಾರಿಬಾರಿಗೆ ನುಸುಳುತಿದೆ ಮಲ
ವಾರುತಿದೆ ಬಾಯ್ಕಣ್ಣು ಬಿಗಿದಿದೆ
ಯಾರಿವರ್ಗಡಮೆನುತ ಲಕ್ಷ್ಮಣದಾಸ ಬೆಸಗೊಂಡ ‖೨‖

ಎಂದುದಕೆ ನರನೊರ್ವ ಗದ್ಗದ
ದಿಂದ ಭೂವಿಖ್ಯಾತರು ದಯಾ
ನಂದ ಸರಸತಿಯಿವರೆನಲು ಲಕ್ಷ್ಮಣನು ಹೌಹಾರಿ |
ಎಂದಿರೇನಕಟಕಟ ವಂದ್ಯರಿ
ಗಿಂದಿದೇಂ ಸ್ಥಿತಿಯಾದುದೆನ್ನುತ
ಲಂದು ದನಿದೆಗೆದತ್ತು ಕಂಬನಿಗರೆದು ಬಲುನೊಂದ ||೩||

ಬಳಿಕ ಲಕ್ಷ್ಮಣದಾಸನೌಷಧ
ಗಳ ತೆಗೆದು ಪುಡಿಯೊಂದನಾ ಯತಿ
ಕಳೆದ ಬಾಯೊಳು ಸುರಿಯೆ ತಟ್ಟನೆ ಮುನಿಪ ಕಂದೆರೆದು |
ಅಳಿಯುತಿರ್ದೆನು ನಾನು ಗಡ ಬಾ
ಯೊಳಗದಾರೋ ಸುಧೆಯ ಸುರಿಸಿದ
ರುಳಿದು ಕೊಂಡೆನೆನುತ್ತ ನುಡಿದನು ನಿಟ್ಟುಸಿರಿನೊಡನೆ ||೪||

ಆದಕೆ ಭಕ್ತನದೊರ್ವ ನಯದಿಂ
ಸದಯ ಗುರುವರ! ತಮ್ಮ ಶುಭಪದ
ಪದುಮ ಸೇವಕರಿವರು ಪಂಚನದೀಯರಾನತರು |
ಒದಗಿದೀ ದುಃಸ್ಥಿತಿಗೆ ಭಗವನ್!
ಎದೆತೆರೆದು ರೋದಿಸುವರಾಶೀ
ರ್ವದಿಪುದೆನೆ ಋಷಿರಾಜ ಮೈದಡವಿದನು ಲಕ್ಷ್ಮಣನ ||೫||

ವಿನಯಿ ಲಕ್ಷಣದಾಸ ತನ್ಮುನಿ
ಜನಪನಡಿಗಳಿಗೆರಗಿ ತಾಂ ಕಂ
ಬನಿಯಿನದ ತೊಳೆಯುತ್ತ ಕಂಪಿಸಿ ಮುನಿಯ ದುಃಸ್ಥಿತಿಗೆ |
ಮುನಿಪ ನೋವೀಗೆಂತಹುದೊ ಪದ
ಕೆನಲು ಯತಿವರ ನಗುತ ವತ್ಸನೆ!
ನನಗೆ ಬಹು ನೋವಿಲ್ಲವೆಂದನು ಧೈರ್ಯಮುದಿಪಂತೆ ||೬||

ಸಂತವರನಿಂತೆನಲು ವಿದ್ಯಾ
ವಂತ ವೈದ್ಯನು ಮುನಿಯ ವೇದನೆ
ಯಂ ತಿಳಿದು ನಡುನಡುಗಿ ತನ್ನಯ ಕಾರ್ಯ ಲೆಕ್ಕಿಸದೆ |
ಹಿಂತಿರುಗಿ ಗಿರಿಗಡರಿ ಗುರುಬಳಿ
ನಿಂತು ತಾನೆ ಚಿಕಿತ್ಸೆಯೆಸಗಲು
ನಿಂತುದತಿಸಾರಂಗಳಡಗಿತು ಸುಳಿದ ಬಿಕ್ಕಳಿಕೆ ||೭||

ಮುನಿಪದಾಂಬುಜ ಸೇವೆಗೋಸುಗ
ವಿನಯಿ ಲಕ್ಷ್ಮಣದಾಸನೋಲೆಯ
ನನುಗೊಳಿಸಿ ತಾಂ ಮೇಲಣಧಿಕಾರಿಯನು ಸಂಧಿಸುತ |
ತನಗೆ ಹಲದಿನ ಬಿಡುವ ಕರುಣಿಪು
ದೆನುತ ಯಾಚಿಸಲವನದಕೆ ಮನ
ವನು ಕೊಡದೆ ಸಲದೆಂದು ತಿಳುಹಿದ ಭಕ್ತ ಲಕ್ಷ್ಮಣನ ||೮||

ಅದಕೆ ನೊಂದಾ ಲಕ್ಷ್ಮಣಂ ಕಡು
ಕುದಿದು ರಚಿಸಾ ತ್ಯಾಗಪತ್ರವ
ನಿದೆ ತಿಲಾಂಜಲಿಯೀವೆ ಕಾರ್ಯಕೆನುತ್ತ ನಡೆದಿರಲು |
ಸದಯ ಯತಿಯದ ಕಂಡು ನಿನ್ನ
ಭ್ಯುದಯವೆನ್ನಿಂ ಕೆಡುವುದನುಚಿತ
ವಿದೆನುತದ ಹರಿದೆಸೆದ ಭಕ್ತನ ಮೇಲ್ಮೆಯನೆ ಬಯಸಿ ||೯||

ಅರರೆ ಬಾಯ್ಕಳಿದೆದುರೆ ನಿಂದಿಹ
ಮರಣ ಭಕ್ತನ ಸೇವೆಯಿಂ ಹಿಂ
ಜರಿವ ಸಂಭವಮಿರಲು ತನ್ನಯ ಸಾವ ಲೆಕ್ಕಿಸದೆ |
ಕೊರಗುವನಲಾ ಭಕ್ತನೇಳ್ಗೆಗೆ
ಪರಮಹಂಸನ ಕರುಣೆಗಂ ಮಿತಿ
ಯಿರುವುದೇ ಗಡಮೆಂದು ಭಕ್ತರು ನಿಂದರೊಂದೆಡೆಗೆ ||೧೦||

ಮರಳಿ ಮುನಿಪಗೆ ತಿಳಿಯದಂದದಿ
ವಿರಚಿಸಾ ಲಕ್ಷ್ಮಣನು ಪತ್ರವ
ಭರದಿ ಕಳುಹಲು ಮೇಲಣಧಿಕಾರಿಯದ ಮಾನಿಸದೆ |
ಕೆರಳಿದಂ ಬಲವಂತದಿಂ ಗುರು
ವರನ ಪದಗಳ ಶಿಷ್ಯನಗಲಿದ
ಸುರಿದುದಿರ್ವರ ಕಂಗಳಿಂದಲುಮಶ್ರುಧಾರೆಗಳು ||೧೧||

ಒಲ್ಲದಿಹ ಮನದಿಂದ ಲಕ್ಷ್ಮಣ
ನೆಲ್ಲೊ ನೋಡುತ ದಾಸ್ಯದಲಿ ಸುಖ
ವಿಲ್ಲೆನುತ ಕೆಳಗಿಳಿದು ಬರುತಿರಲಾರ್ಯರಾತನನು |
ಅಲ್ಲೆ ಮಾರ್ಗದಿ ಕಂಡು ಹೇಗಿಹ
ನೆಲ್ಲಿಹಂ ಮುನಿನಾಥನೆನ್ನುತ
ಚೆಲ್ಲುತಿಹ ಕಳವಳದಿ ಕೇಳ್ದರು ಭೀತಮನದಿಂದ ||೧೨||

ಅದಕೆ ಲಕ್ಷ್ಮಣದಾಸ ಸಲೆಗ
ದ್ಗದದಿ ಪೇಳುವೆನೇನನಕ್ಕಟ
ಸದಯ ಮುನಿಪನ ನಾಲ್ಗೆಮಸ್ತಕ ಕೊರಳುಮುಖಗಳಲಿ |
ಪದದಿ ತೊಡೆಯಲಿ ಬಾಹುಕರಗಳ
ಲುದಿತವಾಗಿವೆ ಗುಳ್ಳೆಗಳು ನೆರೆ
ರುಧಿರ ಬಸಿಯುತ್ತಿಹುದು ದೇಹದಲೆಲ್ಲ ಹಾಯೆಂದ ||೧೩||

ತೊಟ್ಟು ಜಲಸಹ ಬಹಳ ಕಷ್ಟದಿ
ಮುಟ್ಟುವುದು ಗಂಟಲನು ದೇಹವೊ
ಸುಟ್ಟವೊಲು ಸೀದಿಹುದು ಕರಳನು ಚಿಮ್ಮಟಿಂಗಳಲಿ |
ಮೆಟ್ಟದೊಲ್ನೋಯಿಸುವ ಕೆಮ್ಮುಗ
ಳೊಟ್ಟಗೆಯೆ ಬರುತಿಹವು ನಾನಾ
ದಿಟ್ಟ ಮುನಿಪನ ಕಷ್ಟ ಬಣ್ಣಿಪೆನೆಂತೊ ಹಾ ! ಎಂದ ||೧೪||

ಆದೊಡಂ ಮುನಿವರ್ಯ ಕೋಮಳ
ಮಾದ ನಗೆಗಳಬಿಡನು ವದನದಿ
ವೇದನೆಯ ತೋರಿಸನು ದೇವಸ್ತುತಿಯ ವರ್ಜಿಸನು ।
ಆದುದಾಗಲಿ ನೀವುಗಳದೆಂ
ತಾದೊಡಂ ಯತಿವರನನೊಪ್ಪಿಸಿ
ಸಾಧಿಸಜಮೀರಕ್ಕೆ ಕರೆತರಲುಳಿವರವರೆಂದ ॥೧೫॥

ನುಡಿಯುತೀಪರಿ ವೈದ್ಯ ಕಂಬನಿ
ಮಿಡಿದು ನಡೆದನು ಜೋಧಪುರದಾ
ಪೊಡವಿಪಾಲ ಪ್ರತಾಪಸಿಂಹನ ಕಳುಹಲವಬಂದು ।
ಅಡಿಗೆರಗಿ ದುಃಸ್ಥಿತಿಯ ನಿಟ್ಟಿಸಿ
ನಡುಗುತಲಿಮುದಾರ್ನಖಾನನ
ನಡೆಯಲಿರೆ ಸಂದೇಹ ಪೇಳಿರಿ ಮುನಿಪ ತಾವೆಂದ ॥೧೬॥

ಔಷಧದಿ ವಿಷವಿತ್ತನೆಂಬೀ
ಭಾಷಣವ ನಂಬುವಿರೆ ಸದ್ಗುಣ
ಭೂಷಣರೆ ನಾವವಗೆ ದಂಡವವಿಧಿಪೆವೆಂದೆನಲು ।
ರೋಷವೇಷಕೆ ನಿಮಗೆ ಯತಿಪದ
ಭೂಷಿತರು ನಾವೆಮಗೆ ಮಿಗೆ ಸಂ
ತೋಷ ನರರೇನೇನೆ ಗೈದೊಡಮೆಂದನಾ ಮುನಿಪ ॥೧೭॥

ಮುನಿಪಗಲ್ಲಿ ಚಿಕಿತ್ಸೆ ಮಾಡಿಪ
ಮನವಿರಲುಮುತ್ಸುಕರು ಭಕ್ತರು
ವಿನಯದಿಂ ಲಕ್ಷ್ಮಣನ ಸೇವಾಭಾಗ್ಯದಾಶೆಯಲಿ |
ವಿನತರಾಗಾಗ್ರಹಿಸೆ ವರಯತಿ
ಜನಪನಜಮೀರಪುರಕ್ಕೈತಂ
ದನು ಸಹಸ್ರರು ನೆರೆದು ಹಾರ್ದಿಸರೆ ಭದ್ರದರ್ಶನವ ||೧೮||

ಬಂಡಿ ಬಂದುದು ನರಳಿ ಜರ್ಜರ
ಗೊಂಡ ಯತಿವರ ಜನರ ಸೇವೆಗೆ
ಕೊಂಡೆ ತನುವನು ಸೇವೆ ಸಲ್ಲಿಸಲಾರೆನದರಿಂದ |
ದಂಡವಿದು ನನಗೀಗ ನೀವಿದ
ಕೊಂಡೊಗೆಯಿರೆಂಬಂತೆ ತಾಂ ಹೊಗೆ
ವಂಡಿಯಿಳಿದನು ಮಲಗಿ ನಾಲ್ವರ ಕರತಳದಮೇಲೆ ||೧೯||

ಕಳೆಯಳಿದ ಮುನಿವರನ ದುಃಸ್ಥಿತಿ
ಗಳಲಿ ನೊಂದಾ ಭಕ್ತ ಸಂಕುಲ
ಮಿಳಿಸಿದುದು ಶುಭಸೌಧವೊಂದರಲಾ ಬಳಿಕ ನಯದಿ |
ಕುಳಿತು ಲಕ್ಷ್ಮಣದಾಸನೌಷಧ
ಗಳನು ದಿನದಿನ ಕೊಡುತಲಿರ್ದನು
ಬೆಳೆದುದಾದೊಡೆ ರೋಗ ಯತಿವರನಿಳಿದ ದಿನದಿನಕೆ ||೨೦||

ನಾಳನಾಳದಿ ಹರಿದು ತಿಕ್ಕಿದ
ಕಾಳಕೂಟದ ವಿಷಮುವಿಷ ವಿಕ
ರಾಳರೂಪವ ತೋರಿ ಮೈಯುರಿ ಪೆರ್ಚಿದುದು ಬಿಡದೆ ।
ತಾಳಲಾಗದ ಕೆಮ್ಮು ಕರುಳನೆ
ಕೀಳುತಿರ್ದುದು ದಗೆಗಳಾಜ್ವಾ
ಲಾಳಿಜಠರದಲುಕ್ಕಿ ಬಿಗಿದುದು ಶ್ವಾಸಪ್ರಶ್ವಾಸ ॥೨೧॥

ಹದಗೆಡುತ್ತಿರೆ ದೇಹ ವಂದಿತ
ಪದ ಸಹಸ್ರದ ಶಾಲನೊಂದನು
ಮುದದಿ ತರಿಸದ ಭಕ್ತಲಕ್ಷ್ಮಣಗೀಯಲಾ ವೈದ್ಯ ।
ಸದನದಲಿ ಧನವಿರಲು ಗುರುವರ
ಮುದದಿತವ್ಮೊಂದೊಂದು ಓಮಕ
ಪೊದಗಿಸರ್ಪಿಸುತಿರ್ದೆ ಸಾಸಿರವೆಂದ ಗದ್ಗದದಿ ॥೨೨॥

ಎಂದ ಭಕ್ತರ ನುಡಿಗಳ ದಯಾ
ನಂದನಾಲಿಸಿ ಪರಮ ಸಂತಸ
ದಿಂದಲಾರ್ಯರಿಗೀ ತೆರದ ನುಡಿ ಯೋಗ್ಯವೆಂದೆನುತ ।
ಬೆಂದಡವಿದನದೇಕೊ ನೇತ್ರಗ
ಳಿಂದಲಿರ್ವರಿಗಂ ದೃಗಂಬುಗ
ಳಂದು ಸುರಿದುದು ಮಂದಿ ನೋಡಿತು ಶೋಕಭರದಿಂದ॥೨೩॥

ರಾಜ ಸಜ್ಜನಸಿಂಹ ತದ್ಯತಿ
ರಾಜನಂ ನಿಟ್ಟಿಸಲು ಸೇವಾ
ರಾಜಿಸಲಿಸಲು ಕಳುಹೆ ಮೋಹನಲಾಲಪಾಂಡ್ಯನನು |
ಸಾಜನಯದಿಂ ಬಂದು ಪದಪಂ
ಕೇಜಯುಗ್ಮಕೆ ಮಣಿದು ಮೌನವಿ
ರಾಜಿಸಲು ಗದ್ಗದಗಳುಕ್ಕಲು ನಿಂತನೀಕ್ಷಿಸುತ ||೨೪||

ತಿದಿಯ ತೆರದಿಂ ಯತಿಜನೇಶ್ವರ
ನೆದೆಹೊಡೆವುದಂ ಶ್ವಾಸ ಪ್ರಶ್ವಾ
ಸದಲಿ ಗರ್ಗರನಾದಮುಪ್ಪುದ ಬೆಂಕಿಕೊಟ್ಟಂತೆ |
ಉದರ ಸುಡುವುದ ದೇಹದೆಲ್ಲೆಡೆ
ರುಧಿರ ಬಸಿವುದ ಭೀಮಕಾಯಂ
ಕದಿರಕಡ್ಡಿಯೊಲಿಹುದನೀಕ್ಷಿಸಿ ಪಾಂಡ್ಯಕಂಪಿಸಿದ ||೨೫||

ಕಾತರಿಸುತಾ ಪಾಂಡ್ಯನಕಟ ವಿ
ಧಾತನೇಗೈದಪನೊ ! ಭಾರತ
ಮಾತೆಭಾಗ್ಯವಿಹೀನೆಯಾದಳೆ ! ಹಾ ! ಎನಲು ಮುನಿಪ |
ಏತಕಳುವಿರಿ ಪಾಂಡ್ಯ ! ಜನಿಪುದು
ಭೌತದೇಹಂ ಮರಳಿ ಕೆಡುವುದು
ಮೀ ತಿರೆಯ ಧರ್ಮವಲೆ ! ಬರಿದೇ ಶೋಕವೇಕೆಂದ ||೨೬||

ನಡೆಯಬಾರದುದಾಗೆ ಸಂಕಟ
ಪಡುವುದಕೆ ಬೆಲೆಯುಂಟು ಕೂಡುತ
ಕೆಡುವುದಾಗುತಲಿಲ್ಲವೆನಿಪುದು ಘಟಿಸಿ ವಿಘಟಿಪುದು |
ಒಡಲ ನಿಯಮವೆಯಲ್ತೆ ಶೋಕಿಸ
ಲೆಡೆಯದೆಲ್ಲಿಹುದೆಂದು ಮುನಿವರ
ನುಡಿದನಾಗಳೆ ವೈದ್ಯ ನ್ಯೂಮನನತ್ತ ನಡೆತಂದ ||೨೭||

ಧಾಟಿಯಿಂ ನ್ಯೂಮನನು ಸಂತಕಿ
ರೀಟನಂಗಾಂಗಗಳ ಪರಿಕಿಸಿ
ನೋಟಕರ ಕಡೆ ತಿರುಗಿ ಕಂಪಿಸುತೇನು ಸಾಹಸವೋ |
ಕೀಟ ಕೊರೆದಿರೆ ನಗುವರಿವರಿಗೆ
ಸಾಟಿಯಹರಂ ವೈದ್ಯಕದ ಪರಿ
ಪಾಟಿಯಲಿ ನಾಂ ಕಂಡುದಿಲ್ಲೆಂದೊರೆದ ಕೌತುಕದಿ ||೨೮||

ಹರಿಹರಿದು ಕಟುರೋಗದಣುಗಳು
ತಿರುಳ ಕುಕ್ಕುತಲಿಹುವು ಜ್ವಾಲೆಗ
ಳುರಿದುರಿದು ದಿನರಾತ್ರಿ ತನುಪಂಜರವ ದಹಿಸುತಿವೆ |
ನಿರುಕಿಸಿದೊಡಂ ನಡುಕಮಹುದಾ
ದರೆ ಮಹಾತುಮರಿವರು ಶಾಂತಿಯ
ಲೊರಗಿಹರಲೇ ! ಎಂದು ನ್ಯೂಮನ ನಿಂತ ಬೆರಗಾಗಿ ||೨೯||

ಇಂದುವರಮೀ ದುಃಸ್ಥಿತಿಯೊಳಂ
ಸಂದ ಶಾಂತಿಯಲಿಂತು ಬದುಕೆ ವ
ಸುಂಧರೆಯಲಿವರೊಬ್ಬರಿಗೆಯೇ ಸಾಧ್ಯವೆಂದೆನುತ |
ಅಂದು ನ್ಯೂಮನ ಬೆರಳ ಮೂಗಿಗೆ
ತಂದು ನಿಲ್ಲಲು ಮುನಿವರ ದಯಾ
ನಂದ ಸರಸತಿ ಸ್ವಾಮಿಯಿವರೆಂದೊರೆದ ಲಕ್ಷ್ಮಣನು ||೩೦||

ಎಂದೊಡನೆ ನ್ಯೂಮನನು ಕುಳಿತ
ಲ್ಲಿಂದ ಜಗ್ಗನೆ ಮೇಲಕೇಳುತ
ಸಂದ ರೋಮಾಂಚದಿ ಮಹರ್ಷಿಸುಧಾರಕಾಗ್ರಣಿಗೆ |
ಬಂದುದೀ ಸ್ಥಿತಿಯೆಂತೊ ಭಗವನ್
ಎಂದು ಗದ್ಗದದಿಂ ವಿಷಾದಿಸೆ
ಮಂದಹಾಸದಿ ಸಂತವಿಸಿದನು ಯತಿ ದಯಾನಂದ ||೩೧||

ಪೀರನಾಮಕ ಯವನ ವೈದ್ಯನು
ಕಾರುಣಿಕ ಯತಿಪನ ಪರೀಕ್ಷಿಸಿ
ಯಾರೊ ದುರ್ಜನರೀ ಮಹಾಪುರುಷಂಗೆ ದಿಟವಾಗಿ |
ಘೋರತರ ವಿಷವಿತ್ತು ಸ್ವಕುಲಾಂ
ಗಾರರಾಗಿಹರೆಂದು ನುಡಿದನು
ಧೀರ ಮುನಿಪನ ದೇಹ ಜರ್ಜರವಾಯ್ತು ದಿನದಿನಕೆ ||೩೨||

ಅಂದು ಕಾರ್ತಿಕ ಕೃಷ್ಣಪಕ್ಷದಿ
ಸಂದಿರಲಮಾವಾಸ್ಯೆ ಭಕ್ತರ
ಮಂದಹಾಸದಿ ನುಡಿಸಿ ಮಾಡಿಸಿ ಭಕ್ಷ್ಯ ಭೋಜ್ಯಗಳ |
ಮಂದಿಗವುಗಳ ತಿನಿಸಿ ಸಂತಸ
ದಿಂದ ತಲ್ಪದಿ ಮಲಗಿಕೊಂಡನು
ಮಂದಿ ಸಂಜೆಯು ನಾಲ್ಕು ಗಂಟೆಯೆನುತ್ತ ಪೇಳಿದುದು ||೩೩||

ಮುನಿಪ ಕ್ಷೌರವ ಮಾಡಿಸುವೆವಾ
ವೆನಲು ಭಕ್ತರು ಜೀಯ ರಕ್ತದ
ಹೊನಲು ಹರಿವುದು ಹುಣ್ಣಿನಿಂದೆನೆ ಯತಿಪ ನೀವದಕೆ |
ಇನಿತು ಚಿಂತಿಸಬೇಡಿ ನಾಯಿಂ
ದನನು ಕರೆಯಿಸಿರೆಂದು ಪೇಳಿದ
ವಿನಯದಿಂ ನಾಯಿಂದನೊರ್ವನ ತಂದುದಾ ಮಂದಿ ||೩೪||

ಕ್ಷೌರ ಮಾಡಿಸಿಕೊಂಡು ತಾ ಬಿಸಿ
ನೀರಿನಿಂ ಸ್ನಾನವನು ಗೈದಾ
ಧೀರಮುನಿ ಕೌಪೀನಮೊಂದನು ಧರಿಸಿ ಶುಚಿಯಾಗಿ |
ಏರುದಿಂಬಿನಲೊರಗಿ ಜನಪರಿ
ವಾರವಂ ಕುರಿತೆಲ್ಲ ಹಿಂಗಡೆ
ಸೇರಿರೆಂದನು ಬೆನ್ನ ಬಳಿಯಲಿ ನಿಂದರಾ ಜನರು ||೩೫||

ಮುಂದೆ ನಸುಹೊತ್ತಿನಲಿ ಹಾಸಿಗೆ
ಯಿಂದಲೇಳುತ ಯತಿಪನಾತ್ಮಾ
ನಂದ ಬಾರ್ಪೈ ಬಯಕೆ ಯಾವುದು ಹೇಳು ನೀನೆನಲು |
ಅಂದು ಕಂಬನಿಗರೆಯುತಾತ್ಮಾ
ನಂದ ಭಗವನ್! ಬೇಕು ಮತ್ತೇ
ನೆಂದೆನಲಿ ತಮ್ಮಡಿಯ ಸಂಕಟ ತೀರೆ ಸಾಕೆಂದ ||೩೬||

ಎಂದ ಶಿಷ್ಯನ ಮಸ್ತಕವ ಕರ
ದಿಂದ ಸವರುತ ಯತಿಪನಕ್ಕರೆ
ಯಿಂದ ಬೇಗನೆ ಹರಿಯಲಿಪ್ಪುದು ನನ್ನ ಕ್ಲೇಶಗಳು |
ಸಂಧಿ ವಿರಹದ್ವಂದ್ವ ಬಿಡದೆದೆ
ಗುಂದದಿರು ಮೃತಿ ಸಹಜ ಸಾಹಸ
ದಿಂದ ನಿಜಕರ್ತವ್ಯ ಪಾಲಿಸೆನುತ್ತ ಬೋಧಿಸಿದ ||೩೭||

ಬಳಿಕ ಲಕ್ಷ್ಮಣದಾಸ ವೈದ್ಯನ
ಬಳಿಕರೆದು ನಿನ್ನೊಡನೆಯೇ ಗಿರಿ
ಯಿಳಿದಿರಲ್ಬರಿಯುತ್ತಲಿರ್ದುದು ನನ್ನ ರೋಗವಿದು |
ಇಳಿವುದೀಗಳುಮಾಮಯಂ ನೀ
ವಳಲ ಬೇಡಿರಿ ವಿಧಿಯ ನೇಮವ
ತಿಳಿದು ಶಾಂತಿಯ ತಾಳಿರೆಂದನು ಕಳವಳಿಸೆ ಮಂದಿ ||೩೮||

ಒಸಗೆಯಿಂ ನರನೊಬ್ಬ ಬೆಸಗೊಳೆ
ನಸುನಗೆಯಲಾ ಯತಿಪನೀದಿನ
ಬಿಸಿಲುಕತ್ತಲಭಾವಮಿದೆ ನನಗೊಳ್ಳಿತಹುದೆಂದು।
ಪಸರಿಸೆಲ್ಲೆಡೆ ನೇತ್ರಕಾಂತಿಯ
ವಿಸರವಂ ಕುಳಿತಲ್ಲೆ ಹಾಡಿದ
ದಸಮಕೋಮಳರುಚಿರದನಿಯಿಂ ವೇದಮಂತ್ರಗಳ ॥೩೯॥

ದನಿಯಲೆಳ್ಳಿನಿತಾದೊಡಂ ಕಂ
ಪನವೆ ತೋರದು ನುಡಿವ ಜೆಡಗಿನ
ಲಿನಿತು ಸ್ಖಲನಗಳಿಲ್ಲ ವದನದ ಕಾಂತಿ ಕುಂದಿಲ್ಲ।
ಮುನಿಪನೀಪರಿ ಕುಳಿತು ಮಂಚದಿ
ನಿನದಿಸುತ್ತಿರೆ ವೇದಘೋಷವ
ಮನೆಯಗೊಡೆಯನೊರಗಿ ಗುರುದತ್ತನದನೀಕ್ಷಿಸಿದ ॥೪೦॥

ಅರರೆ ಮೈಮೇಲೆಲ್ಲ ರಕ್ತವ
ಕರೆವ ಗಾಯಂಗಳಿವೆ ದೇಹವೊ
ಜರಡಿಯಂತಾಗಿಹುದು ಶ್ವಾಸಂಕೂಡ ಬಂಧಿಸಿದೆ।
ಕೆರಳುತಿದೆ ಜಠರದಲಿ ವೇದನೆ
ಪರಮಮುನಿವರನೀಸ್ಥಿತಿಯೊಳಂ
ತೊರೆಯನೇ ಹುಸಿನಗೆಯನೆಂದಾ ತರುಣ ಚಿಂತಿಸಿದ ॥೪೧॥

ಅರಲೆ ರಕ್ತದ ಕಣಕಣದಿ ವಿಷ
ಹರಿದು ಜೀವವ ಹಿಂಡುತಿದೆ ಮೇ
ಣ್ಮರಣ ಮುಂದೆಯೆ ನಿಂದಿಹುದು ಬಾಯ್ದೆರೆದು ನುಂಗುವೊಡೆ ।
ವಿರಜನಿವ ನಗುನಗುತ ಕುಳಿತಿಹ
ನಿರುಕಿಸಲು ತನು ಶಕ್ತಿಯಲ್ಲಿದು
ಪರಮಯೋಗವೆ ಸರಿಯೆನುತಲಾ ತರುಣ ಬೆರಗಾದ ॥೪೨॥

ಬಳಿಕ ಯತಿವರ ತನ್ನ ಕಂಗಳ
ಬೆಳಕನೆಲ್ಲೆಡೆ ಚೆಲ್ಲಿ ಮರುಚಣ
ದೊಳಗೆ ಧ್ಯಾನಸ್ಥಿತಿಗೆ ಸಂದಮರೋಕ್ತಿಯಿಂ ಪ್ರಭುವ ।
ತಿಳಿನಗೆಗಳಿಂ ಸ್ತುತಿಸಿ ಜನ ಸಂ
ಕುಳವ ನೋಡಿ ಸಮಾಧಿಯಲಿ ತಾ
ಕುಳಿತು ಹಲಚಣ ಬದ್ಧಪದ್ಮಾಸನದಿ ರಂಜಿಸಿದ ॥೪೩॥

ಮೌನದಿಂ ನಸುಹೊತ್ತು ವಂದ್ಯ ತ
ಪೋನಿಧಿಯು ಕುಳ್ಳಿರ್ದು ಬಳಿಕ ದ
ಯಾನಿಧಿಯೆ! ಹೇ ಸರ್ವಶಕ್ತನೆ! ಇದುವೆ ನಿನ್ನಿಚ್ಛೆ ।
ನಾನರಿದೆ ದಿಟವಾಗಿ ಸರ್ವ
ಜ್ಞಾನಿ ನಿನ್ನದೆಯಿಚ್ಛೆಯಿದು! ಓ
ಹೋ ನಿಪುಣ! ನಿನ್ನಿಚ್ಛೆ ತೀರಲಿ! ಎಂದ ಭಕ್ತಿಯಲಿ ॥೪೪॥

ದೇವದೇವನೆ! ಓಹೊ! ನನ್ನಯ
ದೇವ! ನೀನೀಗೊಳ್ಳೆ ಲೀಲೆಯ
ನೇ ವಿರಚಿಸಿದೆ! ಎನುತ ಗದ್ಗದಕಂಠನಾಗುಸುರಿ |
ಆ ವಿನೂತನ ಮುನಿಪ ಮೌನದ
ಲೋವಿ ಕುಳಿತನು ಭವನದೆಲ್ಲೆಡೆ
ಗಾವರಿಸಿದುದು ಭೀತಿ ಕಳವಳ ಶೋಕ ನೈರಾಶ್ಯ ||೪೫||

ಅರೆತೆರೆದ ಕಂಗಳಲಿ ಕಂಬನಿ
ಸುರಿದಿರಲು ರೋಮಾಂಚ ದೇಹದಿ
ಮೆರೆಯುತಿರೆ ಗದ್ಗದಿಸ ಕಂಠದಿ ದೀರ್ಘನಾದದಲಿ |
ಪರಮ ಪಾವನ ದೇವ! ಓಮೆನು
ತೆರಡು ಕರಗಳ ಚಾಂಚುತಾಹಾ!
ಕರುಣಿಸೆನ್ನುತನಂತಮೌನದಲೊರಗಿದಂ ಯೋಗಿ ||೪೬||

ಭವ್ಯತರದಧರದಲಿ ಸತ್ಕ
ರ್ತವ್ಯ ಮುಗಿಸಿದ ತೃಪ್ತಿಭಾವನೆ
ನವ್ಯ ಮಧುರದ ಮಂದಹಾಸವದಾಗಿ ಹೊಮ್ಮುತಿದೆ |
ದಿವ್ಯ ಜೀವನಯಾತ್ರೆಯಂ ಸ
ತ್ಯವ್ಯಸನದಲಿ ತೀರ್ಪ ಹೃದಯ
ಪ್ರವ್ಯಶಾಂತಿಯ ಭಾವ ವದನದಲುಕ್ಕಿ ಹರಿಯುತಿದೆ ||೪೭||

ತ್ರಿಳಿಯಿದೆಯ ಸಿಹಿಪ್ರೇಮ ಭರದಿಂ
ದೆಳೆಯಮಗು ತಾಯ್ಮಡಿಲನಪ್ಪುವ
ಕಳೆಯಲಾ ಋಷಿರಾಜನಾಹಾ! ಎನುತ ಬಾಹುಗಳ|
ಬೆಳೆಸಿ ಕುಡಿನಗೆ ಹೊಳೆಸಿ ತೇಜಗ
ಳಳಿದ ದೇಹವ ಬಿಸುಡೆ ದೇವನೆ
ಗೆಳೆಯನಿವಗೆನುತಿರ್ದ ಗುರುದತ್ತಂ ಕುತೂಹಲದಿ ||೪೮||

ಓಮೆನಲು ತೆರೆದಿರ್ದ ತುಟಿಯುಭಿ
ರಾಮ ಕೋಮಳ ಮಂದಹಾಸವ
ತಾ ಮೆರಸುತಿರೆ ಜೀವ ಪೋದೊಡಮಿನ್ನು ಕಂಗೆಮರೆ |
ಆ ಮುನಿಪ ಬದುಕಿರ್ಪನೆಂಬಂ
ತಾ ಮನುಜಸಂಕುಲಕೆ ತೋರಿತು
ಹಾ! ಮಹಾ ಮುನಿ! ಎಂಬ ರೋದನ ಮೊಳಗಿತಾಕ್ಷಣಮೇ ||

ಅಂದು ದೀಪಾವಳಿಯ ರಾತ್ರಿಗೆ
ಸುಂದಿ ಮನೆಮನೆಯಲ್ಲಿ ಹಣತೆಗ
ಳಂದಗೊಳಿಸುವ ಸಂಭ್ರಮದಲಿರೆ ಭಕ್ತ ಹೃದಯಗಳ |
ಮಂದಿರಂಗಳಲಂಧಕಾರವ
ಹೊಂದಿಸಾ ಮುನಿನಿಕರದೀವಿಗೆ
ನಂದಿಹೋದುದು ಸೂರ್ಯನೊಂದಿಗೆ ಪ್ರಾಗ್ದಿಗಂತದಲಿ ||೫೦||

ಹಾ ! ಪರಮಕರುಣಾಳು ಭಕ್ತರ
ತಾಪ ಹರಿಪುದನುಳಿದು ನೀನೇ
ಕೋಪದಿಂದೋಡಿದರೆ ನಮ್ಮನು ಮರ್ತ್ಯಲೋಕದಲಿ |
ಸೈಪಿಡುವರಾರಕಟ ನಮ್ಮಯ
ಪಾಪಗಳ ಸಲುವಾಗಿ ನೀನೇ
ಕೀ ಪರಿಯ ವಿಷಕುಡಿದೆಯೆಂದಳಲಿದರು ಮಂದಿಗಳು ||೫೧||

ಹಿಂದೆ ವಿಷವಿತ್ತವರ ಕ್ಷಮಿಸಿದ
ನಿಂದು ನಮ್ಮಲಿ ಮುಳಿದುದೇಕೈ
ನಿಂದಿಸಿದ ಮೂಢರನು ಹರಸಿದನಿಂದು ನಮ್ಮಗಳ |
ಬೆಂದೆದೆಯ ಸಂತವಿಸೆಯೇತಕೆ
ತಂದೆ ನಾವ್ನಿನ್ನಡಿಗೆ ಮಾಡಿದ
ಕುಂದದೇನೈ ! ಎನುತ ಗೋಳಾಡಿದರು ಮಂದಿಗಳು ||೫೨||

ಆರ್ಯ ದೇಶೋದ್ಧಾರ ಭಾಗ್ಯದ
ಸೂರ್ಯ ! ವಿಶ್ವಪ್ರೇಮಮೂಲೌ
ದಾರ್ಯ ! ಜಾತಿವಿಭೇದಖಂಡನಶೌರ್ಯ ಧಾರ್ಮಿಕರ |
ಧೈರ್ಯ ! ಚೇತನ ಪೂಜನೋದ್ಧೃತ
ಕಾರ್ಯ ! ಹಾ ! ಕರುಣಾಳು ! ಸಂಹೃತ
ನಾರ್ಯವಸಿಪಿಪದಾರ್ಯ ! ಪೋದೆಯ ! ಎಂದು ಮರುಗಿದರು ||೫೩||

ವೇದ ದಿನಮಣಿಯಸ್ತನಾದನೆ!
ನಾದರಿಯ ಸನ್ಯಾಸಿ ಮಡಿದನೆ!
ಹಾ! ದಯಾಂಬುಧಿ ಬತ್ತಿಪೋದುದೆ ಪ್ರಾಣಘಾತುಕರ |
ಕಾದ ಯೋಗೀಶ್ವರನು ಕಣ್ಮರೆ
ಯಾದನೇ! ಹಾ! ಭಾರತೋನ್ನತಿ
ಸಾಧಕಂ ಮರೆಯಾದನೇ! ಎಂದಳಲಿದುದು ನಂದಿ ||೫೪||

ಧೀರವೀರ ಮಹರ್ಷಿ ನಿನ್ನುಪ
ಕಾರಮೊಂದೆರಡೇನು ಧರ್ಮದ
ಸಾರವಂ ಬರಿ ಕಲ್ಪನಾಮಯಲೋಕದಿಂ ಬಿಡಿಸಿ |
ಧಾರುಣೀತಳಕಿಳಿಸಿ ತಂದ್ಯೆ!
ಕಾರುಣಿಕ! ನೀನಲ್ಲದೆಮ್ಮನ
ದಾರು ಮಾನವರೆನಿಸಿದರೊ! ಹಾ! ಎಂದರಳಲಿಂದ ||೫೫||

ನಾವು ದೀಪಾವಳಿಯ ವಿರಚಿಸೆ
ದೇವ! ದಿನಮಣಿ ಮುಳುಗಲೆಂಬೀ
ಭಾವ ತಾಳಿದೆವಾದೊಡೀ ಸುಜ್ಞಾನದಿನಮಣಿಯು |
ಆವೆಡೆಯೊ ಮರೆಯಾಗಲೆಂದೆವೆ
ಹಾ! ವಿಮಳದೀವಿಗೆಯೆ ನಂದಿರ
ಲಾವಪರಿ ಹಣತೆಗಳ ಬೆಳಗುವೆನೆಂದು ಕಂದಿದರು ||೫೬||

ಹಾ! ಸುತಾರಣ! ಪಾಪಹಾರಣ!
ಹಾ! ಸಕಾರಣ! ಭಯನಿವಾರಣ!
ಹಾ! ಸುಧಾರಣ! ಶೋಕ ಮಾರಣ! ಭವವಿದಾರಣನೇ |
ಹಾ! ಸದಾರಣ! ಸತ್ತ್ವಸಾರಣ!
ಹಾ! ಸುವಾರಣಗಮನ! ಮಾರಣ
ಹಾಸಕಾರಣದೇಹಧಾರಣ! ಎನ್ನುತಳಲಿದರು ||೫೭||

ಮಾರನೆಯ ಬೆಳಗಿನಲಿ ತಾ ಮೈ
ದೋರಿದನು ರವಿದೇವ ನೆರೆಗಂ
ಭೀರ ದುಃಖಾನ್ವಿತರು ಭಕ್ತರು ಧರ್ಮಬಾಂಧವರು |
ಸೇರಿದರು ತಪ್ಪವನದಲ್ಲಜ
ಮೀರಪುರವೇ ಕೂಡಿತಂದಾ
ದ್ವಾರದಲಿ ಮುನಿಪಾಲನಂತಿಮದರ್ಶನಾತುರದಿ ||೫೮||

ಆರ ಮೊಗದೊಳುಮತ್ತ ಕಾಂತಿಯ
ತೋರದೆಲ್ಲರ ಹೃದಯ ಶೋಕದ
ಭಾರದಿಂ ಕುಸಿದಿಹುದು ಗದ್ಗದಮುಕ್ಕಿ ಗಂಟಲಲಿ |
ಹೀರಿಹುದು ನುಡಿಗಳನು ದೃಗ್ಜಳ
ಧಾರೆ ಹರಿದಿಹುದೆಲ್ಲರಿಗೆ ಮುನಿ
ವೀರನಳಿವಿಂ ಬದುಕೆ ಮರಣದ ಬಿಂಬದಂತಿಹುದು ||೫೯||

ನೊಂದು ಬಿರಿದೆದೆಗಳನು ಹಸ್ತಗ
ಳಿಂದಲೊತ್ತುತ ಹಿಡಿದು ಶುಭಜಳ
ದೊಂದಿಗೆಯೆ ಕಂಬನಿಯ ಜಳವುಂ ಸೇರಿ ಬಿಸಿಯಾಗೆ |
ಅಂದು ಗುರುದೇವನ ಕಳೇಬರ
ವಂ ದುಗುಡದಿಂ ತೊಳೆದು ವಸ್ತ್ರಗ
ಳಿಂದ ಸಿಂಗರಿಸಿದರು ಭಕ್ತರು ಬಿಕ್ಕಿ ಬಿಕ್ಕಳುತ ||೬೦||

ಕದಳಿ ಪಚ್ಚೆಗಳಿಂ ವಿಮಾನವ
ಹದಗೊಳಿಸಿ ಬಗೆಬಗೆಯ ಹೂಗಳಿ
ನದನು ಸಿಂಗರಿಸುತ್ತ ಭಗವನ್! ಸ್ವಾಮಿ! ಹಾ! ಮುನಿಪ |
ಸದಯ! ಹಾ! ಎಂಬಾರ್ತನಾದಂ
ಹೃದಯಗಳನೊಡೆದೂರ್ಧ್ವಕೇರಿದು
ದದರ ಜೊತೆಯಲಿ ಮುನಿಶವವನೆತ್ತಿದರು ಮಂದಿಗಳು ||೬೧||

ವೇದಘೋಷಣವೊಂದುಕಡೆ ಕಟು
ರೋದನ ಧ್ವನಿಯೊಂದುಕಡೆ ನುತ
ಪಾದಗುಣಗಣಗಾನಮಿನ್ನೊಂದು ಕಡೆ ಗಗನವನು |
ವೇಧಿಸುತ್ತಿರೆ ಪುರಕೆ ಪುರಮೇ
ಬೀದಿಯಲಿ ನೆರೆದಿತ್ತು ನಗರವ
ಹಾದು ಬಂದುದು ರುದ್ರ ಭೂಮಿಗೆ ಶವದ ಮೆರವಣಿಗೆ ||೬೨||

ಚಿತೆ ಸುಸಜ್ಜಿತವಾಯ್ತು ಗಂಧದ
ಜೊತೆಗೆ ಶುಭವಾಸನೆಯ ಕಾಷ್ಠ
ಘೃತದ ಸಂಚಯವಾಯ್ತು ಕಂಪಿತ ಕರಗಳಿಂದೆತ್ತಿ |
ಯತಿಶವವ ಜನರದರಲಿಟ್ಟರು
ಚಿತೆಗೆ ಮುನ್ನಮೆ ಭಕ್ತರೆದೆಗಳು
ಸತತಮುಕ್ಕುವ ಶೋಕದನಳಂಗುರಿದುದಾಕ್ಷಣವೇ ||೭೪||

ಎಂತೊ ಭಕ್ತನದೊಬ್ಬ ಸಾಹಸ
ದಿಂ ತೆಗೆದು ಬೆಂಕಿಯನು ಕೊಟ್ಟನು
ಹಂತ! ಹಾ! ಗುರುದೇವ! ಹಾ! ಹಾ! ಸ್ವಾಮಿ! ಮುನಿನಾಥ |
ಸಂತ! ಎಂಬತಿಶೋಕನಾದಗ
ಳಂ ತೆಗೆದುಕೊಂಡಗ್ನಿಯೂರ್ಧ್ವದಿ
ಗಂತಕಡರಿದ ಜನರ ಕಂಬನಿಮಳೆಯ ಲೆಕ್ಕಿಸದೆ ||೭೫||

ಅಮ್ಮ ಭಾರತಿ! ನಿನ್ನ ಹೆರಳಿನ
ಕಮ್ಮಲರು ಬಾಡಿದುದು ಸೇರಗ
ಳಮ್ಮ! ನಿನ್ನಯ ಮುದ್ದುಕಂದನದೆತ್ತೊ ಪರಿಹಾರ |
ನಿಮ್ಮ ಪಥಿಲಿಖಿತಕ್ಕೆ ಬಿರಿದಿವೆ
ನಮ್ಮದೆಗಳಕಟೆಂಬ ಶೋಕರ
ವವೊಮ್ಮಳಗಿತೊಮ್ಮಲೆಗೆ ದುಃಖದ ಕಟ್ಟೆಯೊಡದಂತೆ ||೭೬||

ಆ ಜಗದ್ಗುರುವರ್ಯನಾತ್ಮದ
ತೇಜವೊದಲೇ ದೇವದೇವನ
ತೇಜವನು ಸೇರಿತ್ತು ತೇಜವಿಹೀನ ಕಾಯವದು |
ತೇಜಕೊಳಲೆಂಬಂತೆ ಬೆಂಕಿಯ
ತೇಜದಲಿ ಮರೆಯಾಯ್ತು ಯತಿಜನ
ರಾಜರಾಜೇಶ್ವರನ ಠೀವಿಗೆ ಸಾಮ್ಯವಿರದಾಯ್ತು ||೬೬||

ಅಂದು ನಸುಹೊತ್ತಿನಲಿ ಯತಿಶವ
ಬೆಂದು ಬೂದಿಯ ರಾಶಿಯಾದುದು
ಮಂದಿಯೆದೆಗಳು ಮಸಣವಾದುವು ಮಸಣಭೂಮಿಯಲಿ |
ನೊಂದು ಕಂಬನಿಮಿಡಿದು ಹಾ ಋಷಿ
ಎಂದು ಕನವರಿಸುತ್ತ ಬರಿಗೈ
ಯಿಂದ ನಡೆದರು ತಾಯನಗಲಿದ ಕರುಗಳೆಂಬಂತೆ ||೬೭||

ಸಾರಿ ಹತ್ತೊಂಬತ್ತು ಶತಕಂ
ತೀರಿ ನಾಲ್ವತ್ತಬ್ಧಿ ವಿಕ್ರಮ
ಧಾರುಣಿಯಲೈವತ್ತು ಮೇಲೊಂಬತ್ತು ವರ್ಷಗಳು |
ವೀರಗರ್ಜನಗೈದು ಯತಿಕಂ
ಠೀರವಂ ಕಾರ್ತಿಕದಿ ಮಂಗಳ
ವಾರದಲಮಾವಾಸ್ಯೆ ಸಂಜೆಗೆ ಸಂದ ಕಣ್ಮರೆಗೆ ||೬೮||

ಯತ್ಯವನಿಪನ ದೇಹವಳಿದರೆ
ನಿತ್ಯಯಶಕೇಂಹಾನಿ ಶಾಶ್ವತ
ಸತ್ಯದಾ ದ್ಯುತಿಗೆತ್ತಣದೊ ಸಾವಮಳ ಲೋಕದಲಿ |
ಸ್ತುತ್ಯಪಾವನ ಹೃಜ್ಜಲಧಿಯನ
ಗತ್ಯಮಿಂದುಂ ಸೆಳೆದೆ ತೀರ್ಚುವ
ಸತ್ಯಕಾವ್ಯಾಂಬುಧಿ ಸುಧಾಕರ ಹರಸೆ ಪರಮಾತ್ಮ ||೬೯||

|| ಇಂತು ಇಪ್ಪತ್ತೆರಡನೆಯ ಸಂಧಿ ||



# ಇಪ್ಪತ್ತ್ಮೂರನೆಯ ಸಂಧಿ

**ಸೂಚನೆ—ಇನ್ನೆಗಂ ಋಷಿವರರ ಜೀವನ
ವನ್ನೊರೆದೆ ಕಾವ್ಯಾಂತ್ಯ ಭಾಗದ
ಲಿನ್ನವನ ವ್ಯಕ್ತಿತ್ವ ಧರ್ಮಂಗಳನು ಬಣ್ಣಿಪೆನು॥**

ತರಳರೇ ಋಷಿವರನು ತನ್ನಯ
ತರುಣತನವಲೆ ಸಾವಗೆಲ್ಲುವ
ಪರಿಯರಿಯೆ ಕಾಂತಾರಗಿರಿಗುಹೆನದಿನದಂಗಳಲಿ।
ತಿರುತಿರುಗಿ ಯೋಗಿಗಳ ಪದದಲಿ
ಪರಮತತ್ತ್ವವ ಗಳಿಸಿ ತಪದಲಿ
ಮೆರೆದು ದೈಹಿಕಮಾನಸಾತ್ಮಿಕಕಾಂತಿಯಾಂತೆಸೆದ ॥೧॥

ಹುಟ್ಟನಿಂದಲೆ ಹೊಳೆವ ದೇಹದ
ಕಟ್ಟಚಲ ಸದ್ಬ್ರಹ್ಮಚರ್ಯದ
ದಿಟ್ಟತೇಜದಿ ಪುಟಕೆ ಹಚ್ಚಿದ ಚಿನ್ನದಂದದಲಿ।
ದಿಟ್ಟಿಯನೆ ಕೋರೈಸುತಿರ್ದುದು
ಜಟ್ಟಿಗಳ ಸಹ ನಾಚಿಸುವ ಮೇ
ಲ್ಮಟ್ಟದಾ ದೇಹದಲಲೌಕಿಕ ಶಕ್ತಿರಂಜಿಸಿತು ॥೨॥

ಹೊಳೆಹೊಳೆವ ಕಾಂತಿಗಳ ನೆರೆಚಂ
ಚಳ ವಿಶಾಲಾಕ್ಷಗಳು ತುಂಬಿದ
ಕಳೆಯ ತೊಳಪಿನ ನುಣ್ಗದಪುಗಳು ಕನ್ನಡಿಯಕೂಡ |
ಹಳಿನಗಲಮುಹ ನೊಸಲು ತಪೆ ಥಳ
ಥಳಿಪ ಪಂತದ ಪಜ್ತಿಗಳು ಕುಣಿ
ಪೆಳನಗೆಯ ಕೆಂದುಟಗಳಂದದ ನಾಸಿಕದ ಬೆಡಗು ||೩||

ದಪ್ಪಮಾಗಿಹ ಕೊರಳು ಮೈಸಿರಿ
ಗೊಪ್ಪುವಂದದ ಪೀನ ವಕ್ಷಂ
ಕುಪ್ಪಳಿಸುತಿಹ ಜಾನುಚುಂಬಿತ ಪುಷ್ಟಬಾಹುಗಳು |
ಇಪ್ಪತೋರದ ತೊಡೆಗಳತಿಶಯ
ಮಪ್ಪ ಬಲಯುತಮೀನಖಂಡಗ
ಳೊಪ್ಪುತಿಹ ಕಾಲುಗಳು ಭವ್ಯಾಕೃತಿಯ ಪಾದಗಳು ||೪||

ಅಡಿಯ ನಖದಿಂ ಪಿಡಿದು ನೆತ್ತಿಯ
ಮುಡಿಯನಕಮಾವೆಡೆಯೊ ನಿಟ್ಟಿಸಿ
ದೊಡಮುಚಳ ಸದ್ಬ್ರಹ್ಮಚರ್ಯದ ದಿವ್ಯಕಾಂತಿಗಳೆ |
ಬಿಡದೆ ತೊಟ್ಟಿಡುವಂತೆ ರಂಜಿಸಿ
ದೊಡಲ ತಾಳ್ದಾಋಷಿಜನೇಶ್ವರ
ಪೊಡವಿಯಲಿ ಮೈಯಾಂತ ಶಕ್ತಿಯ ತೆರದಿ ವಿಚರಿಸಿದ ||೫||

ಸ್ಫಟಿಕಸಮನಹ ಶುದ್ಧಹೃದಯದಿ
ಸ್ಫುಟಿತ ಮಧುರಪ್ರೇಮದಯೆಗಳು
ಮಿಟಕಿಸುವ ಕಂಗಳಲಿ ದೈವಿಕ ಶಾಂತಿಕಾಂತಿಗಳು ।
ತುಟಿಗಳಲಿ ಬಾಡದಿಹ ಸಿಹಿನಗೆ
ದಿಟಕೆ ತನುವೀಡಾಡಿ ಖತಿಯಿಂ
ಸಟೆಯಸದೆಯುವ ಕೆಚ್ಚುಚಿತ್ತದಿ ಸತತಮುಕ್ಕುವುವು ॥೬॥

ಮೊದಲು ಗಂಗಾತಟವ ಪರ್ಯಟ
ನದಲಿ ಋಷಿವರ ಬರಿಯಕೌಪೀ
ನದಲೆ ತನ್ನಂಗವನು ಸಿಂಗರಿಸುತ್ತ ಹಗಲಿರುಳು ।
ಉದಿಪ ಹೇಮಂತದಲಿ ಮೇಣ್ಗ್ರೀ
ಷ್ಮದಲಿ ಸಹ ನದಿಮಳಲ ಮೇಲೆಯೆ
ಮುದದಿ ಮೆರೆದನು ಬಿಸಿಲುಚಳಿಗಾಳಿಗಳ ಲೆಕ್ಕಿಸದೆ ॥೭॥

ವಿನುತ ಜನಸೇವೆಯಲಿ ತದೃಷಿ
ಜನಪ ತೊಡಗುವ ಮುನ್ನ ತಪಸಂ
ಜನಿತ ದಿವ್ಯಾತ್ಮಿಕಸುತೇಜಂ ಹೃದಯರಂಗವನು ।
ಅನುಪಮ ಪ್ರೇಮಾಮೃತದ ಬಿರು
ವನಧಿಯಾಗಿಸೆ ಭೇದವೆಸಗದೆ
ಮನುಜಮಾತ್ರರಿಗಮಳ ಧರ್ಮವ ತಿಳಿಪೆ ನಡೆತಂದ ॥೮॥

ಮಧುವ ಸ್ರವಿಸುವ ಮಕ್ಷಿಕಾಕುಲ
ಕುದಿದು ಕಡಿವಂತನವರತ ಮೃದು
ಮಧುರ ವಚನಾಮೃತವ ಸುರಿಸುವ ಮುನಿಪನಾ ಜಿಹ್ವೆ |
ಅದುಮಿ ಸತ್ಯವ ಹರಡಿ ಸುಳ್ಳನು
ಮುದಿಸ ವಾದಿಯ ಮುಂದೆ ಖಂಡನ
ಪದಗಳಂ ತೆಗೆತೆಗೆದು ತೂರುವುದಮಿತಬಲದಿಂದ ||೯||

ತಂದು ಶೀತಳ ಜಲವ ತಂಪನು
ಮಂದಿಗೆರೆಯುವ ಮೇಘರಾಜಿಯೆ
ಬಂದೆರಗುವಾ ಸಿಡಿಲನುಂ ಸಹ ಹುಟ್ಟಿಸಂದದಲಿ |
ನೊಂದವರ ಕಂಡೊಡನೆ ಕಂಬನಿ
ತಂದಿಳಿಪ ಮುನಿವರನ ಕಂಗಳು
ಮುಂದೆ ಕಾಣಿಸೆ ದಂಭ ಕೆಂಗಿಡಿಗಳನು ಕಾರುವುದು ||೧೦||

ಎಲ್ಲ ದುರ್ನಡೆಗಳನು ನಿಟ್ಟಿಸ
ಲಲ್ಲಿ ಕಿತ್ತೊಗೆವಲ್ಲಿಯುಂ ಸಹ
ಬಲ್ಲ ಮುನಿವರ ಮನುಜಪ್ರೇಮದ ಭಾವಮೊಂದುಳಿದು |
ಕ್ಷುಲ್ಲಕರ ಬಗೆಯಿಂದ ಹಾನಿಯ
ಸಲ್ಲಿಸಲು ಖಂಡನಕೆ ನಿಂದವ
ನಲ್ಲ ಸತ್ಯೋದ್ಧಾರವಾತನ ಜೀವಜೀವಾಳ ||೧೧||

ತನ್ನ ಸೌಖ್ಯವ ತೊಡೆದು ಯೋಗೋ
ತ್ಪನ್ನ ಮುಕ್ತಿಯ ತೋರಿದು ನರಕುಲ
ವನ್ನೆ ಮೋಕ್ಷಕೆ ಯೋಗ್ಯವೆನ್ನಿಪ ಗುರಿಗೆ ಮನಸೋತು |
ಖಿನ್ನರಾದವರಳಲ ತನ್ನಳ
ಲೆನ್ನುತಾ ಋಷಿವರನು ತೊಡೆದನು
ತನ್ನತನ ಪರತನದ ಭೇದವ ಕರ್ಮರಂಗವಲಿ ||೧೨||

ಬಳಿಕ ಋಷಿವರ ಕುಚ್ಚು ಹರಿದಿಹ
ಹಳದಿ ಪೇಟವ ಧರಿಸಿ ಕಾವಿಯು
ತಳೆದ ನೀಳ್ಗವಚವನು ಪೀತಾಂಬರವನಳವಡಿಸಿ |
ತಳೆದು ದಂಡವ ಕರದಿ ತನ್ನಡಿ
ಗಳಲಿ ಸೊಗಸಿರೆ ಪಾದರಕ್ಷೆಗ
ಳೆಳನಗೆಯ ಸೂಸುತ್ತ ನಡವನು ಸತ್ಸಭಾಸ್ಥಳಕೆ ||೧೩||

ಏಳಡಿಯ ಋಷಿರಾಜ ರಾಜಮ
ರಾಳಗತಿಯಿಂದಿಂತು ನಡೆದಿರೆ
ತಾಳಿದದ್ಭುತ ಕಾಂತಿಗಚ್ಚರಿಪಡೆದು ಹಾದಿಗರು |
ನೀಳವಾಗವನಡಿಯ ಪಿಡಿವರು
ಘಾಳಕಿರಿಸುತ ಕರವ ನತರ ಪ
ಯಾಳು ವತ್ಸರೆ ಸುಖಮಿರಲಿ ನಿಮಗೆಂದು ಹರಸುವನು ||೧೪||

ಸಭೆಗೆ ಋಷಿ ಬಂದೊಡನೆ ಸಾಸಿರ
ಸಭಿಕರತಿಶಯ ಭಕ್ತಿಭರದಿಂ
ವಿಭವಮಿಗೆ ಜಯಕಾರಗೈವರು ಬಳಿಕ ಋಷಿರಾಜ |
ನಭವನಿರಿವಾ ನಾದವಡಗಿಸ
ಲಿಭದ ಸೊಂಡಿಲಬೆಡಗ ಬಾಹುವ
ಶುಭತರದಿ ಮೇಲೆತ್ತಿತೂಗುವ ಸೂಸಿ ಹಾಸಿನಗೆಯ ||೧೫||

ಬಳಿಕ ವೇದಿಕೆಗಡರಿ ನಿಜಕರ
ಗಳನು ಜೋಡಿಸಿ ಕಾಂತಿಯುತಕಂ
ಗಳನು ಮುಚ್ಚುತ ಪರಮದೇವನ ಮಂಜುಳಸ್ವರದಿ |
ತಳಿತ ರೋಮಾಂಚದಲಿ ಸಂಸ್ತುತಿ
ಸಿಳಿಯುತಿರಲಾನಂದ ಬಾಷ್ಪಗ
ಳಿಳಿಸುವಂ ಜನರೆದೆಯ ಸಂತಾಪಾದಿ ಭಾವಗಳ ||೧೬||

ಮಂದಿ ವ್ಯೈಮರೆದಮಿತ ಶಾಂತಿಯ
ಲೊಂದೆರಡೊ ನಾಲ್ಕಾರೊ ಗಂಟೆಗ
ಳೆಂದೆನದೆ ಋಷಿರಾಜವರಬೋಧನಸುಧಾರಸವ |
ಒಂದೆಸಮ ಕುಳ್ಳಿರ್ದು ಕುಡಿವುದು
ಹೊಂದಿಸುತ ತಿಳಿಹಾಸ್ಯವಂ ಸಹ
ಸಂದೆಗಂಗಳ ಕಳೆದು ತಿಳಿಪನು ಗೂಢತತ್ವಗಳ ||೧೭||

ಬಂದವರು ಮುಸಲಿಮರೊ ಕ್ರೈಸ್ತರೊ
ಹಿಂದುಗಳೊ ಯುವಜನರೊ ವೃದ್ಧರೊ
ಎಂದು ಬಗೆಯದೆ ತಾನೆ ಜಗ್ಗನೆ ನಿಂತು ಕೈಮುಗಿವ ।
ವಂದಿಪನು ಸುಜ್ಞಾನಿಗಳೊ ಸಲೆ
ಮಂದಮತಿಗಳೊ ಎಂದೆನದೆ ನಯ
ದಿಂಪತಾನೇ ಸತ್ಕರಿಸುವನು ಸರಳ ಋಷಿರಾಜ ॥೧೮॥

ಯೋಗಿಗಳ ಮಧ್ಯದಲಿ ಯೋಗಿ ವಿ
ರಾಗಿಗಳ ಮಧ್ಯದಿ ವಿರಾಗ್ಯನು
ರಾಗಿಗಳಲನುರಾಗಿ ಪಂಡಿತರಲ್ಲಿ ಪಂಡಿತನು ।
ಈಗುರುವು ಭಕ್ತರಲಿ ಭಕ್ತನು
ಮಾಗಿ ಮಲ್ಲರ ನಡುವೆ ಮಲ್ಲನೆ
ಯಾಗಿ ಶಿಶುಗಳಮಧ್ಯೆ ಶಿಶು ತಾನಾಗಿ ರಂಜಿಪನು ॥೧೯॥

ವಿಷಮತಾಡನಗೈದವರ ವಾ
ಗಿಷುಗಳಿಂದೆದೆಗಿರಿದವರ ಕ
ಲ್ಮಷವನೆರಚಿದ ನರರ ತನ್ನಯ ರಕ್ತವನೆ ಬಸಿವ ।
ತೃಷಿತರಂ ತನ್ನಿರವ ಕೆಡಿಸಲು
ವಿಷವನಿತ್ತರಕೂಡ ಸಲಹಿದ
ಋಷಿವರಗೆ ಸಂಕುಚಿತಭಾವದ ಸೋಂಕದೆತ್ತಣದು ॥೨೦॥

ಇನ್ನು ತಪಳರಿ ನಮ್ಮೃಋಷಿವರ
ಮುನ್ನ ತಿಳಿಸಿದ ಧರ್ಮಸಾರವ
ಚೆನ್ನಮೆನೆ ಸಂಕ್ಷೇಪವಾಗಿಯೆ ನಿಮಗೆ ಬಣ್ಣಿಪೆನು |
ಖಿನ್ನಜೀವರ ಹಿತಕೆ ಬೆಳಗಿದ
ಹಿನ್ನೆಲೆಯ ವೇದಗಳ ಸತ್ಯವ
ಸನ್ನುತಾತ್ಮಕ ಮುನಿಪ ಸಾರಿದ ಮರಳಿ ಭೂತಳದಿ ||೨೧||

ಸರ್ವಗನು ಕರುಣಾಳ್ವನಂತನು
ಸರ್ವವಿದಜನ್ಮಕನು ನ್ಯಾಯಿಯು
ಸರ್ವಶಕ್ತಂ ಸೃಷ್ಟಿಕರ್ತನು ಧರ್ತಸಂಹರ್ತ |
ಸರ್ವ ಜೀವರ ಕರ್ಮಗಳಿಗಂ
ಸರ್ವದಾ ಫಲವೀವ ದೇವನ
ದೊರ್ವನೇ ಬ್ರಹ್ಮಾದಿ ಪದಲಕ್ಷಿತನು ಪರಮಾತ್ಮ ||೨೨||

ಕಾರುಣಿಕ ಪರಮಾತ್ಮ ವಿಭ್ವಾ
ಕಾರಹೀನನು ಭುವಿಯಲವನವ
ತಾರವಾಗದು ಮೊದಲೆ ಸರ್ವತ್ರವಿಹ ಕಾರಣದಿ |
ಮೂರುತಿಗಳಂ ಪೂಜಿಪುದು ತ
ನ್ಮೂರುತಿಗಳರ್ಚನೆಯೆ ಹೊರತಿ
ನ್ನಾರ ಪೂಜೆಯುಮಲ್ಲ ಜಡಪೂಜನದಿ ರಸವಿಲ್ಲ ||೨೩||

ಆವನಿಚ್ಛಾದ್ವೇಷ ಸುಖದುಃ
ಖಾವರಿತಜ್ಞಾನಾದಿ ಗುಣಯುತ
ನಾವನಲ್ಪಜ್ಞಾನಿಯಮರಂ ಮೇಣು ಗತಿಯುತನು ।
ಜೀವನು ಪರಿಚ್ಛಿನ್ನವನೇ
ಜೀವದಿರಸಂಖ್ಯಕರು ಭಿನ್ನರು
ತಾವು ವೈಧರ್ಮ್ಯದಲಿ ತಿಳಿಯಲ್ಬ್ರಹ್ಮನಿಂ ದಿಟದೆ ॥೨೪॥

ವೇದ ಮತಕನುಸಾರವೀಶನ
ನಾದಿ ಜೀವರನಾದಿ ಪ್ರಕೃತಿಯ
ನಾದಿ ಶಾಶ್ವತಮಹವು ಮೂರುಂಭಿನ್ನತತ್ವಗಳು ।
ಆದ ಸಂಯೋಗಂ ವಿಯೋಗಮ
ನಾದಿ ವಿಘಟನಘಟನ ಶಕ್ತಿಯ
ನಾದಿ ಭಾವಿಸಲಾಪ್ರವಾಹದ ತತ್ವಯೋಗದಲಿ ॥೨೫॥

ಸತ್ಯವಾಲೋಚಿಪುದು ಚಿತ್ತದಿ
ಸತ್ಯವಂ ಪೇಳುವುದು ವಚನದಿ
ಸತ್ಯವಾಚರಿಸುವುದು ದಿನದಿನ ತನ್ನ ಜೀವನವಿ ।
ಸತ್ಯರೂಪ ಮಹೇಶ ಪುತ್ರರ
ನಿತ್ಯವುಂ ಪ್ರೀತಿಪುದು ಮೋಕ್ಷದ
ಸತ್ಯಸಾಧನಗಳಿವನಾಶ್ರಯಿಸುವುದು ಮಾನವರು ॥೨೬॥

ವೇದನಾಲ್ಕು ಸ್ವತಃ ಪ್ರಮಾಣಗ
ಳಾದವುದು ಮೋಣ್ಸದ್ಧಿವುದು ಮ
ರ್ಯಾದೆ ಮತ್ತುಳಿದನ್ಯಶಾಸ್ತ್ರಾವಳಿಗೆ ತದ್ವಚನ ।
ವೇದಮತಕನುಕೂಲವಾಗಿರೆ
ಮೇದಿನಿಗೆ ಪರತಃಪ್ರಮಾಣದ
ಬೋಧವೀಪರಿ ಸತ್ಯನಿರ್ಣಯಕೆಂದು ಭಾವಿಪುದು ||೨೭||

ಅರಿಯೆ ಲೋಕದಿ ಪಕ್ಷಪಾತಗ
ಳಿರದ ನ್ಯಾಯಾಚರಣ ಸತ್ಯೋ
ದ್ಧರಣ ಮೊದಲಹ ವೇದಘೋಷಿತ ಕರ್ಮಗಳೆ ಧರ್ಮ ।
ಮರಳಿ ಭಾವಿಸೆ ಪಕ್ಷಪಾತದಿ
ಬೆರೆತ ನ್ಯಾಯುವಿನಾಶ ಮಿಥ್ಯಾ
ದರಣ ಮೊದಲಹ ನಿಂದ್ಯಕರ್ಮವಧರ್ಮವೆನ್ನಿಪುದು ||೨೮||

ಅರಿಯೆ ಬ್ರಹ್ಮಕ್ಷತ್ರ ವೈಶ್ಯರ
ಮರಳಿ ಶೂದ್ರರ ವರ್ಣಗಳು ತಾ
ವ್ಧರಣಿಯಲಿ ಹುಟ್ಟಿಂದ ಬಾರವು ಕರ್ಮದಿಂ ಬಹವು ।
ನರರು ಬಿಡದಾ ಬ್ರಹ್ಮಚರ್ಯವ
ಮರಳಿ ಗಾರ್ಹಸ್ಥ್ಯವನು ತದನಂ
ತರದಿ ವಾನಪ್ರಸ್ಥ ಸನ್ಯಾಸಗಳ ಪಾಲಿಪುದು ||೨೯||

ಜ್ಞಾನವಿಲ್ಲದ ಕರ್ಮ ದೀಪವಿ
ಹೀನ ಸದನಂ ಕರ್ಮವಿರದಾ
ಜ್ಞಾನ ಮರುವನದಲ್ಲಿ ಚೆಲ್ಲದ ಚಂದ್ರನಾ ಕಾಂತಿ ।
ಜ್ಞಾನಕರ್ಮವಿಹೀನ ಭಕ್ತಿಯೊ
ಕಾನನಾಕ್ರಂದನವು ಭಕ್ತಿವಿ
ಹೀನ ಕರ್ಮಜ್ಞಾನಗಳು ರಸಹೀನ ಕೃತಿಗಾನ ॥೩೦॥

ಆದ ಕತದಿಂ ಮೋಕ್ಷಕಾಮನೆ
ಯಾದವಂ ನಿಜ ಜೀವನದಿ ಸಮ
ಮಾದ ಪರಿಯಿಂ ಜ್ಞಾನಕರ್ಮೋಪಾಸನಾತ್ರಯವ ।
ಆದರಿಸುವುದೆ ಯುಕ್ತಮಿದನೇ
ವೇದಗಳು ಸಾರುತಿವೆ ಯಾವುದೆ
ಪೋದೊಡಂ ಪರಿಪೂರ್ಣವಾಗದು ಧರ್ಮ ವಾಸ್ತವದಿ ॥೩೧॥

ಆ ಸನಾತನ ಧರ್ಮವನೆ ಸ
ನ್ಯಾಸಿವರ ಮತ್ತಿಂತು ಬೋಧಿಸಿ
ವಾಸಿದಾ ಸದ್ರತ್ನವಂ ಮೇಲೆತ್ತಿ ಧೂಳ್ಕೊಡಹಿ ।
ನೇಸರಗವಾ ವೇದ ಸತ್ಯದ
ನೇಸರಗವೊಬ್ಬಗೆಯ ಸಾಮ್ಯವ
ನೇ ಸಲಿಸಿ ತಾಂ ಕೂಡ ಮೂರನೆ ನೇಸರನೆಯಾದ ॥೩೨॥

ತಮ್ಮದಿರಿ ಮತ್ತೇನ ಪೇಳಲಿ
ನಮ್ಮ ಋಷಿವರ ಜಲಧಿಸದೃಶ
ಸುಮ್ಮನಿವನಾಳವನು ತಿಳಿಯಲು ಸಾಧ್ಯವೆಮಗಲ್ಲ |
ಒಮ್ಮೆ ಸಾಹಸಮಾಡಿ ದೇವನ
ನೆಮ್ಮಿ ಧುಮುಕೊಂದೆರಡು ರತ್ನವ
ನಿಮ್ಮ ಕೈಗಿಡೆ ತಂದೆ ಧರಿಸಿರಿ ಪ್ರೇಮದಿಂದಿದನು ||೩೩||

ಇಂದುವಿಲ್ಲದ ರಾತ್ರಿ ಕವಿತೆಯ
ನಂದವಡಿಸದ ಹೃದಯ ದಿವ್ಯಾ
ನಂದ ಕೊಡದಿಹ ವಿದ್ಯೆ ಕನ್ನಡ ನುಡಿಯದಾ ನಾಲ್ಗೆ |
ಮಂದಿಗಳಲದ ಚಿತ್ತ ಬಿಡುಗಡೆ
ಹೊಂದದಿಹ ನಾಡಂತೆಯೆ ದಯಾ
ನಂದ ತತ್ವಗಳಿರದ ಜೀವನವೆಂದು ಭಾವಿಸಿರಿ ||೩೪||

ಹೇ ದಯಾನಂದರ್ಷಿ ಪಾವನ
ಮಾದ ನಿನ್ನಯ ನೆನಪು ಬೀಳಲು
ಪೋದ ನನ್ನನದೆನಿತು ಸಲವೆತ್ತಿಹುದೊ ಮೇಲೆಂದು |
ಆ ದಯಾಕರನೊರ್ವನಂ ಬಿ
ಟ್ಟೇ ಧರೆಯಲಿನ್ನಾರು ಬಲ್ಲರು
ಮಾದರಿಯ ಗುರುದೇವ ನಿನ್ನೀ ಋಣಕೆ ಮಿತಿಯೇನು ||೩೫||

ನಿನ್ನ ಸಾಲವನೆಲ್ಲ ತೀರಿಸ
ಲೆನ್ನ ಬಳಿಯಿಹುದೇನು ನೀನೇ
ಮುನ್ನ ನನ್ನೀಹೃದಯವೀಣೆಯ ತಂತಿ ಮೀಂಟಿರುವೆ |
ನಿನ್ನದೇ ಸಂಗೀತ ನೀನೇ
ಸನ್ನುತನೆ ಕೇಳಿದನು ಹರಿಯಲಿ
ನನ್ನ ನಿನ್ನೀ ಋಣದ ಬಂಧನ ನಾನಳಿವ ಮೊದಲೇ ||೩೬||

ಕನ್ನಡಿಗರುಂ ಕನ್ನಡಿತಿಯರು
ಮೆನ್ನಕಾವ್ಯಕೆ ಮಾನವಂ ಕೊಡ
ರೆನ್ನುವಾಯಸಮೆನ್ನ ಚಿತ್ತಕೆ ಕನಸಿನೊಳುಮಿಲ್ಲ |
ಎನ್ನ ತಾಯವರಮ್ಮನಲ್ಲವೆ
ಮುನ್ನಮೆಲ್ಲರುಮವಳ ಪಾಲ್ಕುಡಿ
ದನ್ನೆಗಂ ಜೀವಿಸಿದೆವಲ್ಲದೆ ತನ್ನತನವಿರದೆ ||೩೭||

ದೇವವಾಗ್ವಧು ರಾಷ್ಟ್ರಜನಭಾ
ಷಾ ವನಿತೆ ಶಾಸಕರ ಸಿರಿವಾ
ಗ್ದೇವಿಯೆಂದರೆ ನಮ್ಮ ಕನ್ನಡದೇವಿಯೊಲ್ಪರರು |
ಈವರೇ ನಮಗಾಶ್ರಯವ ನಿಜ
ಜೀವನದ ಸವಿ ಸವಿಯೆ ಬೇರಿ
ನ್ನಾವ ನಾಲ್ಗೆಯೊ ನಮಗೆ ಕನ್ನಡಮುಕ್ಕಳಿದ ಪೇಳ ||೩೮||

ಕಬ್ಬುಸಿಹಿಯುಹುದಾದೊಡಂ ಸಿಗು
ರೆಬ್ಬಿಸೊಳವೊಳವೊಕ್ಕು ಜಗಿಯದೆ
ಹಬ್ಬವಾಗದು ನಾಲ್ಗೆಗಂತೆಯೆ ಋಷಿಯ ಜೀವನದ ।
ಕಬ್ಬವಿದು ಸಹಪೆಂದು ಭಾವಿಪು
ದಬ್ಬೆ ಕನ್ನಡ ದೇವಿಯಿರೆ ನಾಂ
ತಬ್ಬಲಿಯೆ ತಾಯ್ಕೊಡಳೆ ಕಂದಗೆ ಮಧುರ ವಾಣಿಗಳ ॥೩೯॥

ತಾಯಿಯಮೃತಬಾಯಿಯಮೃತ
ಬಾಯಿಗೆರೆಯಳೆ ಪುತ್ರಗಮೃತ
ನಾ ಯತಿಪನಮೃತಮೆಯಾತನ ಜೀವನದ ಕಾವ್ಯ ।
ಸಾಯದನ ಜೀವನವ ಹಾಡುವ
ಗಾಯಕಗೆ ಸಾವೆಲ್ಲಿ ಭೌತಿಕ
ಕಾಯವೇ ಸರ್ವಸ್ವವೆಂದರೆ ಕವಿಗೆ ಕಿವಿಯಿಲ್ಲ ॥೪೦॥

ಸಾವುಬಾಳುಗಳೆರಡುವೊಂದೇ
ಜೀವನದ ರೆಕ್ಕೆಗಳು ಕೀರ್ತಿಯ
ನಾವ ತನ್ನಯ ಹಿಂದೆ ಬಿಟ್ಟಪನವನೆ ಶಾಶ್ವತನು ।
ಆವ ಬಿಡನವ ಸತ್ತವನು ಗುರು
ದೇವನಂತೆಯೆ ಕೀರ್ತಿಗಳಿಸಲು
ನೀವು ಋಣದಿಂ ಮುಕ್ತರೆಂಬುದೆ ಮತ್ಕೃತಿಯ ಸಾರ ॥೪೧॥

ಹಬ್ಬವಾಗಲಿ ಸಕಲ ವಿಶ್ವಕೆ
ಹಬ್ಬವಾಗಲಿ ಜೀವ ಮಾತ್ರಕೆ
ಹಬ್ಬವಾಗಲಿ ಜೀವನವೆ ಋಷಿ ತೋರ್‍ದ ಸತ್ಯದಲಿ ।
ಉಬ್ಬಿ ಹರಿಯಲಿ ತಾನಸತ್ಯದ
ಮೊಬ್ಬು ಹರಿಯಲಿ ಸತ್ಯವಿರಲೀ
ಕಬ್ಬ ಹರಿಯಲಿ ಕನ್ನಡಿಗರಿಹ ನಮ್ಮ ಮನೆಮನೆಗೆ ॥೪೨॥

ಪಾರಮಾರ್ಥಿಕ ಸಾರ! ವಿದ್ಯಾ
ಗಾರ! ಭಕ್ತವಿಹಾರ! ವಿಶ್ವಾ
ಧಾರ! ಶುಭಗುಣಹಾರ! ಪ್ರೇಮೋದಾರ ದಾತಾರ ।
ಕಾರುಣಿಕ ಪರಿವಾರ! ಕವಿತಾ
ಸಾರ! ಜೀವರಿಗೆಲ್ಲ ಸತ್ಯಸು
ಧಾರಸವ ಸುರಿಸೈ ಸುಧಾಕರ ದೇವ ಪರಮಾತ್ಮ ॥೪೩॥

॥ ಇಂತು ಇಪ್ಪತ್ತಮೂರನೆಯ ಸಂಧಿ ॥

**॥ ಋಷಿ ಜೀವನ ಕಾವ್ಯಂ ಸಮಾಪ್ತಂ ॥**



# —: ತಿ ದ್ದು ಪ ಡಿ: —

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೬. | ೧೧. | ಆವುದನು ಮಾನೆಸಗೆ. | ಆವುದನುಮಾನೆಸಗೆ |
| ೮. | ೮. | ಕಿರಮೆ. | ಕಿರಿಮೆ. |
| ೧೮. | ೧೪. | ಗೊಂಡಿದ | ಗೊಂಡಿಹ. |
| ೨೩. | ೯. | ನಿನ್ನ ಯತರ್ಕ | ನಿನ್ನಯ ತರ್ಕ |
| ೩೩. | ೧೪. | ಉದಿಸಿದೆನ ನಂತರ | ಉದಿಸಿದೆನನಂತರ |
| ೩೮. | ೧೩. | ಕಡಿಗದ | ಕಡಿಗ ದ |
| ೪೮. | ೧೭. | ಯೌವ್ವನ | ಯೌವನ |
| ೫೯. | ೧೩. | ನನ್ನುದರದಿ | ನನ್ನನುದರದಿ |
| ೬೧. | ೫. | ದಾರಿ ವಿಡಿದೆನು | ದಾರಿವಿಡಿದೆನು |
| ೬೮. | ೧. | ಇನಿತನು | ಇನಿತನುಂ |
| ೮೧. | ೧೩. | ಎಲ್ಲಡೆ | ಎಲ್ಲೆಡೆ |
| ,, | ೧೪. | ಕುಳಿತು ಪ | ಕುಳಿತುಪ |
| ೧೦೨. | ೪. | ಪದವಿದೆ | ಪದವಿಡೆ |
| ೧೦೯. | ೧೩. | | |
| ೧೧೦. | ೧೭. | | |
| ೧೮೩. | ೬. | ತಟನಿ | ತಟನಿ |
| ೨೨೯. | ೬. | | |
| ೨೫೯. | ೩. | | |
| ೧೨೦. | ೯. | ಮಳ್ಳು | ಮುಳ್ಳು |
| ೧೩೭. | ೧೭. | ಮರಿತಿರಲು | ಮರೆತಿರಲು |

| | | | |
|---|---|---|---|
| ೧೪೨. | ೧೦. | ಅಂದು | ನಿಂದು |
| ೧೫೫. | ೧೧. | ಬರಿ | ಬರಿ ದು |
| ೧೬೪. | ೧. | ಸಂಜೆಪುಲಿ | ಸಂಜೆಯುಲಿ |
| ೧೬೬. | ೧೭. | ಥಳಿಪ | ಥಳಿಪ |
| ೧೮೬. | ೯. | ಎನುತ್ತ | ಎನ್ನುತ |
| ೧೯೭. | ೬. | ಎನ್ನುತ | ಎನುತ |
| ೨೨೨ | ೯. | ಪುರದಜನದ | ಪುರಜನದ |
| ೨೩೨. | ೧೧. | ಪಂಡಿ | ಪಂಡಿತ |
| ,, | ೧೩. | ಶಾಸ್ತ್ರ | ಶಾಸ್ತ್ರವಿ |
| ,, | ೧೪. | ವಿದಾವಸಥ | ದಾವಸಥ |
| ೨೪೦. | ೧೮. | ಅವರವತ್ತೈದು | ಅರವತ್ತೈದು |
| ೩೨೫. | ೧. | ಕವೇಶ್ವರ | ಕವೀಶ್ವರ |
| ೩೮೦. | ೮. | ಪೊದೆಡಾಗಳುಂ | ಪೊಡೆದಾಗಳುಂ |
| ೩೯೨. | ೩. | ಎನ್ನಿವುದು | ಎನ್ನಿಪುದು |
| ೪೧೨. | ೧. | ಒಂದಿಸು | ಒಂದಿನಿಸು |
| ೪೧೨. | ೧೬. | ಆವನದೊಡಂ | ಆವನಾದೊಡಂ |
| ೪೩೯. | ೧೦. | ಮಿಸೆಯ | ಮೀಸೆಯ |
| ೪೭೫. | ೧೫. | ಮಥೆರ | ಮಧುರ |
| ೪೭೭ | ೧೩. | ಅರ್ಯ | ಆರ್ಯ |



ಸಿಕ್ಕುವ ಸ್ಥಳ:—

**ಆರ್ಯಸಮಾಜ, ಶ್ರೀರಾಮಪುರ,**
ಪೋಸ್ಟ್ ಮಲ್ಲೇಶ್ವರಂ, ಬೆಂಗಳೂರು.

**ಆರ್ಯಸಮಾಜ, ಮಂಡಿ ಮೊಹಲ್ಲಾ,**
ಮೈಸೂರು.

---

Printed by
T. Narayan Proprietor Sri Sampathkumar Power
Press, Mysore and Published by Pt. Sudhakar,
Arya Samaj, Srirampur, Bangalore.